ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೩೬

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಭವಿಷ್ಯಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಭಾಗ—೬

## ಮಧ್ಯಮಪರ್ವ—ದ್ವಿತೀಯ ಸಂಪುಟ



ಅನುವಾದಕ

ಪಂಡಿತ ಬಿ. ಚನ್ನಕೇಶವಯ್ಯ

ಆಸ್ಥಾನ ವಿದ್ವಾನ್.

ಮೈಸೂರು

ಶ್ರೀ ಬಸವೇಶ್ವರ ಎಲೆಕ್ಟ್ರಿಕ್ ಪ್ರೆಸ್

೧೯೪೮

---

ಶೈವದರ್ಶನಕಾರರು ತಮ್ಮ ದರ್ಶನದಲ್ಲಿ ಪತಿ, ಪಶು. ಪಾಶ ಎಂದು ವಿಷಯ ವನ್ನು ಸಂಗ್ರಹವಾಗಿ ಮೂರು ವಿಧಗಳಾಗಿ ವಿಂಗಡಿಸಿರುವರು. ಅದರಲ್ಲಿ ಜ್ಞಾತೃತ್ವ, ಕರ್ತೃತ್ವ, ಭೋಕ್ತೃತ್ವರೂಪವಾದ ಶಕ್ತಿಯಿಂದ ಕೂಡಿದ ಜೀವಾತ್ಮನೇ 'ಪಶು' ಎಂದಿರುವುದು. ಸರ್ವಶಕ್ತಿಸಂಪನ್ನನಾದ ಪರಮೇಶ್ವರನೇ ಪತಿ ಎನಿಸುವನು. ಪಾಶ ಗಳನ್ನು ಪಂಚವಿಧಗಳನ್ನಾಗಿ ವಿಂಗಡಿಸಿ ಪಶುಗಳಿಗೆ ಪಾಶನಿವೃತ್ತಿಯಾದರೆ ಪತಿಸಾಮ್ಯ ಬರುವುದೆಂದು ತೀರ್ಮಾನಿಸಿರುವರು. ಅದರಂತೆ ಈ ಜೀವನಪ್ರಪಂಚದಲ್ಲಿ ಸ್ತ್ರೀ ಪುರುಷ ಭೇದದಿಂದ, ಚಾತುರ್ವರ್ಣ್ಯಾದಿ ವಿಭಾಗಕ್ರಮದಿಂದ, ಸ್ವಾಮಿಭೃತ್ಯಾದಿ ತಾರ ತಮ್ಯದಿಂದ, ತೋರಿಬರುತ್ತಿರುವ ಸಕಲ ಜೀವರಾಶಿಯೂ ಪಶುವರ್ಗವೆನಿಸುವುದು. ವ್ಯವಹಾರದಲ್ಲಿ ಪಶುಗಳೆನಿಸುವ ತಿರ್ಯಗ್ಜಂತುಗಳನ್ನು ಮಾನವನು ಪಳಗಿಸುವಂತೆ, ನಮ್ಮ ದರ್ಶನಕಾರರು ಮತ್ತು ಪುರಾಣ ಪ್ರವಚನಕಾರರು ನಮ್ಮನ್ನು ಅನೇಕ ಕಟ್ಟು ಕಟ್ಟಳೆಗಳಿಂದ ಬಿಗಿದು ದಾರಿಗೆ ತರುತ್ತಿರುವರು. ಸ್ವೇಚ್ಛೆಯಾಗಿ ಸಂಚರಿಸುತ್ತಿದ್ದ ಯಾವ ಪ್ರಾಣಿಗೇ ಆಗಲಿ ಅಡಚಣೆಯೊಂದನ್ನು ವಿಧಿಸಿದರೆ ಒಡನೆ ಆ ವ್ಯಕ್ತಿ ಉದ್ರೇಕ ಗೊಳ್ಳುವುದು. ಹಾಗೆ ಉದ್ರೇಕಗೊಳ್ಳುವ ಮುಂಚೆ ನಾವು ಆ ಅಡಚಣೆಯ ಸ್ವರೂಪ ವನ್ನು ಅರಿಯಬೇಕು. ನಾವು ಒಂದು ಮನೆಯನ್ನು ಕಟ್ಟಬೇಕಾದರೂ, ಒಂದು ವಿವಾಹವನ್ನು ಬೆಳೆಯಿಸಬೇಕಾದರೂ, ಒಂದು ಲೋಕೋಪಕಾರಕಾರ್ಯವೆಸಗಬೇಕಾ ದರೂ ಸ್ವೇಚ್ಛೆಯಾಗಿ ನಮ್ಮಿಷ್ಟದಂತೆ ನಡೆಯಿಸಲು ನಮ್ಮ ಧರ್ಮದ ಪ್ರಕಾರ ಸಾಧ್ಯ ವಿಲ್ಲ. ನಮ್ಮ ಇಷ್ಟಕ್ಕೆ ಸರಿಹೋಗದ ಅನೇಕ ಶಾಸ್ತ್ರನಿಯಮಗಳು ನಮ್ಮ ಎದುರಿಗೆ ಬಂದು ನಿಲ್ಲುತ್ತವೆ. ಕಾಲನಿಯಮ, ಕರ್ಮನಿಯಮ, ಕರ್ತೃನಿಯಮ ಮುಂತಾದ ಕಟ್ಟಳೆಗಳಿಗೆ ನಾವು ಅಧೀನರಾಗಬೇಕಾಗುತ್ತದೆ. ಆ ಅಧೀನತೆಗಾಗಿ ನಮ್ಮ ಮನಸ್ಸು ಬೇಸರಗೊಳ್ಳಬಹುದು. ವೇಗವಾಗಿ ಸಾಗುತ್ತಿರುವಾಗ ರಥಕ್ಕೆ ಒದೆಮರ ಕೊಡುತ್ತಿರ ಬೇಕು. ಪ್ರಕೃತದಲ್ಲಿ ನಮ್ಮ ಇಷ್ಟದಂತೆ ಅದು ಸಾಗುತ್ತಿದ್ದರೂ ಸ್ವಲ್ಪ ದಾರಿತಪ್ಪಿದರೆ ಅನರ್ಥಪರಂಪರೆಯೊದಗೀತು. ಅಂಥ ಅನರ್ಥವನ್ನು ಆ ಒದೆಮರ ತಪ್ಪಿಸುವುದು.

ಅದರಂತೆ ನಮ್ಮ ನಿತ್ಯಕರ್ಮವಾಗಲಿ, ನೈಮಿತ್ತಿಕಕರ್ಮವಾಗಲಿ ನಿಯಮಬದ್ಧವಾಗಿ ಸಾಗಬೇಕು. ಅದರಿಂದ ಫಲವುಂಟು. ಒಂದುವೇಳೆ ಫಲಪ್ರಾಪ್ತಿಗೆ ಪ್ರತಿಬಂಧಕಗಳೊದಗಿದರೂ ಅನರ್ಥವುಂಟಾಗಬಾರದು. ಮಾನವರ ಉದ್ಧಾರವನ್ನೇ ಗುರಿಯನ್ನಾಗಿ ಉಳ್ಳ ನಮ್ಮ ಪ್ರಾಚೀನರ ಕಟ್ಟುಕಟ್ಟಳೆಗಳನ್ನು ನಾವೇ ಪಾಲಿಸದೇಹೋದರೆ ಮತ್ತಾರು ಪಾಲಿಸಬೇಕು ? ಒಬ್ಬ ವ್ಯಕ್ತಿಯ ಜೀವಿತದ ಅಲ್ಪಕಾಲದಲ್ಲಿ ಯುಗಾಂತರಗಳವರೆಗೂ ನಿಲ್ಲುವ ಮಹಾಕಾರ್ಯವು ನಡೆದುಹೋಗುವುದು. ಭಗೀರಥನಿಂದ ಭಾರತಕ್ಕೆ ಬಂದ ಭಾಗೀರಥೀ, ಸಗರನಿಂದ ರಚಿತವಾದ ಸಾಗರ ಇವು ಯಾವ ಕಾಲಕ್ಕೆ ತಾನೇ ಮಾಯವಾದಾವು ? ಇಷ್ಟು ಸ್ಥಿರಕಾಲ ಸ್ಥಾಯಿಯಾಗಿ ಇವು ನಿಲ್ಲಲು ಕಾರಣವೇನು ? ವಿದ್ಯಾರಣ್ಯರ ವಿಜಯನಗರ, ವಿಶ್ವಾಮಿತ್ರರ ವಿಚಿತ್ರಸೃಷ್ಟಿ ಇವೆಲ್ಲಾ ಕೆಲವು ಕಾಲದಲ್ಲಿ ಅಳಿಯಲು ನಿಮಿತ್ತವೇನು ? ಇವನ್ನೆಲ್ಲಾ ಪರ್ಯಾಲೋಚಿಸಿದರೆ ಆ ಕಾರ್ಯಗಳ ಸ್ಥಿರತೆ, ಅಸ್ಥಿರತೆಗಳು ಅವರವರು ಅನುಸರಿಸಿದ ರೀತಿನೀತಿಗಳಿಗೆ ಅನುಗುಣವಾಗಿ ಒದಗಿದುವೆನ್ನಬೇಕು. ಮಾನವನು ಅಲ್ಪಕಾರ್ಯವನ್ನಾಗಲಿ, ಮಹಾಕಾರ್ಯವನ್ನಾಗಲಿ ಪ್ರಾರಂಭಿಸಿ ಮುಗಿಸಬೇಕಾದರೆ ಅದಕ್ಕೆ ಸಂಬಂಧಿಸಿದ ನಿಯಮಗಳನ್ನೆಲ್ಲಾ ತಪ್ಪದೆ ಪಾಲಿಸುತ್ತಾ ಬರಬೇಕು.

ಭವಿಷ್ಯಮಹಾಪುರಾಣದ ಈ ಭಾಗದಲ್ಲಿ ಮಾನವನಿಂದ ರಚಿತವಾಗಲಿರುವ ಸಮಸ್ತ ಸ್ಥಿರಕಾರ್ಯಗಳಿಗೂ ಅನುಸರಿಸಬೇಕಾದ ಹತ್ತಾರು ನಿಯಮಗಳು ನಮಗೆ ಗೋಚರವಾಗುತ್ತವೆ. ಸಾಮಾನ್ಯ ಮನುಷ್ಯನಿಗೆ ಇವುಗಳಲ್ಲಿ ಅಷ್ಟು ಪ್ರತ್ಯಯವಿಲ್ಲದೆ ವಸ್ತುತಃ ಅನಾದರ ಹುಟ್ಟಬಹುದು. ವಿವೇಕಿಯಾದವನು ಇದರಲ್ಲಿ ಏನೋ ಐತಿಹ್ಯವಿರಬಹುದು ಎಂದು ಊಹಿಸಿ ಅದನ್ನು ಪಾಲಿಸುವನು. ಆನೆಗೆ ಅಂಕುಶದ ಅಂಕೆಯಿರುವಂತೆ ಮಾನವನ ಚಿತ್ತವು ಶುದ್ಧವಾಗಬೇಕಾದರೆ ಈ ಶಾಸ್ತ್ರದ ಕಟ್ಟುಕಟ್ಟಳೆಗಳು ಅತ್ಯಾವಶ್ಯಕ.

ಮಧ್ಯಮಪರ್ವದ ಈ ದ್ವಿತೀಯಸಂಪುಟದಲ್ಲಿ ಕೆರೆ, ಮನೆ, ತೋಟ, ಮಂಟಪ ವಿಗ್ರಹ, ವೃಕ್ಷ, ಬಾವಿ ಮುಂತಾದುವುಗಳ ಪ್ರತಿಷ್ಠಾಕಾರ್ಯಗಳಲ್ಲಿ ನಾವು ಅನುಸರಿಸಬೇಕಾದ ನಿಯಮಗಳು, ಪ್ರತಿಷ್ಠೆ ನಡೆಸಬೇಕಾದ ಕಾಲ, ಕರ್ತೃ ಮುಂತಾದ ವಿಷಯಗಳೆಲ್ಲಾ ಅಡಕವಾಗಿವೆ. ಆಗಮ, ಶಿಲ್ಪ ಮುಂತಾದ ಶಾಸ್ತ್ರಗಳಲ್ಲಿ ಹೇಳಿರುವ ವಿಧಿ

ಯನ್ನೇ ಇಲ್ಲಿಯೂ ತಕ್ಕಮಟ್ಟಿಗೆ ಪ್ರತಿಪಾದಿಸಿರುವರು. ಆಸ್ತಿಕ ಮಹನೀಯರಿಗೆ ಸರ್ವವಿಧದಲ್ಲಿಯೂ ಉಪಯೋಗವಾಗಿರುವ ಈ ಗ್ರಂಥವು ಸಮಸ್ತ ಜನಗಳ ಆದರವನ್ನೂ ಗಳಿಸಬಲ್ಲುದಾಗಿದೆ.

ಇಂತಹ ಅಮೂಲ್ಯಗ್ರಂಥರತ್ನಗಳ ಪ್ರಕಾಶವು ಸರ್ವತ್ರ ಹರಡುವಂತೆ ಏರ್ಪಡಿಸಿ ತನ್ಮೂಲಕ ಮಾನವರಲ್ಲಿ ಆಸ್ತಿಕತೆಯು ನೆಲಸುವಂತೆ ಮಾಡಿ ಪ್ರಜೆಗಳೊಡನೆ ತಾವೂ ಆನಂದವನ್ನು ಪಡೆಯುತ್ತಿರುವ ಆಸ್ತಿಕವರೇಣ್ಯರೆನಿಸಿದ ನಮ್ಮ ಶ್ರೀಮನ್ಮಹಾರಾಜ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ. ಜಿ.ಸಿಎಸ್.ಐ. ಮಹಾಪ್ರಭುಗಳೂ** ಅವರ ಕುಟುಂಬವರ್ಗವೂ ಸಹ ಸರ್ವೇಶ್ವರನ ದಯೆಯಿಂದಲೂ, ಶ್ರೀ ಚಾಮುಂಡಾಂಬೆಯ ಅನುಗ್ರಹದಿಂದಲೂ ಚಿರಾಯುಷ್ಮಂತರಾಗಿ ಸುಖಿಸುತ್ತಾ ಜಯಶೀಲರಾಗಲಿ ಎಂದು ಪರಮಾತ್ಮನನ್ನು ಪ್ರಾರ್ಥಿಸುತ್ತೇನೆ.

ಸರ್ವಜಿನ್ನಾಮಸಂವತ್ಸರದ
ಪೌಷ ಶುಕ್ಲ ತೃತೀಯಾ ಬುಧವಾರ
೧೪—೧—೧೯೪೮

ಇತಿ ಸಜ್ಜನ ವಿಧೇಯ
**ಬಿ. ಚನ್ನಕೇಶವಯ್ಯ**
ಆಸ್ಥಾನ ವಿದ್ವಾನ್ ಮೈಸೂರು



## ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ದ್ವಿತೀಯ ಸಂಪುಟದ

# ವಿಷಯಾನುಕ್ರಮಣಿಕೆ.

---

## ದ್ವಿತೀಯ ಭಾಗ.

ಪುಟ ಸಂಖ್ಯೆ

ಮೂರನೆಯ ಅಧ್ಯಾಯ—

ಕ್ಷುದ್ರಾರಾಮ ವೃಕ್ಷಪ್ರತಿಷ್ಠಾವಿಧಿ.



ನಾಲ್ಕನೆಯ ಅಧ್ಯಾಯ—

ಅಶ್ವತ್ಥ, ಪುಷ್ಕರಿಣಿ, ಜಲಾಶಯ, ಇವುಗಳ ಪ್ರತಿಷ್ಠಾವಿಧಿ



ಐದನೆಯ ಅಧ್ಯಾಯ—

ನಲಿನೀ ವಾಪೀ ಹ್ರದಾದಿಗಳ ಪ್ರತಿಷ್ಠೆ

ಪುಟ ಸಂಖ್ಯೆ

ಪುಟ ಸಂಖ್ಯೆ

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ದ್ವಿತೀಯಭಾಗೇ

## ಏಕಾದಶೋಽಧ್ಯಾಯಃ

---

॥ ಸೂತ ಉವಾಚ ॥

**ಅಥ ಪೂಜಾಕ್ರಮಂ ವಕ್ಷ್ಯೇ ಪುರಾಣಸ್ಮೃತಿಚೋದಿತಂ ।**
**ಉತ್ತರೇ ಪಶ್ಚಿಮೇ ವಾಥ ಪೂರ್ವೇ ಚಾಪಿ ಸಮಾಚರೇತ್ ॥ ೧ ॥**

**ನದೀತೀರೇ ನೇಮಿಪ್ರಾಂತೇ ದಶದ್ವಾದಶಸಂಖ್ಯಯಾ ।**
**ಮಂಡಲಂ ರಚಯೇದ್ವಿಪ್ರಾಶ್ಚರುಕದ್ವಯಸಂಯುತಂ ॥ ೨ ॥**

**ತ್ರಿಭಾಗಂ ವಿಭಜೇತ್ಕ್ಷೇತ್ರಂ ಮಧ್ಯಭಾಗದ್ವಯೇನ ತು ।**
**ತ್ರಿಹಸ್ತವೇದಿಕಾಂ ಕುರ್ಯಾತ್ತಾಲೋತ್ಸೇಧಾಮುದಕ್ಪ್ಲವಾಂ ॥ ೩ ॥**

---

### ಹನ್ನೊಂದನೆಯ ಅಧ್ಯಾಯ

೧-೨. ಸೂತರು ಶೌನಕಾದಿ ಮುನಿಗಳಿಗೆ ಹೇಳುತ್ತಾರೆ—ಈಗ ಪುರಾಣಗಳಲ್ಲೂ ಸ್ಮೃತಿಗಳಲ್ಲೂ ಹೇಳಿರುವ ಪ್ರಕಾರ ಪೂಜಾಕ್ರಮವನ್ನು ತಿಳಿಸುತ್ತೇನೆ. ಊರಿನ ಉತ್ತರ, ಪಶ್ಚಿಮ, ಅಥವಾ ಪೂರ್ವ ದಿಕ್ಕುಗಳಲ್ಲಿ ನದಿಯ ದಡದಲ್ಲಿಯೋ, ನೇಮಿಯ ಸಮೀಪದಲ್ಲಿಯೋ, ಹತ್ತು ಹನ್ನೆರಡು ಅಂಗುಲ ಪ್ರಮಾಣದಲ್ಲಿ ಮಂಡಲವನ್ನು ರಚಿಸಬೇಕು. ಆ ಮಂಡಲವು ಎರಡು ಚರುಕಗಳಿಂದ ಕೂಡಿರಬೇಕು.

೩. ಮೊದಲು ಕ್ಷೇತ್ರವನ್ನು ಮೂರುಭಾಗಗಳಾಗಿ ವಿಂಗಡಿಸಬೇಕು. ಅದರಲ್ಲಿ ಮಧ್ಯದ ಎರಡು ಭಾಗಗಳಲ್ಲಿ ಮೂರು ಮೊಳ ಚದುರವೂ ಒಂದು ತಾಳಪ್ರಮಾಣ ಎತ್ತರವೂ ಉಳ್ಳ ವೇದಿಕೆಯನ್ನು ಉತ್ತರದಿಕ್ಕಿಗೆ ಇಳಿಜಾರಾಗಿರುವಂತೆ ಮಾಡಬೇಕು.

ಉತ್ತರಾಶೇ ದಕ್ಷಿಣೇ ಚಾರತ್ನಿಹಸ್ತಾಂತರೇsಪಿ ಚ ।
ತ್ರಿಮೇಖಲಾಂ ಹಸ್ತಮಾತ್ರಾಂ ಗುಣವೇದಸಮನ್ವಿತಾಂ ॥ ೪ ॥

ಮೂಲೇ ಸಾರ್ಧಂ ಚ ಶುಕ್ಲಾಂ ಚ ಮೇಖಲಾಂ ಚ ತಥೈವ ತು ।
ಚತುರಂಗುಲಿಕಾಂ ವೇದಿಂ ಮಧ್ಯೋನ್ನತಾಂ ಪ್ರಕಲ್ಪಯೇತ್ ॥ ೫ ॥

ಷಟ್ಸಪ್ತಾಂಗುಲಿಕಾಂ ಯೋನಿಂ ಪಶ್ಚಿಮೇ ಮೇಖಲೋಪರಿ ।
ವಿನ್ಯಸೇನ್ನಾಭಿಸಂಯುಕ್ತಮೇವಂ ಕುಂಡಂ ಪ್ರಕಲ್ಪಯೇತ್ ॥ ೬ ॥

ಶ್ರಾದ್ಧಂ ವೃದ್ಧ್ಯಾತ್ಮಕಂ ಕುರ್ಯಾತ್ಸಂಕಲ್ಪಂ ಮಾನಸಂ ಚರೇತ್ ।
ಶ್ರಾದ್ಧಾರ್ಥಂ ನೈವ ಸಂಕಲ್ಪೇತ್ತಥಾ ವೈ ದೇವದರ್ಶನೇ ॥ ೭ ॥

---

೪. ಉತ್ತರದಿಕ್ಕಿನಲ್ಲಿಯೂ ದಕ್ಷಿಣದಿಕ್ಕಿನಲ್ಲಿಯೂ ಮೊಳ ಅಂತರದಲ್ಲಿ ಒಂದು ಹಸ್ತ ಚದುರವಾದುದಾಗಿ ಆ ಒಂದು ಹಸ್ತ ಪ್ರಮಾಣದೊಳಗೆ ನಾಲ್ಕು ಅಂಗುಲ ಎತ್ತರ, ಮೂರು ಅಂಗುಲ ದಪ್ಪ ಇರುವಂತೆ ಕ್ರಮವಾಗಿ ಮೂರು ಮೇಖಲೆಗಳನ್ನು ರಚಿಸಬೇಕು.

೫. ಬುಡದ ಮೇಖಲೆಯನ್ನು ಒಂದೂವರೆ ಅಂಗುಲ ಎತ್ತರವಾಗಿ ಬೆಳ್ಳಗೆ ಶುಭ್ರವಾಗಿ ಇರುವಂತೆ ರಚಿಸಬೇಕು. ಒಟ್ಟಿನಲ್ಲಿ ಅದರ ವೇದಿಕೆಯು ನಾಲ್ಕು ಅಂಗುಲ ಎತ್ತರವೂ ಮಧ್ಯದಲ್ಲಿ ಉನ್ನತವೂ ಆಗಿರುವಂತೆ ಮಾಡಬೇಕು.

೬. ಪಶ್ಚಿಮ ದಿಕ್ಕಿನ ಮೇಖಲೆಯ ಮೇಲೆ ಆರು ಅಥವಾ ಏಳು ಅಂಗುಲದ ಪ್ರಮಾಣದಲ್ಲಿ ನಾಭಿಸಹಿತವಾಗಿ ಕುಂಡ ಯೋನಿಯನ್ನು ರಚಿಸಬೇಕು ಈ ರೀತಿ ಕುಂಡವನ್ನು ಸಿದ್ಧಪಡಿಸಬೇಕು.

೭. ಬಳಿಕ ಕರ್ಮಾಂಗವಾಗಿ ವೃದ್ಧ್ಯರ್ಥಕವಾದ ನಾಂದೀಶ್ರಾದ್ಧವನ್ನು ಮಾಡಬೇಕು. ಹೀಗೆ ಮಾಡುವಾಗ ಮಾನಸವಾಗಿಯೇ ಸಂಕಲ್ಪಮಾಡಬೇಕೇ ವಿನಾ ಶ್ರಾದ್ಧಾರ್ಥವಾಗಿ ಪ್ರತ್ಯೇಕ ಸಂಕಲ್ಪವನ್ನು ಮಾಡಬಾರದು. ದೇವತಾದರ್ಶನ ಕಾಲದಲ್ಲೂ ಹಾಗೆಯೇ ಭಕ್ತನು ತಾನು ಸಂಕಲ್ಪವನ್ನು ಮಾಡಬಾರದು.

**ಗಯಾಶ್ರಾದ್ಧಾರ್ಥಕಂ ಚಾಷ್ಟತೀರ್ಥಶ್ರಾದ್ಧಾರ್ಥಮೇವ ಚ ।**
**ಐಶಾನ್ಯಾಂ ಕಲಶೇ ದೇವಂ ಪೂಜಯೇದ್ಗಣನಾಯಕಂ ॥ ೮ ॥**

**ಮಧ್ಯೇ ಕುಂಡೇ ಮಹಾಂಶ್ಚೈವ ವಿಷ್ಣುದೇವಂ ದಿಗೀಶ್ವರಾನ್ ।**
**ಬ್ರಹ್ಮಾಣಂ ಚಾಗ್ನಿಕುಂಡೇ ತು ಸ್ವೈಸ್ಸ್ವೈರ್ಮಂತ್ರೈಃ ಪ್ರಪೂಜಯೇತ್ ॥ ೯ ॥**

**ಪ್ರಾಣಾಯಾಮಂ ವಿಧಾಯಾಥ ಭೂತಶುದ್ಧಿಂ ಸಮಾಚರೇತ್ ।**
**ಧ್ಯಾಯೇದ್ವಾಟವೀಶಪುರುಷಂ ಸರ್ವಲಕ್ಷಣಸಂಯುತಂ ॥ ೧೦ ॥**

**ಶ್ವೇತಂ ಚತುರ್ಭುಜಂ ಶಾಂತಂ ಕುಂಡಲಾದ್ಯೈರಲಂಕೃತಂ ।**
**ಪುಸ್ತಕಂ ಚಾಕ್ಷಮಾಲಾಂ ಚ ವರಾಭಯಕರಂ ಪರಂ ॥ ೧೧ ॥**

**ಪಿತೃವೈಶ್ವಾನರೋಪೇತಂ ಕುಟಿಲಭ್ರೂಪಶೋಭಿತಂ ।**
**ಕರಾಲವದನಂ ಚೈವ ಆಜಾನುಕರಲಂಬಿತಂ ॥ ೧೨ ॥**

---

೮. ಗಯಾಶ್ರಾದ್ಧ, ಅಷ್ಟಕಶ್ರಾದ್ಧ, ತೀರ್ಥಶ್ರಾದ್ಧ ಇವುಗಳನ್ನು ಮಾಡುವುದಕ್ಕೆ ಮುಂಚಿತವಾಗಿ, ನಿರ್ವಿಘ್ನತೆಗಾಗಿ ಮಂಡಲದ ಈಶಾನ್ಯಭಾಗದ ಕಲಶದಲ್ಲಿ ಗಣಪತಿಯನ್ನು ಪೂಜೆ ಮಾಡಬೇಕು.

೧೦-೧೨. ಪ್ರಾಣಾಯಾಮಮಾಡುವ ಮೂಲಕ ದೇಹದಲ್ಲಿ ಅಡಕವಾದ ಪೃಥಿವ್ಯಪ್ತೇಜೋವಾಯುರಾಕಾಶ ರೂಪವಾದ ಪಂಚಭೂತ ಶುದ್ಧಿಯನ್ನು ಮಾಡಿಕೊಳ್ಳಬೇಕು. ಅನಂತರ ಸರ್ವಾಂತರ್ಯಾಮಿಯೂ ಸಕಲಲಕ್ಷಣಗಳಿಂದ ಕೂಡಿದವನೂ, ಶ್ವೇತವರ್ಣನೂ, ಶಾಂತನೂ, ನಾಲ್ಕು ಭುಜಗಳುಳ್ಳವನೂ, ಕುಂಡಲಮುಂತಾದುವುಗಳಿಂದ ಅಲಂಕೃತನಾದವನೂ, ಪುಸ್ತಕ ಅಕ್ಷಮಾಲೆ, ವರದಮುದ್ರೆ, ಅಭಯಮುದ್ರೆ, ಇವುಗಳ್ನು ನಾಲ್ಕು ಕೈಗಳಲ್ಲಿ ಧರಿಸಿರುವವನೂ, ಪಿತೃದೇವತೆಗಳಿಂದಲೂ ವೈಶ್ವಾನರನಿಂದಲೂ ಕೂಡಿದವನೂ, ವಕ್ರವಾದ ಹುಬ್ಬುಗಳಿಂದ ಶೋಭಿಸುತ್ತಿರುವವನೂ, ಭಯಂಕರವಾದ ಮುಖವುಳ್ಳವನೂ, ಆಜಾನುಬಾಹುವೂ, ಆಗಿರುವಂತೆ ಮೂರ್ತಿಯನ್ನು ಮನಸಾ ಕಲ್ಪಿಸಿ, ಅನಂತರ ಆ ಮೂರ್ತಿಯನ್ನು ಧ್ಯಾನ ಮಾಡಬೇಕು.

ಮೂರ್ಧನ್ಯಗ್ನಿಂ ಸಮಾವಿಶ್ಯ ಮುಖೇ ವಾಯುಃ ಸಮಾಹಿತಃ ।
ಪೃಥ್ವೀಧರೋಽರ್ಯಮಾ ಚೈವ ತಥಾಚಾಷ್ಟವನೇಷ್ಟಿತೌ ॥ ೧೩ ॥

ವಕ್ಷಃಸ್ಥಲೇಽಪರಾಂ ಸಂಧ್ಯಾ ಯಜೇಚ್ಚೈವ ಯಥಾವಿಧಿ ।
ನೇತ್ರಯೋರ್ದಿತಿಪರ್ಜನ್ಯೌ ಶ್ರೋತ್ರೇ ದಿತೀಜ್ಯಪುತ್ರಕೌ ॥ ೧೪ ॥

ಸರ್ಪೇಂದ್ರಾವಾಸನಸ್ಥೌ ಚ ವಾಮೇ ದಕ್ಷಂ ವಿಭಾವಯೇತ್ ।
ಸತ್ಯಸೋಮಾಗ್ನಯಸ್ತತ್ರ ಬಾಹ್ವೋಃ ಪಂಚ ಚ ಪಂಚ ಚ ॥ ೧೫ ॥

ರುದ್ರಶ್ಚ ರಾಜಯಕ್ಷ್ಮಾ ಚ ವಾಮಹಸ್ತೇ ವ್ಯವಸ್ಥಿತೌ ।
ಪಾರ್ಶ್ವೇ ತು ದಕ್ಷಿಣೇ ತದ್ವದ್ದ್ವಿರಥಶ್ಚ ಮಹರ್ಕ್ಷಕಃ ॥ ೧೬ ॥

ಉಭೌ ಜ್ಞೇಯೌ ತಥಾ ಜಾನ್ವೋರುಭೌ ಗಂಧರ್ವಪುಷ್ಪಕೌ ।
ಜಂಘಯೋರ್ಭೃಂಗಸುಗ್ರೀವೌ ಸ್ಫಿಚೋರ್ದೌವಾರಿಕೋ ಗಣಃ ॥ ೧೭ ॥

---

೧೩-೧೪. ಅವರ ಶಿರಸ್ಸಿನಲ್ಲಿ ಅಗ್ನಿಯನ್ನು ಆವಾಹನೆ ಮಾಡಬೇಕು. ಮುಖದಲ್ಲಿ ವಾಯುವನ್ನು ಸ್ಥಾಪಿಸಬೇಕು. ಅಲ್ಲದೇ ಪೃಥ್ವೀಧರ, ಅರ್ಯಮಾ, ಅಷ್ಟವನೇಷ್ಟಿತರು ಸಾಯಂಸಂಧ್ಯೆ, ಇವರನ್ನು ಹೃದಯಸ್ಥಾನದಲ್ಲಿಯೂ ಆವಾಹಿಸಿ ವಿಧಿಪ್ರಕಾರವಾಗಿ ಪೂಜಿಸಬೇಕು. ಮತ್ತು ಕಣ್ಣುಗಳೆರಡರಲ್ಲಿ ದಿತಿ, ಪರ್ಜನ್ಯ, ಎಂಬವರನ್ನೂ ಕಿವಿಗಳಲ್ಲಿ ಅದಿತಿ, ಇಜ್ಯಪುತ್ರ ಇವರನ್ನೂ ಸ್ಥಾಪಿಸಬೇಕು.

೧೫-೧೬. ಆಸನದ ಎಡಭಾಗ ಬಲಭಾಗಗಳಲ್ಲಿ ಇಬ್ಬರು ಸರ್ಪಶ್ರೇಷ್ಠರನ್ನು ಆವಾಹಿಸಬೇಕು. ಎಡಬಲ ಬಾಹುಗಳಲ್ಲಿ ಸತ್ಯ, ಸೋಮ, ತ್ರೇತಾಗ್ನಿಗಳು, ಹೀಗೆ ಐವರೈವರನ್ನೂ, ಎಡಹಸ್ತದಲ್ಲಿ ರುದ್ರ, ರಾಜಯಕ್ಷ್ಮ, ಇವರುಗಳನ್ನೂ, ಬಲಹಸ್ತದಲ್ಲಿ ಅದರಂತೆ ದ್ವಿರಥ, ಮಹರ್ಕ್ಷಕ ಇವರನ್ನೂ ಸ್ಥಾಪಿಸಬೇಕು.

೧೭. ಮತ್ತು ಎರಡು ಮಂಡಿಗಳಲ್ಲಿಯೂ ಗಂಧರ್ವ, ಪುಷ್ಪಕ, ಎಂಬವರನ್ನೂ ಎರಡು ಮೊಣಕಾಲುಗಳಲ್ಲಿಯೂ ಭೃಂಗ, ಸುಗ್ರೀವ ಎಂಬವರನ್ನೂ, ಎರಡು ಮಂಡಿಗಳಲ್ಲಿಯೂ ದೌವಾರಿಕವೃಂದವನ್ನೂ ಸ್ಥಾಪಿಸಬೇಕು.

**ಜಯಶಕ್ರೌ ತಥಾ ಮೇಢ್ರೇ ಪದಯೋಃ ಪಿತರಸ್ತಥಾ ।**
**ಏವಂ ಧ್ಯಾತ್ವಾ ನ್ಯಸೇತ್ಪುಷ್ಪಂ ಸೋಮೇ ನೈವಂ ವಿಚಿಂತಯೇತ್ ॥ ೧೮ ॥**

**ಮಂದರಂ ದೀರ್ಘಯುಕ್ತೇನ ಷಡಂಗಾನಿ ಸಮಾಚರೇತ್ ।**
**ತಾವದ್ವೀರ್ಯಂ ತತಃ ಕೃತ್ವಾ ಪ್ರಣವಂ ಬ್ರಹ್ಮಣೇತಿ ಚ ॥ ೧೯ ॥**

**ವಾಸ್ತ್ವೀಶಾಯ ವಿದ್ಮಹೇತಿ ತನ್ನೋ ವಿಷ್ಣುಃ ಪ್ರಚೋದಯಾತ್ ।**
**ಅನೇನ ಸ್ನಪನಂ ಕುರ್ಯಾತ್ಪೂಜಾದ್ರವ್ಯಾಣಿ ಪ್ರೋಕ್ಷಯೇತ್ ॥ ೨೦ ॥**

**ಆಸನಂ ಪೂಜಯೇತ್ಪೂರ್ವಂ ಧರ್ಮೇಣಾಪಿ ಸ್ವಶಕ್ತಿತಃ ।**
**ಆದೌ ತು ಭಾಸ್ಕರಂ ಸೂರ್ಯಂ ಶಚೀನಾಥಂ ಗಣಾಧಿಪಂ ॥ ೨೧ ॥**

**ಆಧಾರಶಕ್ತಿಂ ಪೃಥಿವೀಂ ಪೂಜಯೇತ್ತತ್ರ ಪಂಕಜಂ ।**
**ಬಂದೀಶಾಸನಮಿತ್ಯುಕ್ತಂ ಪೂಜಯೇದಾಸನಂ ತತಃ ॥ ೨೨ ॥**

---

೧೮. ಮೇಢ್ರಸ್ಥಾನದಲ್ಲಿ ಜಯ, ಶಕ್ರ ಇವರನ್ನೂ; ಪಾದಗಳಲ್ಲಿ ಪಿತೃದೇವತೆಗಳನ್ನೂ, ಈರೀತಿ ಆಯಾ ಸ್ಥಾನಗಳಲ್ಲಿ ಆಯಾ ದೇವತೆಗಳನ್ನು ಧ್ಯಾನಿಸಿ ಹೂವಿನಿಂದ ಪೂಜಿಸಬೇಕು. ಸೋಮಪಕ್ಷದಲ್ಲಿ ಹೀಗೆ ಚಿಂತಿಸಬೇಕಾದುದೇನೂ ಇಲ್ಲ.

೧೯. ಮೆಲ್ಲಗೆ ಉಚ್ಚರಿಸುವ ದೀರ್ಘಯುಕ್ತವಾದ ಸ್ವರದಿಂದ ಷಡಂಗಗಳನ್ನು ನ್ಯಾಸಮಾಡಬೇಕು. ಅನಂತರ ಅಷ್ಟೇ ವೀರ್ಯವತ್ತಾಗಿ 'ಬ್ರಹ್ಮಣಾತೆ' ಎಂಬ ಮಂತ್ರದಿಂದ ಪ್ರಣವವನ್ನು ಧ್ಯಾನಿಸಬೇಕು.

೨೦. 'ವಾಸ್ತ್ವೀಶಾಯ ವಿದ್ಮಹೇ.... ತನ್ನೋ ವಿಷ್ಣು: ಪ್ರಚೋದಯಾತ್' ಎಂಬ ಮಂತ್ರದಿಂದ ಆವಾಹಿತಮೂರ್ತಿಗೆ ಪ್ರೋಕ್ಷಣರೂಪವಾದ ಸ್ನಪನ ಮಾಡಿ ಪೂಜಾದ್ರವ್ಯಗಳನ್ನೂ ಸಹ ಪ್ರೋಕ್ಷಣಮಾಡಬೇಕು.

೨೧-೨೨. ಪೀಠಪೂಜೆಯಲ್ಲಿ ಪೂರ್ವದಿಕ್ಕಿನಿಂದ ಮೊದಲುಮಾಡಿ ಧರ್ಮಾದಿಗಳಿಂದ ಯುಕ್ತವಾಗಿರುವಂತೆ, ಆವಾಹನೆಮಾಡಿ ತನ್ನ ಶಕ್ತ್ಯನುಸಾರವಾಗಿ ಪೂಜಿಸಬೇಕು. ಮೊದಲು ಸೂರ್ಯನನ್ನೂ, ಆಮೇಲೆ ಇಂದ್ರ, ಗಣಪತಿ, ಆಧಾರಶಕ್ತಿ ಪೃಥ್ವಿ ಮೊದಲಾದವರನ್ನೂ, ಮಧ್ಯೆ ಅಷ್ಟದಳ ಪಂಕಜವನ್ನೂ, ನಿಯೋಜಿಸಿ ಬಂದೀಶಾಸನವೆಂದು ಉಕ್ತವಾದ ಆ ಪೀಠವನ್ನು ಪೂಜೆಮಾಡಬೇಕು.

ಸಿತಚಂದನಯುಕ್ತೇನ ಶ್ವೇತಪುಷ್ಪಂ ಪ್ರಗೃಹ್ಯ ಚ ।
ಹರೇರ್ಧ್ಯಾನಂ ತತಃ ಕುರ್ಯಾತ್ಸ್ಥಾಪಯೇನ್ಮಧ್ಯಮಂಡಲೇ ॥ ೨೩ ॥

ಆವಾಹ್ಯ ಚಾಸನಂ ದದ್ಯಾತ್ತತಃ ಪಾದ್ಯಾದಿಕತ್ರಯಂ ।
ಮಧುಪರ್ಕಂ ತತೋ ದದ್ಯಾದ್ವಾಸ್ತೋಷ್ಪತಿಮಹೇಶ್ವರಂ ॥ ೨೪ ॥

ಅಸ್ಯ ಮಂತ್ರಸ್ಯ ಚ ಋಷಿಶ್ಛಂದೋ ಗಾಯತ್ರಮೀರಿತಂ ।
ದೇವತಾ ಚ ಭವೇದ್ಬ್ರಹ್ಮಾ ಯೋಜಯೇದಶ್ವಮೇಧಕಂ ॥ ೨೫ ॥

ಮಂದರಂ ವಿಜಯಂ ಸೋಮಂ ಮಹಾದೇವಂ ಚ ಮಾಧವಂ ।
ರುದ್ರಂ ಹರಂ ಜಯಂ ಭಂ ಚ ಪೂರ್ವಾದಿದಲಮೂಲಕೇ ॥ ೨೬ ॥

ಜಯಾ ಚ ವಿಜಯಾ ಚೈವ ಸತ್ಯಾ ಮಾಯಾ ಶಿವಾಂಬಿಕಾ ।
ಹಾಸಿನೀ ಕಾಮಿನೀ ಚೈತಾ ದಲಮೂಲೇಷು ಭಾವಯೇತ್ ॥ ೨೭ ॥

---

೨೩. ಶ್ರೀಗಂಧಯುಕ್ತನಾದ ಶ್ವೇತಪುಷ್ಪವನ್ನು ಕೈಯಲ್ಲಿ ಹಿಡಿದುಕೊಂಡು ಶ್ರೀಹರಿಯ ಧ್ಯಾನವನ್ನು ಮಾಡಬೇಕು. ಅನಂತರ ಮಧ್ಯಮಂಡಲದಲ್ಲಿ ಆ ಪುಷ್ಪವನ್ನು ಸ್ಥಾಪನೆಮಾಡಬೇಕು.

೨೪. ಅನಂತರ ಆವಾಹನೆಯನ್ನು ಮಾಡಿ, ಆಸನಾದಿಗಳನ್ನು ಸಮರ್ಪಿಸಿ, ಈಶ್ವರಸ್ವರೂಪನಾದ ವಾಸ್ತೋಷ್ಪತಿಗೆ ಅರ್ಘ್ಯ, ಪಾದ್ಯ, ಆಚಮನ, ಈ ಮೂರನ್ನೂ ಸಮರ್ಪಿಸಿ ಮಧುಪರ್ಕವನ್ನು ನಿವೇದಿಸಬೇಕು.

೨೫. ಈ 'ವಾಸ್ತೋಷ್ಪತೇ' ಮಂತ್ರಕ್ಕೆ ಈಶ್ವರನೇ ಋಷಿ, ಗಾಯತ್ರಿಯೇ ಛಂದಸ್ಸು, ಬ್ರಹ್ಮನೇ ದೇವತೆ; ಅಶ್ವಮೇಧದಲ್ಲಿ ಇದನ್ನು ವಿನಿಯೋಗಿಸಬೇಕು ಎಂಬದಾಗಿ ಹೇಳಿದೆ.

೨೬. ಪೂರ್ವದಿಕ್ಕಿನಿಂದ ಮೊದಲುಗೊಂಡು ದಳಗಳ ಬುಡದಲ್ಲಿ ಮಂದರ, ವಿಜಯ, ಸೋಮ, ಮಹಾದೇವ, ಮಾಧವ, ರುದ್ರ, ಹರ, ಜಯ, ಇವರನ್ನೂ ನಕ್ಷತ್ರಗಳನ್ನೂ ಸ್ಥಾಪಿಸಬೇಕು.

೨೭. ಜಯಾ, ವಿಜಯಾ, ಸತ್ಯಾ, ಮಾಯಾ, ಶಿವಾ, ಅಂಬಿಕಾ, ಹಾಸಿನೀ, ಕಾಮಿನೀ, ಇವರನ್ನೂ ಸಹ ದಳಗಳ ಮೂಲದಲ್ಲಿರುವಂತೆ ಭಾವಿಸಬೇಕು.

**ಪುಷ್ಪಾಂಜಲಿತ್ರಯಂ ದದ್ಯಾದ್ವಾಸ್ತೋಷ್ಪತಯ ಇತ್ಯಪಿ ।**
**ಅರ್ಘ್ಯಮಂತ್ರೇಣ ಗಂಧಾದ್ಯೈಃ ಪೂಜಯೇದ್ಭೂತಿಮಿಚ್ಛತಾ ॥ ೨೮ ॥**

**ವಾಸ್ತೋಷ್ಪತೇ ಭವಮತೇ ಇತಿ ಧ್ಯಾತ್ವಾ ಋತಂಚೇತಿ ಮಂತ್ರೇಣ ಪೂಜಯೇತ್ ॥**
**ಋಷಿರ್ನಾರಾಯಣಶ್ಛಂದೋ ಗಾಯತ್ರೀ ಪರಿಕೀರ್ತಿತಂ ॥ ೨೯ ॥**

**ಸೂರ್ಯಶ್ಚ ದೇವತಾ ಖ್ಯಾತಃ ಪ್ರೀಣಿತಃ ಕುಲಿಶಾಯುಧಃ ।**
**ಸೂರ್ಯಂ ರಕ್ತಾಸನಾರೂಢಂ ದ್ವಿಭುಜಂ ರಕ್ತವಾಸಸಂ ॥ ೩೦ ॥**

**ರಕ್ತಪದ್ಮದ್ವಯಧರಂ ಕುಂಡಲಾದ್ಯೈಃ ಸುಶೋಭಿತಂ ।**
**ಏವಂ ಧ್ಯಾತ್ವಾ ತು ಮತಿಮಾನ್ಹಂಸಂ ಸಮಂತ್ರಮೀಶ್ವರಂ ॥ ೩೧ ॥**

---

೨೮. 'ವಾಸ್ತೋಷ್ಪತೇ' ಮುಂತಾದ ಮೂರು ಮಂತ್ರಪೂರ್ವಕವಾಗಿ ಮೂರಾವರ್ತಿ ಪುಷ್ಪಾಂಜಲಿಗಳನ್ನು ಸಮರ್ಪಿಸಬೇಕು. ಐಶ್ವರ್ಯವನ್ನು ಅಪೇಕ್ಷಿಸುವವನು ಗಂಧ ಪುಷ್ಪಗಳಿಂದ ಮಿಶ್ರಿತವಾದ ಪುನರರ್ಘ್ಯವನ್ನು ಮಂತ್ರಪೂರ್ವಕವಾಗಿ ಕೊಡಬೇಕು, ಎಂದು ಹೇಳಿದೆ.

೨೯. 'ವಾಸ್ತೋಷ್ಪತೇ ಭವಮತೇ' ಎಂಬ ಮಂತ್ರದಿಂದ ಧ್ಯಾನಮಾಡಿ 'ಋತಂ ಚ ಸತ್ಯಂ ಚ' ಎಂಬ ಮಂತ್ರದಿಂದ ಪೂಜಿಸಬೇಕು. ಈ ಮಂತ್ರಕ್ಕೆ ನಾರಾಯಣನು ಋಷಿ; ಗಾಯತ್ರಿಯು ಛಂದಸ್ಸು;

೩೦. ಸೂರ್ಯನೇ ದೇವತೆ ಎಂದು ಪ್ರಸಿದ್ಧ ಕುಲಶಾಯುಧ (ಇಂದ್ರ) ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು. ರಕ್ತವರ್ಣದ ಪೀಠವನ್ನು ಏರಿರುವವನೂ, ಎರಡು ಭುಜಗಳುಳ್ಳವನೂ ಕೆಂಪುಬಣ್ಣದ ವಸ್ತ್ರವನ್ನು ಹೊದೆದಿರುವವನೂ;

೩೧. ಎರಡು ಕೆಂದಾವರೆಗಳನ್ನು ಧರಿಸಿರುವವನೂ, ಕುಂಡಲವೇ ಮೊದಲಾದವುಗಳಿಂದ ಅಲಂಕೃತನಾದವನೂ, ವ್ಯಾಪಕನೂ, ಆದ ಸೂರ್ಯನನ್ನು ಬುದ್ಧಿಶಾಲಿಯಾದ ಮನುಷ್ಯನು ಮಂತ್ರಪೂರ್ವಕವಾಗಿ ಧ್ಯಾನಿಸಬೇಕು.

ಹಂಸಸ್ಯ ಇತಿ ಮಂತ್ರಸ್ಯ ಋಷಿರೌತಥ್ಯ ಈರಿತಃ ।
ಪಂಕ್ತಿಶ್ಛಂದಃ ಸ್ವಯಂದೇವೋ ವಿನಿಯೋಗಸ್ತು ಪ್ರೀತಯೇ ॥ ೩೨ ॥

ನೀಲೋತ್ಪಲದ್ವಯಧರಂ ಸತ್ಯಂ ಮೃತ್ಯೂಪರಿಸ್ಥಿತಂ ।
ಸ್ವಚ್ಛಶ್ವೇತಾಂಬರಧರಂ ವರದಂ ಭಕ್ತವತ್ಸಲಂ ॥ ೩೩ ॥

ಸ್ವಂ ಮುದಾತ್ವಮಿತಿ ಮಂತ್ರೇಣ ಶ್ವೇತಚನ್ದನಪುಷ್ಪಕೈಃ ।
ಪೂಜಯೇತ್ಪರಯಾ ಭಕ್ತ್ಯಾ ವಸ್ತ್ರಾಲಂಕಾರ ಭೂಷಣೈಃ ॥ ೩೪ ॥

ಉದ್ಧರ್ಷಣ ಇತಿ ಮಂತ್ರೇಣ ಕೃಷ್ಣಪುಷ್ಪೈರಥಾರ್ಚಯೇತ್ ।
ಸತ್ಯವ್ರತಋಷಿಶ್ಚಾಸ್ಯ ತ್ರಿಷ್ಟುಪ್ಛಂದೋಽಸ್ಯ ದೇವತಾ ॥
ಸವಿತಾ ಚೈವ ವಿಜ್ಞೇಯಃ ಪ್ರೀತಯೇ ಚ ವೃಷಸ್ಯ ಚ ॥ ೩೫ ॥

---

೩೨. 'ಹಂಸಸ್ಯ' ಎಂಬ ಮಂತ್ರಕ್ಕೆ ಔತಥ್ಯನು ಋಷಿಯಾಗಿರುವನು. ಪಂಕ್ತಿಯೆಂಬುದು ಛಂದಸ್ಸು, ಸೂರ್ಯನೇ ದೇವತೆ; ಸೂರ್ಯಪ್ರೀತ್ಯರ್ಥವಾಗಿ ಈ ಮಂತ್ರವನ್ನು ಪಯೋಗಿಸಬೇಕು.

೩೩. ಸತ್ಯ ಎಂಬ ದೇವತೆಯು ಎರಡು ಕನ್ನೈದಿಲೆಗಳನ್ನು ಧರಿಸಿರುವವನೂ, ಮೃತ್ಯುವನ್ನೇ ವಾಹನವಾಗಿರುವವನೂ, ಶುಭ್ರವಾದ ಬಿಳಿಯ ಬಟ್ಟೆಯನ್ನು ಧರಿಸಿದವನೂ, ವರಪ್ರದನೂ, ಭಕ್ತವತ್ಸಲನೂ, ಆಗಿರುವನು.

೩೪. ಈ ಸತ್ಯದೇವತೆಯನ್ನು, 'ಸ್ವಂ ಮುದಾತ್ವಂ' ಎಂಬ ಮಂತ್ರಪೂರ್ವಕವಾಗಿ ಬಿಳಿಯ ಗಂಧ, ಹೂವು, ಇವುಗಳಿಂದಲೂ, ವಸ್ತ್ರ ಅಲಂಕಾರ ಇವುಗಳಿಂದಲೂ, ಬಹುಭಕ್ತಿ ಪುರಸ್ಸರವಾಗಿ ಪೂಜಿಸಬೇಕು.

೩೫. ಅನಂತರ 'ಉದ್ಧರ್ಷಣ' ಎಂಬ ಮಂತ್ರಪೂರ್ವಕವಾಗಿ ನೀಲವರ್ಣದ ಪುಷ್ಪಗಳನ್ನು ಪೂಜಿಸಬೇಕು. ಈ ಮಂತ್ರಕ್ಕೆ ಸತ್ಯವ್ರತನೇ ಋಷಿ, ತ್ರಿಷ್ಟುಪ್ ಎಂಬುದೇ ಛಂದಸ್ಸು, ಸವಿತೃವೇ ದೇವತೆ, ವೃಷಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

**ಶುಕ್ಲವರ್ಣಂ ತಥಾಕಾಶಮೃಷಿಸಂಘೈಶ್ಚ ಸಂಸ್ತುತಂ।**
**ಘಟಸ್ಥಂ ದ್ವಿಭುಜಂ ಧ್ಯಾಯೇದ್ಗದಾಪದ್ಮನಿಧಾರಿಣಂ　　॥ ೩೬ ॥**

**ಶನ್ನೋದೇವೀತಿ ಪಠನಾದ್ಗಂಧಪುಷ್ಪಾದಿಭಿರ್ಯಜೇತ್।**
**ಋಷಿಃಸ್ಯಾತ್ಕರ್ದಮೋ ವಿಪ್ರಾಶ್ಛಂದಶ್ಚ ಜಗತೀ ತಥಾ॥**
**ದೇವತಾ ಚ ಭವೇಚ್ಚಾಗ್ನಿರಾಕಾಶಪ್ರೀತಯೇ ನ್ಯಸೇತ್　　॥ ೩೭ ॥**

**ಧ್ವಜಹಸ್ತಂ ಮಹಾಬಾಹುಂ ಮರುದ್ಭಿಶ್ಚೋಪಸೇವಿತಂ।**
**ದ್ವಿಭುಜಂ ಧೂಮ್ರವರ್ಣಂ ಚ ವಾಯುಂ ಧ್ಯಾತ್ವಾ ಪ್ರಪೂಜಯೇತ್ ॥೩೮॥**

**ರಾಜಾನ ಇತಿಮಂತ್ರೇಣ ಪೂಜಯೇತ್ಸಿತತಂಡುಲೈಃ।**
**ಋಷಿರ್ನಾರಾಯಣಶ್ಛಂದೋ ಗಾಯತ್ರೀ ದೇವತಾ ದ್ವಿಜಾಃ　　॥ ೩೯ ॥**

---

೩೬. ಶುಕ್ಲವರ್ಣನೂ, ಋಷಿಸಮೂಹದಿಂದ ಸ್ತುತಿಸಲ್ಪಟ್ಟವನೂ, ಕಲಶದಲ್ಲಿರುವವನೂ, ಎರಡು ಭುಜಗಳುಳ್ಳವನೂ, ಗದೆ ಪದ್ಮ ಇವುಗಳನ್ನು ಧರಿಸಿರುವವನೂ; ಆದ ಆಕಾಶವೆಂಬ ದೇವತೆಯನ್ನು ಧ್ಯಾನಮಾಡಬೇಕು.

೩೭. 'ಶಂನೋ ದೇವೀ' ಎಂಬ ಮಂತ್ರಪೂರ್ವಕವಾಗಿ ಗಂಧ ಹೂವು ಮೊದಲಾದುವುಗಳಿಂದ ಪೂಜಿಸಬೇಕು. ಎಲೈ ಬ್ರಾಹ್ಮಣರೇ! ಕೇಳಿ; ಈ ಮಂತ್ರಕ್ಕೆ ಕರ್ದಮನೆಂಬುವನು ಋಷಿ, ಜಗತೀಯೆಂಬುದೇ ಛಂದಸ್ಸು, ಅಗ್ನಿಯೇ ದೇವತೆ, ಆಕಾಶದೇವತಾಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೩೮. ಧ್ವಜವನ್ನು ಕೈಯಲ್ಲಿ ಹಿಡಿದಿರುವವನೂ, ಉದ್ದವಾದ ತೋಳುಗಳುಳ್ಳವನೂ, ಸಪ್ತಮರುತ್ತುಗಳಿಂದ ಸೇವಿಸಲ್ಪಡುವವನೂ, ಎರಡು ಭುಜಗಳುಳ್ಳವನೂ, ಧೂಮ್ರವರ್ಣದವನೂ, ಆದ ವಾಯುವನ್ನು ಧ್ಯಾನಮಾಡಿ ಪೂಜಿಸಬೇಕು.

೩೯. 'ರಾಜಾನ' ಎಂಬ ಮಂತ್ರದಿಂದ ಯವಾಕ್ಷತೆಯನ್ನು ಪೂಜಿಸಬೇಕು. ಓ ಬ್ರಾಹ್ಮಣರೇ! ಈ ಮಂತ್ರಕ್ಕೆ ನಾರಾಯಣನು ಋಷಿ, ಗಾಯತ್ರಿಯೆಂಬುದೇ ಛಂದಸ್ಸು;

ದೇವತಾ ಚ ಭವೇದ್ವಾಯುಃ ಪ್ರೀತಯೇ ತಸ್ಯ ಯೋಜಯೇತ್ ।
ಪೂಷಾ ರಕ್ತಶ್ಚ ದ್ವಿಭುಜೋ ರಕ್ತಪದ್ಮಾಸನಸ್ಥಿತಃ ॥ ೪೦ ॥

ರಾಜಾನ ಇತಿ ಚ ಋಚಾ ಪೂಜಯೇದ್ಗಂಧಚಂದನೈಃ ।
ಗೋಭಿಲೋಽಸ್ಯ ಋಷಿಃ ಪಂಕ್ತಿಶ್ಛಂದೋಽಥ ಜಗತೀ ಸ್ಮೃತಂ ॥
ದೇವತಾ ಚ ಭವೇದ್ವಾಯುಃ ಪ್ರೀತಯೇ ವಿನಿಯೋಜಯೇತ್ ॥ ೪೧ ॥

ವಿತಥಂ ಶ್ಯಾಮವರ್ಣಂ ಚ ಚತುರ್ಭಿರ್ಬಾಹುಭಿರ್ವೃತಂ ।
ಮೃಗಾಕ್ಷಪಾಶಖಟ್ವಾಂಗ ಶೂಲಂ ಚ ದಧತಂ ಕರೈಃ ॥ ೪೨ ॥

ಮೇಷಾರೂಢಂ ವಿಶಾಲಾಕ್ಷಂ ರಾಜಾನೋ ಮಹ್ಯಮೀರಯನ್ ।
ಗೃಹರಕ್ಷಂ ತಥಾ ಶುಕ್ಲಂ ಚತುರ್ಭಿರ್ಗರ್ಧಭೈರ್ವೃತಂ ॥
ಶೂಲಂ ದಂಡಂ ಚ ಖಟ್ವಾಂಗಂ ದಧತಂ ವೃಷವಾಹನಂ ॥ ೪೩ ॥

---

೩೦. ವಾಯುವೇ ದೇವತೆ, ವಾಯುಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು. ಇವನು ಕೆಂಪುಬಣ್ಣದ ದೇಹವುಳ್ಳವನೂ, ಎರಡು ಬಾಹುಗಳುಳ್ಳವನೂ, ಕೆಂದಾವರೆಯ ಪೀಠದಲ್ಲಿ ಕುಳಿತಿರುವವನೂ, ಎಂದು ಕೆಲವರು ಹೇಳುವರು.

೪೧. 'ರಾಜಾನ' ಎಂಬ ಮಂತ್ರಪೂರ್ವಕವಾಗಿ ಶ್ರೀಗಂಧ ಚಂದನಗಂಧಗಳನ್ನು ಪೂಜಿಸಬೇಕು. ಈ ಮಂತ್ರಕ್ಕೆ ಗೋಭಿಲನು ಋಷಿ, ಪಂಕ್ತಿ ಎಂಬುದೂ ಜಗತಿ ಎಂಬುದೂ ಛಂದಸ್ಸುಗಳು, ವಾಯುವೇ ದೇವತೆ, ವಾಯುವಿನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೪೨. ಶ್ಯಾಮವರ್ಣನೂ ನಾಲ್ಕು ಬಾಹುಗಳಿಂದ ಯುಕ್ತನೂ, ಜಿಂಕೆ, ಅಕ್ಷಮಾಲೆ, ಪಾಶ, ಖಟ್ವಾಂಗ ಶೂಲ, ಇವುಗಳನ್ನು ಕೈಗಳಲ್ಲಿ ಧರಿಸಿರುವವನೂ; ಮೇಷವಾಹನನೂ, ವಿಸ್ತಾರವಾದ ಕಣ್ಣುಗಳುಳ್ಳವನೂ, ಆದ ವಿತಥನನ್ನು 'ರಾಜಾನೋ ಮಹ್ಯಂ' ಎಂಬ ಮಂತ್ರಪೂರ್ವಕವಾಗಿ ಪೂಜಿಸಬೇಕು.

೪೩. ಬಿಳಿಯ ಬಣ್ಣದ ದೇಹವುಳ್ಳವನೂ, ನಾಲ್ಕು ಕತ್ತೆಗಳಿಂದ ಆವರಿಸಲ್ಪಟ್ಟವನೂ, ಶೂಲ ದಂಡಾಯುಧ ಖಟ್ವಾಂಗ ಇವುಗಳನ್ನು ಧರಿಸಿರುವವನೂ, ವೃಷಭಾರೂಢನೂ ಆಗಿರುತ್ತಾ,

**ಪೀತವಸ್ತ್ರಧರಂ ದೇವಂ ಜಟಾಮುಕುಟಸಂಯುತಂ ।**
**ಆಶುಶ್ಶಿಶಾನ ಇತಿಮಂತ್ರೇಣ ಪೂಜಯೇದ್ಗಂಧಚಂದನೈಃ ॥ ೪೪ ॥**

**ಪುಷ್ಪದಂತಋಷಿಸ್ತ್ರಿಷ್ಟುಪ್ಛಂದಶ್ಚ ಪರಿಕೀರ್ತಿತಂ ।**
**ಈಶ್ವರಸ್ಯ ದೇವತಾಯಾಃ ಪ್ರೀತಯೇ ವಿನಿವೇದಯೇತ್ ॥ ೪೫ ॥**

**ಯಮಂ ಧ್ಯಾಯೇತ್ಕೃಷ್ಣವರ್ಣಂ ಮಹಿಷಸ್ಥಂ ದ್ವಿಬಾಹುಕಂ ।**
**ದಂಡಪಾಶಧರಂ ಚೈವ ಕೇಯೂರಾದ್ಯೈರ್ವಿಭೂಷಿತಂ ॥ ೪೬ ॥**

**ಈಶಾನೇತಿ ಚ ಮಂತ್ರೇಣ ಪೂಜಯೇತ್ಕುಸುಮಾದಿನಾ ।**
**ವಾಮದೇವಋಷಿಃ ಪಂಕ್ತಿಶ್ಛಂದಃ ಕಾಲೋಽಸ್ಯ ದೇವತಾ ॥ ೪೭ ॥**

---

೪೪. ಹಳದಿಯ ವಸ್ತ್ರವನ್ನು ಧರಿಸಿರುವವನೂ, ಜಡೆ ಕಿರೀಟ ಇವುಗಳಿಂದ ಕೂಡಿದವನೂ, ಆದ ಗೃಹರಕ್ಷನೆಂಬ ದೇವತೆಯನ್ನು 'ಆಶುಶ್ಶಿಶಾನ' ಎಂಬ ಮಂತ್ರ ಪೂರ್ವಕವಾಗಿ ಶ್ರೀಗಂಧ ಚಂದನ ಮುಂತಾದ ಪೂಜಾಸಾಮಗ್ರಿಗಳಿಂದ ಪೂಜಿಸ ಬೇಕು.

೪೫. 'ಆಶುಶ್ಶಿಶಾನ' ಎಂಬ ಮಂತ್ರಕ್ಕೆ ಪುಷ್ಪದಂತನೇ ಋಷಿಯು, ತ್ರಿಷ್ಟುಪ್ ಎಂಬುದೇ ಛಂದಸ್ಸು, ಈಶ್ವರನೇ ದೇವತೆ, ಗೃಹರಕ್ಷನ ಪ್ರೀತ್ಯರ್ಥವಾಗಿ ಈ ಮಂತ್ರ ವನ್ನು ವಿನಿಯೋಗಿಸಬೇಕು.

೪೬. ಅನಂತರ ಕಪ್ಪಾದ ಮೈಬಣ್ಣವುಳ್ಳವನೂ, ಮಹಿಷವಾಹನನೂ, ಎರಡು ಬಾಹುಗಳುಳ್ಳವನಾಗಿ ಅವುಗಳಲ್ಲಿ ದಂಡಾಯುಧ ಪಾಶ ಇವುಗಳನ್ನು ಧರಿಸಿರುವವನೂ, ಕೇಯೂರ (ಬಾಹುಪೂರ) ಮೊದಲಾದ ಆಭರಣಗಳಿಂದ ಅಲಂಕೃತನೂ ಆದ ಯಮ ನನ್ನು ಧ್ಯಾನಮಾಡಬೇಕು.

೪೭. 'ಈಶಾನಸ್ಸರ್ವ' ಎಂಬ ಮಂತ್ರಪೂರ್ವಕವಾಗಿ ಹೂವು ಮೊದಲಾದುವು ಗಳಿಂದ ಪೂಜಿಸಬೇಕು. ಈ ಮಂತ್ರಕ್ಕೆ ವಾಮದೇವನು ಋಷಿ, ಪಂಕ್ತಿಯೆಂಬುದು ಛಂದಸ್ಸು, ಕಾಲನೇ ದೇವತೆ, ಕಾಲನಪ್ರೀತ್ಯರ್ಥವಾಗಿ ಈ ಮಂತ್ರವು ವಿನಿಯೋಗವಾ ಗಬೇಕು.

**ಷಡಾನನಂ ಚ ಗಂಧರ್ವಂ ಪೀತಂ ಧ್ಯಾಯೇಚ್ಚತುರ್ಭುಜಂ।**
**ಪೀತಾಂಬರಧರಂ ಚೈವ ನಾನಾಭರಣಭೂಷಿತಂ ॥ ೪೮ ॥**

**ಯದ್ದೇವ ಇತಿ ಮಂತ್ರೇಣ ಪೂಜಯೇತ್ಕುಸುಮಾದಿನಾ।**
**ಹಾರೀತೋऽಸ್ಯ ಋಷಿಃ ಪ್ರೋಕ್ತೋ ಜಗತೀಛಂದ ಈರಿತಂ॥**
**ಹಿರಣ್ಯಗರ್ಭೋ ದೇವತಾಸ್ಯ ಪ್ರೀತಯೇ ವಿನಿಯೋಜಯೇತ್ ॥ ೪೯ ॥**

**ಭೃಂಗರಾಜಂ ಜಟಾರೂಢಂ ಸ್ವಚ್ಛಂ ಪೀತಾಂಬರಂ ಶುಭಂ।**
**ಚಕ್ಷುಃ ಪೀತೇತಿ ಮಂತ್ರೇಣ ಪೂಜಯೇದ್ಗಂಧಚಂದನೈ ॥ ೫೦ ॥**

**ಋಷಿಶ್ಚಾಗಸ್ತಿರಾಖ್ಯಾತಸ್ತ್ರಿಷ್ಟುಪ್ಛಂದಃ ಪ್ರಕೀರ್ತಿತಂ।**
**ವಿಶ್ವೇದೇವಾ ದೇವತಾ ಚ ಭೃಂಗರಾಜಸ್ಯ ಪ್ರೀತಯೇ ॥ ೫೧ ॥**

---

೪೮. ಹಳದಿಬಣ್ಣದ ದೇಹವುಳ್ಳವನೂ, ನಾಲ್ಕುಭುಜಗಳುಳ್ಳವನೂ, ಹಳದಿಯವಸ್ತ್ರವನ್ನು ಧರಿಸಿದವನೂ, ವಿವಿಧವಾದ ಒಡವೆಗಳಿಂದ ಅಲಂಕೃತನೂ ಆದ ಷಡಾನನ ಗಂಧರ್ವನನ್ನು ಧ್ಯಾನಿಸಬೇಕು.

೪೯. 'ಯದ್ದೇವಾ' ಎಂಬ ಮಂತ್ರಪೂರ್ವಕವಾಗಿ ಹೂವು ಮುಂತಾದುವುಗಳಿಂದ ಪೂಜಿಸಬೇಕು. ಈ ಮಂತ್ರಕ್ಕೆ ಹಾರೀತನು ಋಷಿ, ಜಗತೀ ಎಂಬುದು ಛಂದಸ್ಸು, ಹಿರಣ್ಯಗರ್ಭನೇ ದೇವತೆ, ಹಿರಣ್ಯಗರ್ಭನಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೫೦. ಜಟೆಗಳನ್ನೇರಿಸಿಕೊಂಡಿರುವವನೂ, ನಿರ್ಮಲವಾದ ಮೈಬಣ್ಣವುಳ್ಳವನೂ ಹಳದಿಯವಸ್ತ್ರವನ್ನು ಧರಿಸಿರುವವನೂ, ಶುಭಕರನೂ ಆದ ಭೃಂಗರಾಜನನ್ನು 'ಚಕ್ಷುಃ ಪೀತಾ' ಎಂಬ ಮಂತ್ರಪೂರ್ವಕವಾಗಿ, ಶ್ರೀಗಂಧ ಚಂದನ ಮುಂತಾದ ದ್ರವ್ಯಗಳಿಂದ ಪೂಜಿಸಬೇಕು.

೫೧. ಈ ಮಂತ್ರಕ್ಕೆ ಅಗಸ್ತಿಯೇ ಋಷಿ, ತ್ರಿಷ್ಟುಪ್ ಎಂಬುದೇ ಛಂದಸ್ಸು, ವಿಶ್ವೇದೇವರೇ ದೇವತೆಗಳು, ಭೃಂಗರಾಜನಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

ಪೀತಂ ಮೃಗಂ ಮೃಗಾರೂಢಂ ಜಟಾಮುಕುಟಮಂಡಿತಂ ।
ಪರೋ ದೇವಾಇತಿಮಂತ್ರೇಣ ಪೂಜಯೇದ್ಬಲಿಪಾಯಸೈಃ ॥ ೫೨ ॥

ಕಪಿಲಶ್ಚ ಋಷಿಃ ಪ್ರೋಕ್ತೋ ಗಾಯತ್ರೀ ಛಂದ ಈರಿತಂ ।
ವರುಣೋ ದೇವತಾ ಚಾಸ್ಯ ಪ್ರೀತಯೇ ವಿನಿಯೋಜಯೇತ್ ॥ ೫೩ ॥

ಧ್ಯಾಯೇತ್ಪಿತೃಗಣಂ ಶುಕ್ಲಂ ಚತುರ್ಭಿರ್ಬಾಹುಭಿರ್ವೃತಂ ।
ಪಿತೃಭ್ಯ ಇತಿ ಮಂತ್ರೇಣ ಪೂಜಯೇತ್ಕುಸುಮಾದಿನಾ ॥ ೫೪ ॥

ಶುನಃಶ್ಯೇಫಋಷಿಶ್ಚಾಸ್ಯ ತ್ರಿಷ್ಟುಪ್ಛಂದಶ್ಚ ದೇವತಾ ।
ವಿಶ್ವೇದೇವಾಃ ಸಮಾಖ್ಯಾತಾಃ ಪಿತೃಮೇಧೇನ ಪೂಜಯೇತ್ ॥ ೫೫ ॥

ದೌವಾರಿಕಂ ಚಾಷ್ಟಭುಜಂ ಕೃಷ್ಣವರ್ಣಂ ವಿಚಿಂತಯೇತ್ ।
ರಕ್ತವಸ್ತ್ರಂ ಪಿಂಗಲಾಕ್ಷಂ ಕೃಷ್ಣವ್ಯಾಘ್ರೋಪರಿ ಸ್ಥಿತಂ ॥ ೫೬ ॥

---

೫೨. ಹಳದಿಯಬಣ್ಣದ ದೇಹವುಳ್ಳವನೂ, ಜಿಂಕೆಯನ್ನೇ ವಾಹನಮಾಡಿಕೊಂಡಿರುವವನೂ, ಜಟಾ ಕಿರೀಟ ಇವುಗಳಿಂದ ಅಲಂಕೃತನೂ ಆದ ಮೃಗ ಎಂಬ ದೇವತೆಯನ್ನು 'ಪರೋದೇವಾ' ಎಂಬ ಮಂತ್ರಪೂರ್ವಕವಾಗಿ ಪೂಜಿಸಿ ಪಾಯಸ ಮೊದಲಾದುವುಗಳಿಂದ ಬಲಿಪ್ರದಾನಮಾಡಬೇಕು.

೫೩. ಈ ಮಂತ್ರಕ್ಕೆ ಕಪಿಲನೇ ಋಷಿ, ಗಾಯತ್ರಿಯೆಂಬುದೇ ಛಂದಸ್ಸು, ವರುಣನೇ ದೇವತೆ, ವರುಣಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೫೪. ಆಮೇಲೆ ಬಿಳಿಯಮೈಬಣ್ಣ, ನಾಲ್ಕುತೋಳು ಇವುಗಳಿಂದ ಕೂಡಿ ಪಿತೃಗಣವನ್ನು ಧ್ಯಾನಮಾಡಿ 'ಪಿತೃಭ್ಯಃ' ಎಂಬ ಮಂತ್ರ ಪೂರ್ವಕ ಹೂವು ಮೊದಲಾದುವುಗಳಿಂದ ಪೂಜಿಸಬೇಕು.

೫೫. ಈ ಮಂತ್ರಕ್ಕೆ ಶುನಶ್ಯೇಫನು ಋಷಿ, ತ್ರಿಷ್ಟುಪ್ ಎಂಬುದೇ ಛಂದಸ್ಸು, ವಿಶ್ವೇದೇವರೇ ದೇವತೆಗಳು, ಪಿತೃಮೇಧದಲ್ಲಿ ಪ್ರಯೋಗಿಸುವಂತೆ ಈ ಮಂತ್ರವನ್ನು ಉಪಯೋಗಿಸಬೇಕು.

೫೬. ಅನಂತರ ಕಪ್ಪಾದ ಮೈಬಣ್ಣವುಳ್ಳವನೂ, ಎಂಟುಭುಜಗಳುಳ್ಳವನೂ, ಕೆಂಪುವಸ್ತ್ರವನ್ನು ಧರಿಸಿರುವವನೂ, ಪಿಂಗಳವರ್ಣದ ಕಣ್ಣುಳ್ಳವನೂ, ಕಪ್ಪುಪಟ್ಟೆ

ಯೋ ನಃ ಪಿತೇತಿ ಮಂತ್ರೇಣ ಪೂಜಯೇದ್ಭಕ್ತಿತತ್ಪರಃ ॥ ೫೭ ॥

ವೈಶ್ವಾನರಋಷಿಶ್ಚಾಸ್ಯ ಗಾಯತ್ರೀ ಛಂದ ಈರಿತಂ ।
ದೇವತಾ ಚ ಭವೇಚ್ಛಕ್ತಿಃ ವಿನಿಯೋಗಶ್ಚ ಪೂಜನೇ ॥ ೫೮ ॥

ಶಂಖಾಭಂ ಚೈವ ಸುಗ್ರೀವಂ ದ್ವಿಭುಜಂ ಚಕ್ರಧಾರಿಣಂ ।
ಹಂಸಾರೂಢಂ ಮಹಾಕಾಯಂ ಬಲಿವಿಜ್ಞಾನಕಾರಣಂ ॥ ೫೯ ॥

ಶಂಖಂ ಪದ್ಮರದಂ ಚೈವ ಮಹಿಷಸ್ಥಂ ವಿಚಿಂತಯೇತ್ ।
ಸ ಇಷು ಹಸ್ತೇತಿ ಮಂತ್ರೇಣ ಪೂಜಯೇದ್ರಕ್ತಭೂಷಣೈಃ ॥ ೬೦ ॥

ಋಷಿಃ ಶಂಖಸ್ತಥಾ ಛಂದಃ ಪಂಕ್ತಿಃ ಸೋಮೋಽಥ ದೇವತಾ ।
ಶ್ವೇತಂ ಜಲಾಧಿಪಂ ಧ್ಯಾಯೇದ್ಗಂಧರ್ವಾದ್ಯೈಶ್ಚ ವೇಷ್ಟಿತಂ ॥ ೬೧ ॥

---

ಯುಳ್ಳ ಹುಲಿಯಮೇಲೆ ಕುಳಿತಿರುವವನೂ ಆದ ದೌವಾರಿಕನೆಂಬ ದೇವತೆಯನ್ನು ಪೂಜಿಸಬೇಕು.

೫೭-೫೮. ಹಾಗೆ ಆ ದೇವತೆಯನ್ನು ಪೂಜಿಸುವಾಗ 'ಯೋನಃ ಪಿತಾ' ಎಂಬ ಮಂತ್ರಪೂರ್ವಕವಾಗಿ ಭಕ್ತಿಯಿಂದ ಪೂಜಿಸಬೇಕು. ಈ ಮಂತ್ರಕ್ಕೆ ವೈಶ್ವಾನರನು ಋಷಿ, ಗಾಯತ್ರೀ ಎಂಬುದು ಛಂದಸ್ಸು, ಶಕ್ತಿಯು ದೇವತೆ, ಆ ದೇವತೆಯು ಪೂಜೆಯಲ್ಲಿ ಈ ಮಂತ್ರವನ್ನು ವಿನಿಯೋಗಿಸಬೇಕು.

೫೯. ಶಂಖದಂತೆ ಬೈಬಣ್ಣವುಳ್ಳವನೂ, ಎರಡುಭುಜಗಳಿಂದ ಕೂಡಿದವನೂ ಚಕ್ರಾಯುಧವನ್ನು ಧರಿಸಿದವನೂ, ಹಂಸವಾಹನನೂ, ದೊಡ್ಡಶರೀರವುಳ್ಳವನೂ, ಬಲ ವಿಜ್ಞಾನ ಇವುಗಳಿಗೆ ಕಾರಣನೂ ಆದ ಸುಗ್ರೀವನನ್ನು ಪೂಜಿಸಬೇಕು.

೬೦. ಶಂಖಾಯುಧವನ್ನು ಧರಿಸಿರುವವನೂ, ಮಹಿಷವನ್ನೇ ವಾಹನವಾಗಿ ಉಳ್ಳವನೂ, ಪದ್ಮಪುಷ್ಪದಂತೆ ರದನವುಳ್ಳವನೂ ಆದ ಪುಷ್ಪದಂತನನ್ನು ಧ್ಯಾನಿಸಬೇಕು. ಬಳಿಕ 'ಸ ಇಷುಹಸ್ತಾ' ಎಂಬ ಮಂತ್ರಪೂರ್ವಕವಾಗಿ ಕೆಂಪುಬಣ್ಣದ ವಸ್ತ್ರ ಮತ್ತು ಆಭರಣಗಳಿಂದ ಆ ದೇವನನ್ನು ಪೂಜಿಸಬೇಕು.

೬೧. ಈ ಮಂತ್ರಕ್ಕೆ ಶಂಖನೇ ಋಷಿ, ಪಂಕ್ತಿಯೆಂಬುದೇ ಛಂದಸ್ಸು, ಸೋಮನೇ ದೇವತೆ, ಅವನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

ಋಷ್ಯಾಸನಗತಂ ಧ್ಯಾಯೇಚ್ಛ್ವೇತಗಂಧೇನ ಚಾರ್ಚಯೇತ್ ।
ಬೃಹಸ್ಪತೇ ಪರಿದೀಯಾ ಇತಿ ಮಂತ್ರೇಣ ಭಕ್ತಿತಃ ॥ ೬೨ ॥

ತ್ರ್ಯಂಬಕೋಽಸ್ಯ ಋಷಿಸ್ತ್ರಿಷ್ಟುಪ್ಛಂದೋ ದೇವೋ ಜಲಾಧಿಪಃ ।
ಧ್ಯಾಯೇಚ್ಚ ಅಸುರಂ ರಕ್ತಂ ಕರಾಲಂ ನರವಾಹನಂ ॥ ೬೩ ॥

ದಶಭಿರ್ಬಾಹುಭಿರ್ಯುಕ್ತಂ ಕೃಷ್ಣವಸ್ತ್ರಾನುಲೇಪನಂ ।
ಶನ್ನೋ ದೇವೀತಿ ಮಂತ್ರೇಣ ಕೃಷ್ಣಪುಷ್ಪೈಃ ಪ್ರಪೂಜಯೇತ್ ॥ ೬೪ ॥

ಋಷಿರ್ವೈಶ್ವಾನರಶ್ಛಂದೋ ವಿರಾಡಿತ್ಯಭಿಧೀಯತೆ ।
ವೈಶ್ವಾನರೋತ್ತರೋ ದೇವಃ ಪ್ರೀತಯೇ ತಸ್ಯ ಯೋಜಯೇತ್ ॥ ೬೫ ॥

---

೬೨. ಬಿಳಿದಾದ ಮೈಬಣ್ಣವುಳ್ಳವನೂ, ಗಂಧರ್ವರಿಂದ ಸುತ್ತುವರಿಯಲ್ಪಟ್ಟಿರುವವನೂ, ಋಷಿಗಳಂತೆ ಆಸನಹಾಕಿ ಕುಳಿತವನೂ ಆದ, ಜಲಾಧಿಪತಿ ವರುಣನನ್ನು ಧ್ಯಾನಿಸಬೇಕು. ಬಳಿಕ ಶ್ರೀಗಂಧ ಮೊದಲಾದ ದ್ರವ್ಯಗಳಿಂದ 'ಬೃಹಸ್ಪತೇ ಪರಿದೀಯಾ' ಎಂಬ ಮಂತ್ರಪೂರ್ವಕವಾಗಿ ಭಕ್ತಿಯುಕ್ತನಾಗಿ ಪೂಜಿಸಬೇಕು.

೬೩. ಈ ಮಂತ್ರಕ್ಕೆ ತ್ರ್ಯಂಬಕನೇ ಋಷಿ, ತ್ರಿಷ್ಟುಪ್ಪೇ ಛಂದಸ್ಸು, ಜಲಾಧಿಪನೇ ದೇವತೆ, ವರುಣಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು. ರಕ್ತವರ್ಣನೂ, ಕ್ರೂರಸ್ವರೂಪನೂ, ಮನುಷ್ಯವಾಹನನೂ ಎನಿಸಿ

೬೪. ಹತ್ತುತೋಳುಗಳುಳ್ಳವನೂ; ಕಪ್ಪುಬಣ್ಣದ ವಸ್ತ್ರವನ್ನೂ, ಕಪ್ಪುಬಣ್ಣದ ಅನುಲೇಪನವನ್ನೂ ಧರಿಸಿದವನೂ; ಆದ ಅಸುರನೆಂಬ ದೇವತೆಯನ್ನು ಧ್ಯಾನಿಸಬೇಕು. 'ಶನ್ನೋ ದೇವೀ' ಎಂಬ ಮಂತ್ರಪೂರ್ವಕವಾಗಿ ನೀಲಪುಷ್ಪಗಳಿಂದ ಪೂಜೆ ಮಾಡಬೇಕು.

೬೫. ಈ ಮಂತ್ರಕ್ಕೆ ವೈಶ್ವಾನರನೆಂಬುವನು ಋಷಿ, ವಿರಾಟ್ ಎಂಬುದು ಛಂದಸ್ಸು. ವೈಶ್ವಾನರನೇ ಶ್ರೇಷ್ಠವಾದ ದೇವತೆ; ಅವನ ಪ್ರೀತ್ಯರ್ಥವಾಗಿಯೇ ಈ ಮಂತ್ರವನ್ನು ವಿನಿಯೋಗಿಸಬೇಕು.

ಶೇಷಂ ಷಡಾನನಂ ಧ್ಯಾಯೇತ್ಕೃಷ್ಣಂ ಚ ಮಧುಪಿಂಗಲಂ ।
ಮೇಷಸ್ಥಂ ಕುಂಡಲೋಪೇತಂ ನಾಗಯಜ್ಞೋಪವೀತಿನಂ ॥ ೬೬ ॥

ಉದ್ವರ್ಷ ಇತಿ ಮಂತ್ರೇಣ ಪೂಜಯೇದ್ಭೂತಿಮಿಚ್ಛತಾ ।
ಪಶುಂ ರಕ್ತಂ ತ್ರಿಣೇತ್ರಂ ಚ ರಕ್ತಂ ಪ್ರಾಂತೇ ವಿಚಿಂತಯೇತ್ ॥
ರಕ್ತಶ್ಮಶ್ರುಧರಂ ಚೈವ ವರಹಸ್ತಂ ವಿಚಿಂತಯೇತ್ ॥ ೬೭ ॥

ಸಿದ್ಧೋ ವಿರೇತಿ ಮಂತ್ರೇಣ ಕೃಷ್ಣಪುಷ್ಪೈರಥಾರ್ಚಯೇತ್ ।
ಯಮಂ ಚ ಕೃಕರಾಕ್ಷಂ ಚ ಆಕುಂಚನ್ಮೂರ್ಧಜಂ ದ್ವಿಜಾಃ ॥ ೬೮ ॥

ಕಪಿಲೋಽನ್ಯಋಷಿಶ್ಛಂದೋಽನುಷ್ಟುಪ್ಚೈವ ಪ್ರಕೀರ್ತಿತಂ ।
ದೇವತಾ ಚ ಯಶಃ ಖ್ಯಾತಂ ಪ್ರೀತಯೇ ವಿನಿಯೋಜಯೇತ್ ॥ ೬೯ ॥

---

೬೬. ಸರ್ಪಸ್ವರೂಪನೂ, ಆರುಮುಖಗಳುಳ್ಳವನೂ, ಕಪ್ಪುಬಣ್ಣವುಳ್ಳವನೂ, ಜೇನುತುಪ್ಪದಂತೆ ಪಿಂಗಳವರ್ಣದ ಕಣ್ಣುಗಳುಳ್ಳವನೂ, ಮೇಷವಾಹನನೂ, ಕುಂಡಲಗಳನ್ನು ಧರಿಸಿರುವವನೂ ಆದ ಷಣ್ಮುಖ ಸುಬ್ರಹ್ಮಣ್ಯನನ್ನು ಧ್ಯಾನಿಸಬೇಕು.

೬೭. ಐಶ್ವರ್ಯವನ್ನು ಅಪೇಕ್ಷಿಸುವವನು 'ಉದ್ವರ್ಷಾ' ಎಂಬ ಮಂತ್ರ ಹೇಳಿ ಪೂಜಿಸಬೇಕು. ಅನಂತರ ಕೆಂಪಾದ ದೇಹವುಳ್ಳವನೂ, ಮೂರುಕಣ್ಣುಗಳುಳ್ಳವನೂ ರಕ್ತವಾದ ಪ್ರಾಂತಭಾಗವುಳ್ಳವನೂ, ಕೆಂಪುಮೀಸೆಯುಳ್ಳವನೂ, ವರದಹಸ್ತವುಳ್ಳವನೂ, ಆದ ಪಶು ಎಂಬ ದೇವತೆಯನ್ನು ಧ್ಯಾನಿಸಬೇಕು.

೬೮. ಎಲೈ ಬ್ರಾಹ್ಮಣರೇ; ಸ್ವಲ್ಪ ಗುಂಗುರಾದ ಕೂದಲುಳ್ಳವನೂ, ಮುಚ್ಚಿ ಮುಚ್ಚಿ ತೆಗೆಯುವ ಕಣ್ಣುಗಳುಳ್ಳವನೂ, ಆದ ಯಮನನ್ನು 'ಸಿದ್ಧೋವೀರ' ಎಂಬ ಮಂತ್ರಪೂರ್ವಕವಾಗಿ ನೀಲಪುಷ್ಪಗಳಿಂದ ಅರ್ಚಿಸಬೇಕು. ಅನಂತರ ಪಾಶಾಯುಧಧಾರಿಯಾದ ಅವನನ್ನು ಚೆನ್ನಾಗಿ ಧ್ಯಾನಮಾಡಬೇಕು.

೬೯. ಈ ಮಂತ್ರಕ್ಕೆ ಕಪಿಲನು ಋಷಿ, ಅನುಷ್ಟುಪ್ ಎಂಬುದು ಛಂದಸ್ಸು, ಯಶ ಎಂಬವನೇ ದೇವತೆ ಎಂದು ಪ್ರಸಿದ್ಧಿಯಿರುವುದು. ಆ ದೇವತಾಪ್ರೀತಿಗಾಗಿ ಇದನ್ನು ವಿನಿಯೋಗಿಸಬೇಕು.

**ಅಮುಯಂ ಕೃಕರಾಕ್ಷಂ ಚ ಸಮಾಕುಂಚಿತಮೂರ್ಧಜಂ ।**
**ಖರಸ್ಥಂ ದ್ವಿಭುಜಂ ಧ್ಯಾಯೇದಿಮಂ ಮಂತ್ರಮುದೀರಯೇತ್ ॥ ೨೦ ॥**

**ವಾಸುಕಿಃ ಸ್ಯಾದೃಷಿಶ್ಛಾಽಸ್ಯ ಪಂಕ್ತಿಶ್ಛಂದಶ್ಚ ದೇವತಾ ।**
**ಹಿರಣ್ಯಗರ್ಭ ಇತ್ಯುಕ್ತಃ ಪ್ರೀತಯೇಽಸ್ಯ ನಿಯೋಜಯೇತ್ ॥ ೨೧ ॥**

**ಅರ್ಧಪೀತಂ ಚ ದ್ವಿಭುಜಂ ರಕ್ತಾಕ್ಷಂ ಧೂಮ್ರಮೇವ ವಾ ।**
**ದೇವತಾಭಿಶ್ಚ ಸಂಪನ್ನಂ ವಾತೋವಾರೇತಿರೇವ ಚ ॥ ೨೨ ॥**

**ಋಷಿರ್ವಾಯುಶ್ಚ ಗಾಯತ್ರೀ ಛಂದೋ ವಾಯುಶ್ಚ ದೇವತಾ ॥ ೨೩ ॥**

**ಮುಗ್ಧರಕ್ತಂ ಶಂಖಚಕ್ರಗದಾಪದ್ಮಧರಂ ತಥಾ ।**
**ಪೀತವಸ್ತ್ರಂ ಪನ್ನಗಸ್ಥಂ ಹಾರಕೇಯೂರಮಂಡಿತಂ ॥ ೨೪ ॥**

---

೨೦. (ನೈರುತ್ಯಮೂಲೆಯ ನಾಲ್ಕು ಪದಕಗಳಲ್ಲಿ ಆವಾಹಿಸುವ ದೇವತೆಗಳು) ಪದೇಪದೇ ಮುಚ್ಚಿತೆರೆಯುವ ರೆಪ್ಪೆಯುಳ್ಳವನೂ, ಗುಂಗುರಾದ ಕೂದಲುಳ್ಳವನೂ, ಖರವಾಹನನೂ, ಬಹುತೀಕ್ಷ್ಣತೆ ಉಗ್ರಭಾವಗಳಿಂದ ಕೂಡಿರುವವನೂ, ಎರಡು ಭುಜಗಳುಳ್ಳವನೂ ಆದ "ರೋಗ"ನನ್ನು ಧ್ಯಾನಿಸಿ ಈ ಮಂತ್ರವನ್ನು ಹೇಳಬೇಕು.

೨೧. ಈ ಮಂತ್ರಕ್ಕೆ ವಾಸುಕಿಯು ಋಷಿ, ಪಂಕ್ತಿ ಎಂಬುದು ಛಂದಸ್ಸು, ಹಿರಣ್ಯಗರ್ಭನು ದೇವತೆ; ಈ ದೇವನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ಉಪಯೋಗಿಸಬೇಕು.

೨೨. ಅರ್ಧಪಾನಮಾಡಲ್ಪಟ್ಟ ದೇಹವುಳ್ಳವನೂ, ಎರಡುಭುಜಗಳುಳ್ಳವನೂ, ಕೆಂಪಾದ ಕಣ್ಣುಗಳುಳ್ಳವನೂ, ಧೂಮ್ರವರ್ಣದವನೂ, ದೇವತೆಗಳಿಂದ ಪರಿವೃತನಾದವನೂ ಆದ ಅಹಿದೇವನನ್ನು 'ವಾತೋವಾರೇತಿ' ಎಂಬ ಮಂತ್ರದಿಂದ ಪೂಜಿಸಬೇಕು.

೨೩. ಮಂತ್ರಕ್ಕೆ ವಾಯುವೇ ಋಷಿ, ಗಾಯತ್ರಿಯೇ ಛಂದಸ್ಸು, ವಾಯುವೇ ದೇವತೆ, ಅಹಿಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೨೪. ಮೋಹನರೂಪನೂ, ಶಂಖಚಕ್ರ ಗದಾಪದ್ಮ ಇವುಗಳನ್ನು ಹಿಡಿದಿರುವವನೂ, ಹಳದಿಯವಸ್ತ್ರವನ್ನು ಧರಿಸಿರುವವನೂ, ಆದಿಶೇಷನ ಮೇಲೆ ಮಲಗಿರುವವನೂ, ಹಾರ ಮತ್ತು ಬಾಹುಪೂರಗಳಿಂದ ಅಲಂಕೃತನೂ ಆದ ಮೋಕ್ಷ ಎಂಬ ದೇವನನ್ನು ಧ್ಯಾನಿಸಿ,

ಅವಸ್ಯಷ್ಟಾ ಪರಾಪತಇತಿ ಮಂತ್ರೇಣ ಪೂಜಯೇತ್ ।
ಅಗ್ನಿಶ್ಚಾಸ್ಯ ಋಷಿಃಪ್ರೋಕ್ತಶ್ಛಂದಃ ಸೋಮಶ್ಚ ದೇವತಾ ॥ ೭೫ ॥

ಪೀತಂ ಭಲ್ಲಾಟಕಂ ಧ್ಯಾಯೇತ್ಪದ್ಮಸ್ಥಂ ರಕ್ತಭೂಷಣಂ ।
ದ್ವಿಭುಜಂ ಪದ್ಮಹಸ್ತಂ ಚ ದೇವಮೇವಂ ವಿಚಿನ್ತಯೇತ್ ॥
ಯನ್ಮಾತುರಿತಿ ಮಂತ್ರೇಣ ಪೂಜಯೇತ್ಸಿತತಂಡುಲೈಃ ॥ ೭೬ ॥

ಜಂಭಕೋಽಸ್ಯ ಋಷಿಶ್ಛಂದೋ ಗಾಯತ್ರೀ ಸಮುದಾಹೃತಾ ।
ದೇವತಾ ಚ ಭವೇತ್ಕುಂಭಃ ಪ್ರೀತಯೇ ವಿನಿಯೋಗತಃ ॥ ೭೭ ॥

ಸೋಮಂ ಧ್ಯಾಯೇಚ್ಛ್ಯಾಮರೂಪಂ ಪದ್ಮಾಸನಗತಂ ಪರಂ ।
ನಾನಾಭರಣಸಂಪನ್ನಂ ಕಿರೀಟವರಧಾರಿಣಂ ॥ ೭೮ ॥

---

೭೫. 'ಅವಸ್ಯಷ್ಟಾ ಪರಾಪತ' ಎಂಬ ಮಂತ್ರದಿಂದ ಪೂಜಿಸಬೇಕು ಈ ಮಂತ್ರಕ್ಕೆ ಅಗ್ನಿಯು ಋಷಿ, ಪಂಕ್ತಿಯು ಛಂದಸ್ಸು, ಸೋಮನು ದೇವತೆ, ಈ ದೇವನ ಪ್ರೀತಿಗಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೭೬. ಹಳದಿಯುಮೈಬಣ್ಣವುಳ್ಳವನೂ, ಪದ್ಮಾಸನನೂ, ಕೆಂಪುಬಣ್ಣದ ಆಭರಣಗಳನ್ನು ಧರಿಸಿರುವವನೂ, ಎರಡುಭುಜಗಳುಳ್ಳವನೂ, ಕೈಗಳಲ್ಲಿ ಕಮಲಗಳನ್ನು ಧರಿಸಿರುವವನೂ ಆದ ಭಲ್ಲಾಟಕನೆಂಬ ದೇವತೆಯನ್ನು 'ಯನ್ಮಾತುಃ ಎಂಬ ಮಂತ್ರ ಪೂರ್ವಕವಾಗಿ ಧ್ಯಾನಿಸಿ ಯವಾಕ್ಷತೆಗಳಿಂದ ಪೂಜಿಸಬೇಕು.

೭೭. ಈ ಮಂತ್ರಕ್ಕೆ ಜಂಭಕನು ಋಷಿ, ಗಾಯತ್ರಿಯೆಂಬುದೇ ಛಂದಸ್ಸು, ಕುಂಭನು ದೇವತೆ, ಅವನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೭೮. (ಉತ್ತರದ ಕಡೆಯ ನಾಲ್ಕು ಪದಕಗಳಲ್ಲಿ ಆವಾಹಿಸುವ ದೇವತೆಗಳು) ಕಪ್ಪಾದ ಮೈಬಣ್ಣವುಳ್ಳವನೂ, ಕಮಲವನ್ನೇ ಆಸನಮಾಡಿ ಕುಳಿತಿರುವವನೂ, ಶ್ರೇಷ್ಠನೂ, ಅನೇಕ ಒಡವೆಗಳಿಂದ ಅಲಂಕೃತನೂ, ಶ್ರೇಷ್ಠವಾದ ಕಿರೀಟವನ್ನು ಧರಿಸಿರುವವನೂ ಆದ ಸೋಮನೆಂಬ ದೇವತೆಯನ್ನು ಧ್ಯಾನಿಸಿ, 'ಮರ್ಮಾಣಿ ತೇ' ಎಂಬ ಮಂತ್ರಪೂರ್ವಕವಾಗಿ ಗಂಧಪುಷ್ಪಾದಿಗಳನ್ನು ಪೂಜಿಸಬೇಕು.

**ಮಮಾರ್ಣಿತೇತಿ ಮಂತ್ರೇಣ ಗಂಧಾದ್ಯೈರಪಿ ಪೂಜಯೇತ್ ।**
**ಋಷಿಃ ಸ್ವಾಥೋರ್ವೇದಶ್ಛಂದೋ ಜಗತೀತ್ಯಭಿಧೀಯತೆ ।**
**ದೇವತಾ ಚ ಭವೇತ್ಸೋಮಃ ಪ್ರೀತಯೇ ವಿನಿಯೋಜಯೇತ್ ॥ ೭೯ ॥**

**ದರ್ಪಂ ಧ್ಯಾಯೇತ್ಕೃಷ್ಣವರ್ಣಂ ಕೃಷ್ಣಾಂಬರಧರಂ ತಥಾ ।**
**ನಾಗಯಜ್ಞೋಪವೀತಿಂ ಚ ಶಿಖಿಸ್ತಂಭಂ ದ್ವಿಜೋತ್ತಮಾಃ ॥ ೮೦ ॥**

**ಪಂಚದೀಶೇತಿಮಂತ್ರೇಣ ಗಂಧಾದ್ಯೈಃ ಪರಿಪೂಜಯೇತ್ ॥ ೮೧ ॥**

**ಮಂತ್ರಶ್ಚಾಸ್ಯ ಋಷಿಶ್ಚಾಸ್ಯ ಪಂಚಾಯತನಮೀರಿತಂ ।**
**ಪಂಕ್ತಿಶ್ಛಂದಸ್ತಥಾ ಪ್ರೋಕ್ತಂ ದೇವಃ ಪಂಚಾನನಃ ಸ್ಮೃತಃ ॥ ೮೨ ॥**

**ಶ್ಯಾಮವರ್ಣಾಂ ದಿತಿಂ ಧ್ಯಾಯೇದ್ದ್ವಿಭುಜಾಂ ಪೀತವಿಗ್ರಹಾಂ ।**
**ಸರ್ವಲಕ್ಷಣಸಂಪನ್ನಾಂ ಸರ್ವಾಲಂಕಾರಶೋಭಿತಾಂ ॥ ೮೩ ॥**

---

೭೯. ಈ ಮಂತ್ರಕ್ಕೆ ಸ್ವಾಥೋರ್ವೇದ ಎಂಬುವನು ಋಷಿ, ಜಗತೀ ಎಂಬುದು ಛಂದಸ್ಸು, ಸೋಮನು ದೇವತೆ ಈ ದೇವನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೮೦. ಎಲೈ ಬ್ರಾಹ್ಮಣೋತ್ತಮರೇ! ಕೇಳಿರಿ; ಕಪ್ಪಾದ ಮೈಬಣ್ಣವುಳ್ಳವನೂ, ಕಪ್ಪುವಸ್ತ್ರವನ್ನು ಧರಿಸಿರುವವನೂ, ಸರ್ಪವನ್ನೇ ಯಜ್ಞೋಪವೀತಮಾಡಿಕೊಂಡಿರುವವನೂ, ಅಗ್ನಿ ಸ್ತಂಭನಮಾಡುವವನೂ ಆದ ದರ್ಪ (ಪರ್ವ) ನನ್ನು ಧ್ಯಾನಿಸಬೇಕು.

೮೧. ಮತ್ತು 'ಪಂಚದೀಶಾ' ಎಂಬ ಮಂತ್ರಪೂರ್ವಕವಾಗಿ ಆ ದೇವನನ್ನು ಗಂಧ ಮೊದಲಾದುವುಗಳಿಂದ ಪೂಜಿಸಬೇಕು.

೮೨. ಈ ಮಂತ್ರಕ್ಕೆ ಪಂಚಾಯತನನೇ ಋಷಿ, ಪಂಕ್ತಿಯೆಂಬುದು ಛಂದಸ್ಸು. ಪಂಚಾಸ್ಯನು ದೇವತೆ ಎಂದು ಹೇಳಿದೆ. ಈ ಮಂತ್ರವನ್ನು ಅವನ ಪ್ರೀತ್ಯರ್ಥವಾಗಿ ವಿನಿಯೋಗಿಸಬೇಕು.

೮೩. ಕಪ್ಪಾದ ವಸ್ತ್ರವನ್ನುಳ್ಳವಳೂ, ಎರಡುಭುಜಗಳುಳ್ಳವಳೂ, ಹಳದಿಯ ಬಣ್ಣದ ದೇಹವುಳ್ಳವಳೂ, ಸರ್ವಲಕ್ಷಣಗಳಿಂದ ಕೂಡಿದವಳೂ, ಸಮಸ್ತಭೂಷಣಗಳಿಂದ ಶೋಭಿಸುವವಳೂ ಆದ 'ದಿತಿ' ಎಂಬ ದೇವತೆಯನ್ನು ಧ್ಯಾನಿಸಬೇಕು.

ಸುವರ್ಣೋಽಸೀತಿಮಂತ್ರೇಣ ಪೂಜಯೇತ್ಪೀತಚಂದನೈಃ ॥ ೮೪ ॥

ಋಷಿರ್ನಾರಾಯಣಶ್ಛಂದೋ ಜಗತೀ ಪರಿಕೀರ್ತ್ಯತೇ ।
ಭವೇದ್ದೇವೋ ಭಾರ್ಗವಶ್ಚ ಇಷ್ಟಾರ್ಥೇ ಪರಿಪೂಜಯೇತ್ ॥ ೮೫ ॥

ರಕ್ತಾಭಾಮದಿತಿಂ ಧ್ಯಾಯೇತ್ಸರ್ವಾಲಂಕಾರಭೂಷಿತಾಂ ।
ಶುಕ್ರಾಂಭಾರಿತಿಮಂತ್ರೇಣ ಗಂಧಾದ್ಯೈರಭಿಪೂಜಯೇತ್ ॥ ೮೬ ॥

ವಾಮದೇವಋಷಿಶ್ಚಾಸ್ಯ ಛಂದೋಽನುಷ್ಟುನುಷ್ಟುಪ್ತಥೈವ ಚ ।
ದೇವಃ ಶುಕ್ರಃ ಸಮಾಖ್ಯಾತಃ ಸ್ತುತೌ ಚ ವಿನಿಯೋಜಯೇತ್ ॥ ೮೭ ॥

ಈಶಾನಾದಿ ಕೋಣಗತಾನ್ಪೂಜಯೇತ್ಸುಸಮಾಹಿತಃ ।
ಆಪಂ ಧ್ಯಾಯೇಚ್ಛುಕ್ಲವರ್ಣಂ ಕುಂಡಲಾದ್ಯೈರ್ವಿಭೂಷಿತಂ ॥ ೮೮ ॥

---

೮೪. ಮತ್ತು 'ಸುವರ್ಣೋಽಸಿ' ಎಂಬ ಮಂತ್ರಪೂರ್ವಕವಾಗಿ ಶ್ರೀಗಂಧ ಮೊದಲಾದುವುಗಳಿಂದ ಆ ದೇವತೆಯನ್ನು ಪೂಜಿಸಬೇಕು.

೮೫. ಈ ಮಂತ್ರಕ್ಕೆ ನಾರಾಯಣನು ಋಷಿ, ಜಗತೀ ಎಂಬುದು ಛಂದಸ್ಸು, ಭಾರ್ಗವನು ದೇವತೆ, ಇಷ್ಟಾರ್ಥಪ್ರದವಾದ ಆ ದೇವತಾಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೮೬. ಬಳಿಕ ಕೆಂಪುಬಣ್ಣದ ಕಾಂತಿಯುಳ್ಳವಳೂ, ಸಮಸ್ತಭೂಷಣಗಳಿಂದ ಶೋಭಿತೆಯೂ ಆದ 'ಅದಿತಿ' ಎಂಬ ದೇವತೆಯನ್ನು ಧ್ಯಾನಿಸಬೇಕು 'ಶುಕ್ರಾಂಭಾ' ಎಂಬ ಮಂತ್ರಪೂರ್ವಕವಾಗಿ ಗಂಧ ಮೊದಲಾದುವುಗಳಿಂದ ಪೂಜಿಸಬೇಕು.

೮೭. ಈ ಮಂತ್ರಕ್ಕೆ ವಾಮದೇವನೇ ಋಷಿ, ಅನುಷ್ಟುಪ್ ಎಂಬುದು ಛಂದಸ್ಸು ಶುಕ್ರನು ದೇವತೆ, ಈ ದೇವತಾಸ್ತೋತ್ರದಲ್ಲಿ ಈ ಮಂತ್ರವನ್ನು ವಿನಿಯೋಗಿಸಬೇಕು.

೮೮. ಇನ್ನು ಕ್ರಮವಾಗಿ ಈಶಾನ್ಯ ಮೊದಲಾದ ಬಹಿಃಕೋಣಗಳಲ್ಲಿಯ ದೇವತೆಗಳನ್ನು ಸಮಾಹಿತಮನಸ್ಕನಾಗಿ ಪೂಜಿಸಬೇಕು. ಬಿಳಿಯಬಣ್ಣದ ದೇಹವುಳ್ಳವನೂ, ಕುಂಡಲ ಮೊದಲಾದುವುಗಳಿಂದ ಶೃಂಗರಿಸಲ್ಪಟ್ಟವನೂ ಆದ 'ಆಪೋ' ದೇವತೆಯನ್ನು ಧ್ಯಾನಮಾಡಬೇಕು.

**ಇದಂವಿಷ್ಣುರಿತಿಮಂತ್ರೇಣ ತ್ರಿಗಂಧೇನ ಸಮರ್ಚಯೇತ್ ॥ ೮೯ ॥**

**ಋಷಿಸ್ಸ್ಯಾತ್ಕರ್ದಮಶ್ಛಂದೋ ವಿರಾಡಿತ್ಯಭಿಧೀಯತೇ ॥ ೯೦ ॥**

**ದೇವಃ ಸೋಮಃ ಸಮಾಖ್ಯಾತಃ ಪ್ರೀತಯೇ ವಿನಿಯೋಜಯೇತ್ ।**
**ಸವಿತ್ರಂ ದ್ವಿಭುಜಂ ರಕ್ತಂ ರಕ್ತಶ್ವೇತಾಂಬರಾನ್ವಿತಂ ॥ ೯೧ ॥**

**ಹರಿಚಂದನಲಿಪ್ತಾಂಗಂ ವರದಂ ತಂ ವಿಚಿನ್ತಯೇತ್ ।**
**ಪಯಸಾಶುಕ್ಲ ಇತಿಮಂತ್ರೇಣ ಪೂಜಯೇತ್ಕಮಲಾದಿನಾ ॥ ೯೨ ॥**

**ನಾರಾಯಣಋಷಿಶ್ಚಾಸ್ಯ ಪಂಕ್ತಿಶ್ಛಂದಃಪ್ರಕೀರ್ತ್ಯತೇ ।**
**ನಾರಾಯಣಃ ಸ್ವಯಂ ದೇವಃ ಪ್ರೀತಯೇ ವಿನಿಯೋಜಯೋತ್ ॥ ೯೩ ॥**

**ಜಯಂ ಧ್ಯಾಯೇತ್ಪೀತವರ್ಣಂ ದ್ವಿಭುಜಂ ವರಹಸ್ತಕಂ ।**
**ದೇವಂ ಕಿರೀಟಸಂಪನ್ನಂ ಸರ್ವಾಲಂಕಾರಭೂಷಿತಂ ॥ ೯೪ ॥**

---

೮೯. ಆ ಮೇಲೆ 'ಇದಂವಿಷ್ಣು' ಎಂಬ ಮಂತ್ರದಿಂದ ಮೂರುಬಗೆಯ ಗಂಧಗಳನ್ನು ತೆಗೆದುಕೊಂಡು ಆ ಆಪೋದೇವತೆಯನ್ನು ಪೂಜಿಸಬೇಕು.

೯೦. ಈ ಮಂತ್ರಕ್ಕೆ ಕರ್ದಮನು ಋಷಿ, ವಿರಾಟ್ ಎಂಬುದು, ಛಂದಸ್ಸು, ಸೋಮನೇ ದೇವತೆ, ಈ ದೇವನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೯೧-೯೨. ಕೆಂಪುಬಣ್ಣದ ದೇಹವುಳ್ಳವನೂ, ಎರಡುಭುಜಗಳುಳ್ಳವನೂ, ಶ್ವೇತ (ಬಿಳುಪು) ರಕ್ತ (ಕೆಂಪು) ಎಂಬ ಎರಡುಬಣ್ಣದ ವಸ್ತ್ರಗಳನ್ನು ಧರಿಸಿರುವವನೂ, ಹರಿಚಂದನವನ್ನು ದೇಹಕ್ಕೆ ಲೇಪನ ಮಾಡಿಕೊಂಡಿರುವವನೂ, ವರದಹಸ್ತನೂ ಆದ 'ಸವಿತ್ರ'ನೆಂಬ ದೇವತೆಯನ್ನು ಧ್ಯಾನಿಸಬೇಕು. ಮತ್ತು 'ಪಯಸಾಶುಕ್ಲ' ಎಂಬ ಮಂತ್ರಪೂರ್ವಕವಾಗಿ ಕಮಲ ಮೊದಲಾದುವುಗಳಿಂದ ಪೂಜಿಸಬೇಕು.

೯೩. ಈ ಮಂತ್ರಕ್ಕೆ ನಾರಾಯಣನು ಋಷಿ. ಪಂಕ್ತಿಯೆಂಬುದು ಛಂದಸ್ಸು, ಸ್ವಯಂ ನಾರಾಯಣನೇ ದೇವತೆ, ಈ ದೇವನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೯೪. ಹಳದಿಯಬಣ್ಣದ ದೇಹವುಳ್ಳವನೂ, ವರದಹಸ್ತ ಅಭಯಹಸ್ತವುಳ್ಳ ಎರಡುಭುಜಗಳುಳ್ಳವನೂ, ಕಿರೀಟವನ್ನು ಧರಿಸಿರುವದೇವನೂ, ಸಮಸ್ತಭೂಷಣಗಳಿಂದ ಶೋಭಿಸುವವನೂ ಆದ 'ಜಯ' ಎಂಬ ದೇವತೆಯನ್ನು ಧ್ಯಾನಮಾಡಬೇಕು.

ದೃಷ್ಟ್ವಾಪರಿಶ್ರುತಇತಿ ಮಂತ್ರೇಣಾನೇನ ಪೂಜಯೇತ್ ।
ಋಷಿರ್ನಾರಾಯಣಶ್ಛಂದಃ ಪಂಕ್ತಿಃ ಸೋಮೋऽಥ ದೇವತಾ ॥ ೯೫ ॥

ರುದ್ರಂ ಧ್ಯಾಯೇದ್ರಕ್ತವರ್ಣಂ ಶೀತಾಂಶುಕೃತಶೇಖರಂ ।
ದ್ವಿಭುಜಂ ಶೂಲಹಸ್ತಂ ಚ ಡಮರುಂ ಚ ಪರಾ ಭವೇತ್ ॥ ೯೬ ॥

ದಿವೋಮೂರ್ಧನ್ನಿತಿಮಂತ್ರೇಣ ಋಷಯಃ ಸಮುದಾಹೃತಾಃ ।
ಋಷಿಃ ಸ್ಯಾತ್ಕಶ್ಯಪಶ್ಛಂದೋ ವಿರಾಡಿತ್ಯಭಿಧೀಯತೆ ॥ ೯೭ ॥

ಸ್ವಯಂ ದೇವೋ ವಿನಿಯೋಗಃ ಸ್ತುತೌ ಚ ವಿನಿಯೋಜಯೇತ್ ।
ದ್ವಿಭುಜಂ ರಕ್ತಪದ್ಮಸ್ಥಂ ಪಂಕಜದ್ವಯಧಾರಿಣಂ ॥ ೯೮ ॥

---

೯೫. ಬಳಿಕ 'ದೃಷ್ಟ್ವಾಪರಿಶ್ರುತ' ಎಂಬ ಮಂತ್ರಪೂರ್ವಕವಾಗಿ ಆ ದೇವತೆಯನ್ನು ಗಂಧಾದಿಗಳಿಂದ ಪೂಜಿಸಬೇಕು. ಈ ಮಂತ್ರಕ್ಕೆ ನಾರಾಯಣನು ಋಷಿ, ಪಂಕ್ತಿಯೆಂಬುದು ಛಂದಸ್ಸು, ಸೋಮನು ದೇವತೆ, ಈ ದೇವನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೯೬. ಕೆಂಪಾದ ಮೈಬಣ್ಣವುಳ್ಳವನೂ, ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವವನೂ, ಎರಡುಭುಜಗಳುಳ್ಳವನೂ, ಕೈಯಲ್ಲಿ ಶೂಲವನ್ನೂ ಡಮರುಕವನ್ನೂ ಧರಿಸಿರುವ ಉತ್ಕೃಷ್ಟದೇವನೂ ಆದ 'ರುದ್ರ'ನನ್ನು ಧ್ಯಾನಿಸಬೇಕು.

೯೭. ಬಳಿಕ 'ಮೂರ್ಧಾನಂದಿವೋ' ಎಂಬ ಮಂತ್ರಪೂರ್ವಕವಾಗಿ ರುದ್ರನನ್ನು ಗಂಧಾದಿಗಳಿಂದ ಪೂಜಿಸಬೇಕು. ಈ ಮಂತ್ರಕ್ಕೆ ಕಶ್ಯಪನು ಋಷಿ, ವಿರಾಟ್ ಎಂಬುದು ಛಂದಸ್ಸು, ಸ್ವಯಂ ರುದ್ರನೇ ದೇವತೆ, ಅವನನ್ನು ಸ್ತುತಿಸುವಾಗ ಈ ಮಂತ್ರವನ್ನು ವಿನಿಯೋಗಿಸಬೇಕು.

೯೮. ಕೆಂಪುಕಮಲದ ಮೇಲೆ ಕುಳಿತಿರುವವನೂ, ಕೈಯಲ್ಲಿ ಎರಡುಕಮಲಗಳನ್ನು ಧರಿಸಿರುವವನೂ, ಎರಡುಭುಜಗಳುಳ್ಳವನೂ ಆದ 'ಅರ್ಯಮ' ಎಂಬ ದೇವತೆಯನ್ನು ಧ್ಯಾನಿಸಬೇಕು.

ಧ್ಯಾಯೇದರ್ಯಮಣಂ ದೇವಂ ಪೂಜಯೇದ್ರಕ್ತಪಂಕಜೈಃ ।
ಅಸ್ಯ ಕರೀಟ ಇತಿಮಂತ್ರೇಣ ರಕ್ತಸ್ರಕ್ಚಂದನಾದಿಭಿಃ ।
ಪೂಜಯೇತ್ಪರಯಾ ಭಕ್ತ್ಯಾ ಋಷಿರ್ನೀಲ ಉದಾಹೃತಃ ॥
ತ್ರಿಷ್ಟುಪ್ಛಂದೋ ದೇವತಾ ಸ್ಯಾದ್ಧ್ರದೋಽಪಿ ಪರಿಕೀರ್ತಿತಃ ॥ ೯೯ ॥

ಸವಿತಾರಂ ತಥಾ ಧ್ಯಾಯೇತ್ಪದ್ಮಸ್ಥಂ ದ್ವಿಭುಜಂ ಪ್ರಭುಂ ।
ನಾನಾಭರಣಶೋಭಾಢ್ಯಂ ಸಪ್ತಾಶ್ವರಥಮಂಡಿತಂ ॥ ೧೦೦ ॥

ಯದ್ದೇವಾ ಇತಿಮಂತ್ರೇಣ ಗಂಧಾದ್ಯೈಃ ಪರಿಪೂಜಯೇತ್ ।
ಋಷಿರೌತಥ್ಯ ಆಖ್ಯಾತಃ ಪ್ರೀತಯೇ ವಿನಿಯೋಜಯೇತ್ ॥ ೧೦೧ ॥

ಧ್ಯಾಯೇದ್ರಕ್ತಂ ವಿವಸ್ವಂತಂ ದ್ವಿಭುಜಂ ಪದ್ಮವಿಗ್ರಹಂ ।
ಅವಿದ್ಯಾ ಇತಿ ಮಂತ್ರೇಣ ಪೂಜಯೇದ್ಗಂಧಚಂದನೈಃ ॥ ೧೦೨ ॥

---

೯೯. ಬಳಿಕ 'ಅಸ್ಯಕರೀಟ' ಎಂಬ ಮಂತ್ರಪೂರ್ವಕವಾಗಿ ಕೆಂಪುಕಮಲ, ಕೆಂಪುಪುಷ್ಪಮಾಲೆಗಳು, ಕೆಂಪುಗಂಧ ಮುಂತಾದುವುಗಳನ್ನು ಬಹುಭಕ್ತಿಯಿಂದ ಪೂಜಿಸಬೇಕು. ಈ ಮಂತ್ರಕ್ಕೆ ನೀಲನು ಋಷಿ, ತ್ರಿಷ್ಟುಪ್ ಎಂಬುದು ಛಂದಸ್ಸು, ಹ್ರದನು ದೇವತೆ, ಅರ್ಯಮ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೧೦೦. ಇದೇರೀತಿ ಎರಡುಭುಜಗಳುಳ್ಳವನೂ, ಪದ್ಮದಮೇಲೆ ಕುಳಿತಿರುವವನೂ, ಬಗೆಬಗೆಯ ಭೂಷಣಗಳಿಂದ ಶೋಭಿತನೂ, ಏಳುಕುದುರೆಗಳನ್ನು ಕಟ್ಟಿರುವ ರಥದಲ್ಲಿ ಅಲಂಕಾರವಾಗಿ ಕುಳಿತಿರುವ ಪ್ರಭುವೂ ಆದ 'ಸವಿತೃ'ವನ್ನು ಧ್ಯಾನಿಸಬೇಕು.

೧೦೧. ಬಳಿಕ 'ಯದ್ದೇವಾ' ಎಂಬ ಮಂತ್ರಪೂರ್ವಕವಾಗಿ ಆ ಸವಿತೃವನ್ನು ಗಂಧ ಮೊದಲಾದುವುಗಳಿಂದ ಪೂಜಿಸಬೇಕು. ಈ ಮಂತ್ರಕ್ಕೆ ಔತಥ್ಯನು ಋಷಿ, ಎಂದು ಹೇಳಿದೆ. ಸವಿತೃಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೧೦೨. ಅನಂತರ ಎರಡುಭುಜವುಳ್ಳವನೂ, ಕೆಂಪುಬಣ್ಣದ ದೇಹವುಳ್ಳವನೂ, ಪದ್ಮದಲ್ಲಿ ಕುಳಿತಿರುವವನೂ, ಆದ 'ವಿವಸ್ವಂತ'ನನ್ನು ಧ್ಯಾನಿಸಬೇಕು. ಮತ್ತು 'ಅವಿದ್ಯಾ' ಎಂಬ ಮಂತ್ರಪೂರ್ವಕವಾಗಿ ಶ್ರೀಗಂಧ ಚಂದನ ಮೊದಲಾದುವುಗಳಿಂದ ಪೂಜಿಸಬೇಕು.

ಋಷಿರ್ಗಂಧಃ ಸಮಾಖ್ಯಾತಸ್ತ್ರಿಷ್ಟುಪ್ಛಂದಶ್ಚ ಈರಿತಂ ।
ದೇವತಾ ಚ ಭವೇತ್ಸೋಮಃ ಸ್ತುತೌ ಚ ವಿನಿಯೋಜಯೇತ್ ॥ ೧೦೩ ॥

ವಿಬುಧಾಧಿಪಂ ತತೋ ಧ್ಯಾಯೇತ್ಪೀತಂ ವೃಷಭವಾಹನಂ ।
ಚತುರ್ಭುಜಂ ಯಷ್ಟಿಹಸ್ತಂ ಅಕ್ಷಮಾಲೈಕಹಸ್ತಕಂ ।
ತ್ರಿಣೇತ್ರಂ ರಕ್ತವಸ್ತ್ರಂ ಚ ಮುಕುಟಾದ್ಯೈರಲಂಕೃತಂ ॥ ೧೦೪ ॥

ಋಷಿರ್ಹಾರೀತ ಇತ್ಯುಕ್ತೋ ಜಗತೀ ಛಂದ ಈರಿತಂ ।
ದೇವತಾ ಚ ಭವೇಚ್ಛಕ್ತಿಃ ಪ್ರೀತಯೇ ವಿನಿಯೋಜಯೇತ್ ॥ ೧೦೫ ॥

ಮಿತ್ರಂ ಧ್ಯಾಯೇಚ್ಛುಕ್ಲವರ್ಣಂ ವರಾಭಯಕರಂ ಪರಂ ।
ಮೇಷಸ್ಥಂ ಚ ತ್ರಿನೇತ್ರಂ ಚ ಕಿರೀಟವರಮಂಡಿತಂ ॥ ೧೦೬ ॥

---

೧೦೩. ಈ ಮಂತ್ರಕ್ಕೆ ಗಂಧನೆಂಬುವನು ಋಷಿ, ತ್ರಿಷ್ಟುಪ್ ಎಂಬುದೇ ಛಂದಸ್ಸು, ಸೋಮನೆಂಬುವನೇ ದೇವತೆ, ವಿವಸ್ವಂತನ ಸ್ತುತಿಯಲ್ಲಿ ಈ ಮಂತ್ರವನ್ನು ವಿನಿಯೋಗಿಸಬೇಕು.

೧೦೪. ಅನಂತರ ಹಳದಿಯಬಣ್ಣದ ದೇಹವುಳ್ಳವನೂ, ವೃಷಭವನ್ನೇ ವಾಹನವಾಗಿ ಉಳ್ಳವನೂ, ನಾಲ್ಕುಭುಜಗಳುಳ್ಳವನೂ, ಕೈಯಲ್ಲಿ ಯಷ್ಟಿಯನ್ನು ಹಿಡಿದಿರುವವನೂ, ಒಂದುಕೈಯಲ್ಲಿ ಅಕ್ಷಮಾಲೆಯನ್ನು ಧರಿಸಿದವನೂ, ಮೂರುಕಣ್ಣುಗಳುಳ್ಳವನೂ, ಕೆಂಪುಬಣ್ಣದ ವಸ್ತ್ರವನ್ನು ಧರಿಸಿರುವವನೂ, ಕಿರೀಟ ಮುಂತಾದ ಆಭರಣಗಳಿಂದ ಶೋಭಿಸುವವನೂ ಆದ 'ವಿಬುಧಾಧಿಪ'ನೆಂಬ ದೇವತೆಯನ್ನು ಧ್ಯಾನಿಸಬೇಕು.

೧೦೫. ಈ ಮಂತ್ರಕ್ಕೆ ಹಾರೀತನೆಂಬವನು ಋಷಿ, ಜಗತೀ ಎಂಬುದು ಛಂದಸ್ಸು, ಶಕ್ತಿಯು ದೇವತೆ, ಈ ದೇವನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೧೦೬. ಅನಂತರ ಬಿಳಿಯಬಣ್ಣದ ದೇಹವುಳ್ಳವನೂ, ವರದಹಸ್ತ ಅಭಯಹಸ್ತಗಳುಳ್ಳವನೂ, ಶ್ರೇಷ್ಠನೂ, ಮೇಷವಾಹನನೂ, ಮೂರುಕಣ್ಣುಗಳುಳ್ಳವನೂ, ಶ್ರೇಷ್ಠವಾದ ಕಿರೀಟದಿಂದ ಅಲಂಕೃತನೂ ಆದ 'ಮಿತ್ರ'ನೆಂಬವನನ್ನು ಭಕ್ತಿಯಿಂದ ಧ್ಯಾನಮಾಡಬೇಕು.

**ಧನಾಕರಸ್ತ್ವಿತಿ ಮಂತ್ರೇಣ ಪೂಜಯೇದ್ದಧಿಪಾಯಸೈಃ ॥ ೧೦೭ ॥**

**ಋಷಿರೌತಥ್ಯ ಇತ್ಯುಕ್ತೋ ಜಗತೀಚ್ಛಂದ ಈರಿತಂ ।**
**ದೇವತಾ ಚ ಭವೇದ್ಯಕ್ಷ್ಮಾ ಪ್ರೀತಯೇ ವಿನಿಯೋಜಯೇತ್ ॥ ೧೦೮ ॥**

**ಪೀತಾಸ್ಯಂ ರಾಜಯಕ್ಷ್ಮಾಣಂ ಕರಾಲಂ ಚ ವಿಚಿಂತಯೇತ್ ।**
**ಯಶೋರೂಪಮಿತಿ ಮಂತ್ರೇಣ ಗಂಧಾದ್ಯೈಃ ಪರಿಪೂಜಯೇತ್ ॥ ೧೦೯ ॥**

**ದಧ್ಯಂಜಾಥರ್ವಣ ಋಷಿರ್ಗಾಯತ್ರೀ ಛಂದ ಈರಿತಂ ।**
**ಯಕ್ಷ್ಮಾ ಚ ದೇವತಾ ಚೈವ ಸ್ತುತೌ ಚ ವಿನಿಯೋಜಯೇತ್ ॥ ೧೧೦ ॥**

**ಶುಕ್ಲಾಂಬರಧರಂ ಧ್ಯಾಯೇದ್ದ್ವಿಭುಜಂ ಶಿಖಿವಾಹನಂ ।**
**ಯಮಂ ವಿನೇತಿ ಮಂತ್ರೇಣ ಪೂಜಯೇದ್ಭಕ್ತಿತತ್ಪರಃ ॥ ೧೧೧ ॥**

---

೧೦೭. 'ಧನಾಕರಸ್ತು' ಎಂಬ ಮಂತ್ರಪೂರ್ವಕವಾಗಿ 'ಮಿತ್ರ'ನನ್ನು ಪೂಜಿಸಿ, ಮೊಸರು ಮತ್ತು ಪಾಯಸ ಇವುಗಳನ್ನು ನಿವೇದಿಸಬೇಕು.

೧೦೮. ಈ ಮಂತ್ರಕ್ಕೆ ಔತಥ್ಯನೆಂಬವನು ಋಷಿ, ಜಗತೀ ಎಂಬುದು ಛಂದಸ್ಸು, ಯಕ್ಷ್ಮಾ ಎಂಬುದೇ ದೇವತೆ, ಈ ಮಿತ್ರದೇವತಾಪ್ರೀತ್ಯರ್ಥವಾಗಿ ಮಂತ್ರವನ್ನು ಹೇಳಬೇಕು.

೧೦೯. ಹಳದಿಯಬಣ್ಣದ ಮುಖವುಳ್ಳವನೂ, ಕ್ರೂರಸ್ವರೂಪನೂ, ಆದ 'ರಾಜಯಕ್ಷ್ಮ'ದೇವತೆಯನ್ನು ಪ್ರಾರ್ಥಿಸಿ(ಧ್ಯಾನಿಸಿ) 'ಯಶೋರೂಪಂ' ಎಂಬ ಮಂತ್ರ ಪೂರ್ವಕವಾಗಿ ಗಂಧ ಮೊದಲಾದುವುಗಳಿಂದ ಪೂಜಿಸಬೇಕು.

೧೧೦. ಈ ಮಂತ್ರಕ್ಕೆ ದಧ್ಯಂಙ್ಙಾಥರ್ವಣ ಎಂಬುವರು ಋಷಿಗಳು, ಗಾಯತ್ರೀ ಎಂಬುದು ಛಂದಸ್ಸು, ಯಕ್ಷ್ಮಾ ಎಂಬುದೇ ದೇವತೆ, ಆ ದೇವತಾಸ್ತುತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೧೧೧. ಬಿಳಿಯಬಟ್ಟೆಗಳನ್ನು ಧರಿಸಿರುವವನೂ, ಎರಡುಭುಜಗಳುಳ್ಳವನೂ, ನವಿಲನ್ನು ವಾಹನಮಾಡಿಕೊಂಡಿರುವವನೂ ಆದ 'ಪೃಥಿವೀಧರ'ನೆಂಬ ದೇವತೆಯನ್ನು ಧ್ಯಾನಿಸಬೇಕು. ಅನಂತರ ಭಕ್ತಿಪುರಸ್ಸರವಾಗಿ ಈ ದೇವತೆಯನ್ನು 'ಯಮಂವಿನಾ' ಎಂಬ ಮಂತ್ರಪೂರ್ವಕವಾಗಿ ಪೂಜಿಸಬೇಕು.

**ಋಷಿಃ ಸ್ಯಾನ್ನಾರದಃ ಪ್ರೋಕ್ತಶ್ಛಂದೋಽನುಷ್ಟುಪ್ರಕೀರ್ತಿತಂ ।**
**ವಿವಸ್ವಾನ್ದೇವತಾ ಚೈವ ಕ್ರತೌ ಚ ವಿನಿಯೋಜಯೇತ್ ॥ ೧೧೨ ॥**

**ಏವಂ ಧ್ಯಾತ್ವಾ ಆಪವತ್ಸಂ ಮಹಾಕಾಯಂ ಮಹೋದರಂ ।**
**ಅಭಿನ್ನರೂಪಮಂತ್ರೇಣ ಗಂಧಾದ್ಯೈಃ ಪರಿಪೂಜಯೇತ್ ॥ ೧೧೩ ॥**

**ಕಾಶ್ಯಪೋಽಸ್ಯ ಋಷಿಶ್ಛಂದಸ್ತ್ರಿಷ್ಟುಬ್ದೇವಃ ಶಚೀಪತಿಃ ॥ ೧೧೪ ॥**

**ಬಹಿರೀಶಾನಕೋಣೇಷು ದೇವಾದೀನ್ಪರಿಪೂಜಯೇತ್ ।**
**ಕೂಷ್ಮಾಂಡೈರ್ವರಣಾಪುಷ್ಪೈಃ ಶೌರಕೈರ್ವಾ ಸಮರ್ಚಯೇತ್ ॥ ೧೧೫ ॥**

**ಪೀತಾಂ ಕರಾಲಿಕಾಂ ಧ್ಯಾಯೇಚ್ಚರಕೀಂ ವರವರ್ಣಿನೀಂ ।**
**ಸ್ವಬ್ಜಸ್ಥಾಂ ದ್ವಿಭುಜಾಂ ಚೈವ ಗುಂಜಾಹಾರೋಪಶೋಭಿತಾಂ ॥ ೧೧೬ ॥**

---

೧೧೨. ಈ ಮಂತ್ರಕ್ಕೆ ನಾರದನು ಋಷಿ, ಅನುಷ್ಟುಪ್ಪೇ ಛಂದಸ್ಸು, ವಿವಸ್ವಂತನೇ ದೇವತೆ, ಪೃಥ್ವೀಧರನ ಪ್ರೀತ್ಯರ್ಥವಾದ ಯಜ್ಞದಲ್ಲಿ ಈ ಮಂತ್ರವನ್ನು ವಿನಿಯೋಗಿಸಬೇಕು.

೧೧೩. ದೊಡ್ಡಶರೀರ ದೊಡ್ಡಹೊಟ್ಟೆ ಇವುಗಳನ್ನುಳ್ಳ ಆಪವತ್ಸನನ್ನು ಧ್ಯಾನಿಸಿ 'ಅಭಿನ್ನರೂಪಂ' ಎಂಬ ಮಂತ್ರಪೂರ್ವಕವಾಗಿ ಗಂಧ ಮೊದಲಾದುವುಗಳಿಂದ ಪೂಜಿಸಬೇಕು.

೧೧೪. ಈ ಮಂತ್ರಕ್ಕೆ ಕಾಶ್ಯಪನೇ ಋಷಿ, ತ್ರಿಷ್ಟುಪ್ ಎಂಬುದು ಛಂದಸ್ಸು, ಶಚೀಪತಿಯೇ ದೇವತೆ, ಆಪವತ್ಸನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೧೧೫. ಅನಂತರ ಈಶಾನ್ಯ ಮೊದಲಾದ ದಿಕ್ಕುಗಳ ಕೋಣಗಳ ಹೊರಪದಕದಲ್ಲಿರುವ ದೇವತೆಗಳನ್ನು, ಕುಂಬಳದಹೂ, ವರುಣಾಪುಷ್ಪ, (ವಾಯುವಿಳಂಗದಹೂ) ಶೌರಕ, ಇವೇ ಮೊದಲಾದುವುಗಳಿಂದ ಪೂಜಿಸಬೇಕು.

೧೧೬. ಹಳದಿಯಬಣ್ಣದ ದೇಹವುಳ್ಳವಳೂ, ಕ್ರೂರಸ್ವರೂಪಳೂ, ಸುಂದರವಾದ ಕಮಲದಮೇಲೆ ಕುಳಿತಿರುವವಳೂ, ಎರಡುಭುಜಗಳುಳ್ಳವಳೂ, ಗುಲಗಂಜಿಯ ಹಾರದಿಂದ ಶೋಭಿಸುವವಳೂ, ಉತ್ತಮಸ್ತ್ರೀಯೂ ಆದ 'ಚರಕೀ' ಎಂಬ ದೇವತೆಯನ್ನು ಧ್ಯಾನಿಸಬೇಕು.

**ಪೀತಿನ್ಯರೂಪಮಂತ್ರೇಣ ಪೂಜಯೇದ್ಭೂತಿಮಿಚ್ಛುಕಃ ।**
**ಬಲದೇವಋಷಿಶ್ಚಾಷ್ಟಿಶ್ಛಂದೋ ಗೌರೀ ಚ ದೇವತಾ ॥ ೧೧೭ ॥**

**ಧ್ಯಾಯೇದ್ವಿದಾರಿಕಾಂ ರಕ್ತಾಂ ನವಯೌವ್ವನಸಂಯುತಾಂ ।**
**ಪವಿತ್ರೇಣ ಪುನೀಹೀತಿ ಮಂತ್ರೇಣಾನೇನ ಪೂಜಯೇತ್ ॥ ೧೧೮ ॥**

**ಋಷಿರ್ಗರ್ಗಃ ಸಮಾಖ್ಯಾತಸ್ತ್ರಿಷ್ಟುಪ್ಛಂದೋಽಸ್ಯ ದೇವತಾ ।**
**ರುದ್ರೋಽಪಿ ಚ ಸಮಾಖ್ಯಾತಃ ಸ್ತುತೌ ಚ ವಿನಿಯೋಜಯೇತ್ ॥ ೧೧೯ ॥**

**ಪಾಪಾದಿರಾಕ್ಷಸೀಂ ಧ್ಯಾಯೇತ್ಸೌರಭೇಯೋಪರಿಸ್ಥಿತಾಂ ।**
**ಕಯಾ ನ ಇತಿ ಮಂತ್ರೇಣ ಪೂಜಯೇದ್ಗಂಧಚಂದನೈಃ ॥ ೧೨೦ ॥**

**ಋಷಿಃ ಸುವರ್ಣ ಆಖ್ಯಾತಃ ಪಂಕ್ತಿಶ್ಛಂದಃ ಪ್ರಕೀರ್ತಿತಂ ।**
**ದೇವತಾ ಚ ಮಹಾದೇವ ಇಷ್ಟಾರ್ಥೇ ವಿನಿಯೋಜಯೇತ್ ॥ ೧೨೧ ॥**

---

೧೧೭. ಐಶ್ವರ್ಯವನ್ನು ಅಪೇಕ್ಷಿಸತಕ್ಕವನು 'ಪೀತಿನ್ಯರೂಪ' ಎಂಬ ಮಂತ್ರ ಪೂರ್ವಕವಾಗಿ ಈ ದೇವತೆಯನ್ನು ಪೂಜೆಮಾಡಬೇಕು. ಈ ಮಂತ್ರಕ್ಕೆ ಬಲದೇವ ನೆಂಬವನು ಋಷಿ, ಅಷ್ಟಿಯೆಂಬುದು ಛಂದಸ್ಸು, ಗೌರಿಯು ದೇವತೆ, ಚರಕೀಪ್ರೀತಿ ಗಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೧೧೮. ಬಳಿಕ ಕೆಂಪಾದ ಮೈಬಣ್ಣವುಳ್ಳವಳೂ, ಹೊಸಪ್ರಾಯದಿಂದ ಕೂಡಿದ ವಳೂ, ಆದ 'ವಿದಾರಿಕಾ' ಎಂಬ ದೇವತೆಯನ್ನು ಧ್ಯಾನಿಸಬೇಕು. ಮತ್ತು 'ಪವಿತ್ರೇಣ ಪುನೀಹಿ' ಎಂಬ ಮಂತ್ರಪೂರ್ವಕವಾಗಿ ಪೂಜಿಸಬೇಕು.

೧೧೯. ಈ ಮಂತ್ರಕ್ಕೆ ಗರ್ಗನು ಋಷಿ, ತ್ರಿಷ್ಟುಪ್ ಎಂಬುದು ಛಂದಸ್ಸು, ರುದ್ರನು ದೇವತೆ, ವಿದಾರಿಕಾ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇ ಕೆಂದು ಹೇಳಿದೆ.

೧೨೦. ವೃಷಭದಮೇಲೆ ಕುಳಿತಿರುವವಳಾದ 'ಪಾಪರಾಕ್ಷಸೀ' ದೇವತೆಯನ್ನು ಧ್ಯಾನಿಸಿ, 'ಕಯಾನಶ್ಚಿತ್ರ' ಎಂಬ ಮಂತ್ರಪೂರ್ವಕವಾಗಿ ಶ್ರೀಗಂಧ ಚಂದನಗಂಧ ಮೊದಲಾದುವುಗಳಿಂದ ಪೂಜಿಸಬೇಕು.

೧೨೧. ಈ ಮಂತ್ರಕ್ಕೆ ಸುವರ್ಣನೆಂಬವನು ಋಷಿ, ಪಂಕ್ತಿಯೆಂಬುದು ಛಂದಸ್ಸು, ಮಹಾದೇವನೇ ದೇವತೆ, ಇಷ್ಟಾರ್ಥಸಾಧನೆಗಾಗಿ ಪೂಜಿಸುವಾಗ ಈ ಮಂತ್ರವನ್ನು ವಿನಿಯೋಗಿಸಬೇಕು.

ಕುಂಡವೇದ್ಯಾ ಅಂತರೇ ಚ ಸ್ಥಾಪಯೇದ್ವಿಧಿವದ್ಬುಧಃ ।
ಪರ್ವತಾಗ್ರಮೃದಂ ಚೈವ ಗಜದಂತಮೃದಂ ತಥಾ ॥ ೧೨೨ ॥

ವಲ್ಮೀಕೇ ಸಂಗಮೇ ಚೈವ ರಾಜದ್ವಾರಚತುಷ್ಪಥಾತ್ ।
ಕುಶಮೂಲಮೃದಂ ಚೈವ ಯಜ್ಞೀಯಸ್ಯ ವನಸ್ಪತೇಃ ॥ ೧೨೩ ॥

ಇಂದ್ರವಲ್ಲೀ ತಥಾಕ್ರಾಂತ ಅಮೃತೀ ತ್ರಪುಷಸ್ಯ ಚ ।
ಮಾಲತೀ ಚಂಪಕಂ ಚೈವ ತಥಾ ಉರ್ವಾರುಕಸ್ಯ ಚ ॥ ೧೨೪ ॥

ಪಾರಿಭದ್ರಸ್ಯ ಪತ್ರೈಶ್ಚ ಪರಿತಃ ಪರಿವೇಷ್ಟನಂ ।
ಪಂಚತುಂಗಸ್ಯ ಪರಿತೋ ಮುಖೇ ಕುರ್ಯಾತ್ಫಲಾನ್ವಿತಂ ॥ ೧೨೫ ॥

ಶ್ರೀಫಲಂ ಬೀಜಪೂರಂ ಚ ನಾಲಿಕೇರಂ ಚ ದಾಡಿಮಂ ।
ಧಾತ್ರೀಜಂಬುಫಲಂ ಚೈವ ಅನ್ಯಥಾ ದೋಷಮಾದಿಶೇತ್ ॥ ೧೨೬ ॥

---

೧೨೨-೧೨೪. ವಿದ್ವಾಂಸನಾದವನು ಕುಂಡದ ಜಗಲಿಯ ಮಧ್ಯದಲ್ಲಿ ಪರ್ವತ ಶಿಖರದಮೃತ್ತಿಕೆ, ಗಜದಂತದಿಂದ ಮಾಟಿದ ಮೃತ್ತಿಕೆ, ಹುತ್ತದಮೃತ್ತಿಕೆ, ನದೀಸಂಗ ಮಸ್ಥಾನದ ಮೃತ್ತಿಕೆ, ರಾಜದ್ವಾರದ ಮೃತ್ತಿಕೆ, ನಾಲ್ಕುಬೀದಿಗಳು ಕೂಡುವಸ್ಥಳದ ಮೃತ್ತಿಕೆ, ದರ್ಭೆಯಬುಡದಮೃತ್ತಿಕೆ ಮತ್ತು ಯಜ್ಞಾರ್ಥವಾಗಿ ಉಪಯೋಗಿಸುವ ಸಮಿತ್ತಿನ ಜಾತಿಯ ಮರಗಳ ಮತ್ತು ಬಳ್ಳಿಗಳ ಬುಡದಮೃತ್ತಿಕೆ, ಇಂದ್ರದ್ರುಮ (ಮತ್ತಿ) ದ ಬುಡದ ಮೃತ್ತಿಕೆ, ವಿಷ್ಣುಕ್ರಾಂತ, ಅಮೃತವಳ್ಳಿ, ತ್ರಪುಸ ಮುಂತಾದುವು ಗಳ ಬುಡದಮೃತ್ತಿಕೆಯನ್ನು ಸಂಪಾದಿಸಿ ತಂದುಹಾಕಿ ಅದರಮೇಲೆ ವಿಧಿವತ್ತಾಗಿ ಕಲ ಶವನ್ನು ಸ್ಥಾಪಿಸಬೇಕು.

೧೨೫. ಮತ್ತು ಮಾಲತಿ, ಸಂಪಗೆ, ಸೌತೆ, ದೇವದಾರು ಮುಂತಾದವುಗಳ ಎಲೆಗಳಿಂದ ಕಲಶದ ಸುತ್ತಲೂ ಆವರಣಮಾಡಿರಬೇಕು. ಅದರ ಬಾಯಿಯನ್ನು ಐದು ಸುರಹೊನ್ನೆಯ ಪುಷ್ಪಗಳಿಂದಲೂ ಉಕ್ತವಾದ ಫಲಗಳಿಂದಲೂ ಶೋಭಿಸು ವಂತೆ ಮಾಡಬೇಕು.

೧೨೬. ಬಿಲ್ವಪತ್ರೆಹಣ್ಣು, ಮಾದಲದಹಣ್ಣು, ತೆಂಗಿನಕಾಯಿ, ದಾಳಿಂಬೇ ಹಣ್ಣು, ನೇರಲೇಹಣ್ಣು ಇವುಗಳನ್ನು ಮಾತ್ರ ಉಪಯೋಗಿಸಬೇಕು. ಇದಕ್ಕೆ ವ್ಯತ್ಯಾಸವಾದರೆ ದೋಷಕರವೆಂದು ತಿಳಿಯಬೇಕು.

**ಪಂಚರತ್ನಂ ಸುವರ್ಣಂ ಚ ನಿಕ್ಷಿಪೇದ್ವರುಣಂ ಯಜೇತ್ ।**
**ಪಂಚೋಪಚಾರೈರ್ವಿಧಿವದ್ಗಂಧಪುಷ್ಪಾದಿಭಿರ್ಯಜೇತ್ ॥ ೧೨೭ ॥**

**ಉದ್ವರ್ತನ ಇತಿ ಮಂತ್ರೇಣ ವರುಣಂ ಚ ಪುನರ್ಯಜೇತ್ ॥ ೧೨೮ ॥**

**ಅಸ್ಯ ಮಂತ್ರಸ್ಯ ಚ ಋಷಿರ್ವಿಷ್ಣುಶ್ಛಂದ ಉದಾಹೃತಂ ।**
**ಗಾಯತ್ರೀ ದೇವತಾ ಪಾಶೀ ಪ್ರೀತಯೇ ವಿನಿಯೋಜಯೇತ್ ॥ ೧೨೯ ॥**

**ಪಂಚಗಂಧಾನ್ವಿನಿಕ್ಷಿಪ್ಯ ಹಸ್ತಂ ದತ್ವಾ ಪಠೇತ್ತತಃ ॥ ೧೩೦ ॥**

**ಸರ್ವೇ ಸಮುದ್ರಾಃ ಸರಿತಃ ಸರಾಂಸಿ ಚ ಮಹಾಹ್ರದಾಃ ।**
**ಆಯಾಂತು ಸರ್ವಪಾಪಘ್ನಾಃ ಸರ್ವಲೋಕಸುಖಾವಹಾಃ ॥ ೧೩೧ ॥**

**ಗಂಗಾದ್ಯಾಃ ಸರಿತಃ ಸರ್ವಾಸ್ತೀರ್ಥಾನಿ ಜಲದಾ ನದಾಃ ।**
**ಆಯಾಂತು ಯಜಮಾನಸ್ಯ ದುರಿತಕ್ಷಯಕಾರಕಾಃ ॥ ೧೩೨ ॥**

---

೧೨೭. ಅದರಲ್ಲಿ ಪಂಚರತ್ನಗಳನ್ನೂ, ಸುವರ್ಣವನ್ನೂ ಹಾಕಿ, ಅನಂತರ ವರುಣನನ್ನು ಆವಾಹಿಸಿ, ವಿಧಿಪ್ರಕಾರ ಗಂಧ, ಪುಷ್ಪ ಮೊದಲಾದುವುಗಳಿಂದ ಪಂಚೋಪಚಾರಪೂಜೆಯನ್ನು ಮಾಡಬೇಕು.

೧೨೮-೧೨೯. ಈ ವಿಧಿಯಲ್ಲಿ 'ಉದ್ವರ್ತನ' ಎಂಬ ಮಂತ್ರ ಪೂರ್ವಕವಾಗಿ ವರುಣನನ್ನು ಪುನಃ ಪೂಜೆಮಾಡಬೇಕು. ಈ ಮಂತ್ರಕ್ಕೆ ವಿಷ್ಣುವು ಋಷಿ, ಗಾಯತ್ರಿಯೆಂಬುದೇ ಛಂದಸ್ಸು, ವರುಣನೇ ದೇವತೆ, ಅವನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೧೩೦. ಆ ಮೇಲೆ ಅದರಲ್ಲಿ ಐದುವಿಧವಾದ ಸುಗಂಧದ್ರವ್ಯಗಳನ್ನೂ ಹಾಕಿ, ಅದರಮೇಲೆ ಹಸ್ತವನ್ನಿಟ್ಟು ಈ ಮಂತ್ರವನ್ನು ಹೇಳಬೇಕು.

೧೩೧. ಸಮಸ್ತಪಾಪಗಳನ್ನೂ ನಾಶಮಾಡತಕ್ಕವೂ, ಸರ್ವಲೋಕಗಳಿಗೂ ಸುಖವನ್ನುಂಟುಮಾಡತಕ್ಕವೂ ಆದ ಎಲ್ಲಾ ಸಮುದ್ರಗಳೂ, ನದಿಗಳೂ, ಸರೋವರಗಳೂ, ದೊಡ್ಡಮಡುಗಳೂ ಇಲ್ಲಿಗೆ ಆಗಮಿಸಲಿ.

೧೩೨. ಗಂಗೆ ಮೊದಲಾದ ನದಿಗಳೂ, ಎಲ್ಲಾ ಪುಣ್ಯತೀರ್ಥಗಳೂ. ಜಲಪ್ರದಗಳಾದ ನದಗಳೂ (ಪಶ್ಚಿಮದಿಕ್ಕಿಗೆ ಹರಿಯುವ ನದಿಗಳೂ) ಯಜಮಾನನ ಪಾಪವನ್ನು ನಾಶಮಾಡುವುದಕ್ಕಾಗಿ ಇಲ್ಲಿ ಬಂದು ನೆಲಸಲಿ.

**ಅಘೋರಾಜ್ಯಷ್ಟಕೈಕೃತಾಃ ವಾಸ್ತೋಷ್ಪತಯ ಇತ್ಯಪಿ ।**
**ಶತಂ ವಾ ಚಾಷ್ಟಸಂಯುಕ್ತಂ ಸಹಸ್ರಂ ವಾ ವಿಶೇಷತಃ ॥ ೧೩೩ ॥**

**ಶತಾರ್ಧಂ ವಾ ಹುನೇದ್ವಿಪ್ರಸ್ತಿಲೈರ್ವಾ ತಂಡುಲೈಃ ಸಹ ।**
**ಪಾಲಾಶೈರ್ವಾ ಪಿಪ್ಪಲೈರ್ವೌದುಂಬರೈರ್ವಾ ಸಮಾಚರೇತ್ ॥ ೧೩೪ ॥**

**ಪಯೋದಧ್ಯಾದಿಭಿರ್ವಾಪಿ ಮಧ್ವಾಜ್ಯೈರ್ವಾ ವಿಶಿಷ್ಯತೇ ।**
**ಅನ್ಯೇಷಾಂ ಚ ವ್ರತೇನ್ಯೈವ ಏಕೈಕಾಮಥ ವಾಹುತಿಂ ॥ ೧೩೫ ॥**

**ಅಷ್ಟಾವಿಂಶತಿಭಿಶ್ಚಾನ್ಯೈರಷ್ಟಾಷ್ಟೌ ಪಂಚ ಪಂಚ ವಾ ॥ ೧೩೬ ॥**

**ಚರಕ್ಯಾದೀಂಶ್ಚಾಸನೈಶ್ಚ ಪಿಷ್ಟಕೈರ್ವಟಕೇನ ವಾ ।**
**ರಕ್ತಪುಷ್ಪೇಣ ಪತ್ರೇಣ ತ್ರಿಮಧ್ವಕ್ತೇನ ಯತ್ನತಃ ॥ ೧೩೭ ॥**

---

೧೩೩. ಅಘೋರಾದಿಯಾದ ಅಷ್ಟಕಗಳು, ವಾಸ್ತೋಷ್ಪತೇ ಎಂಬ ಮಂತ್ರ ತ್ರಯ, ಇವುಗಳಿಂದ ಹೆಚ್ಚೆಂದರೆ ಸಾವಿರ, ಇಲ್ಲದಿದ್ದರೆ ನೂರೆಂಟು, ಆಗದಿದ್ದರೆ ಐವತ್ತುಸಂಖ್ಯೆಯಲ್ಲಿ ಈ ಯಜ್ಞೇಶ್ವರನಿಗೆ ಹೋಮಮಾಡಬೇಕು. ಆಹುತಿಗಳಿಗೆ ಅಕ್ಕಿ ಅಥವಾ ಎಳ್ಳು ಮತ್ತು ಮುತ್ತುಗ ಅಥವಾ ಅರಳಿ ಅತ್ತಿ ಮುಂತಾದ ಸಮಿತ್ತುಗಳು ಇವುಗಳ ಸಮೇತ ವಾಗಿರಬೇಕು.

೧೩೫. ಹಾಲು ಮೊಸರು ಇವುಗಳಿಂದಲೋ ವಿಶೇಷತಃ ಜೇನುತುಪ್ಪ ತುಪ್ಪ ಇವುಗಳಿಂದಲೋ ಅಥವಾ ಇನ್ನಾವುದಾದರೂ ಆಜ್ಯಭಾಗಗಳಿಂದಲೋ ನಿಯಮ ಪೂರ್ವಕವಾಗಿ ಒಂದೊಂದು ಆಹುತಿಯನ್ನು ಕೊಡಬೇಕು.

೧೩೬. ಅಲ್ಲದೆ ಬೇರೆ ಇಪ್ಪತ್ತೆಂಟುಸಂಖ್ಯೆಯಿಂದಲೋ, ಅಥವಾ ಎಂಟೆಂಟು ಸಂಖ್ಯೆಯಿಂದಲೋ, ಅಥವಾ ಐದೈದುಸಂಖ್ಯೆಯಿಂದಲೋ ಬೇರೆ ಆಹುತಿಯನ್ನು ಕೊಡಬೇಕು.

೧೩೭-೧೪೯. 'ಚರಕೀ' ಮುಂತಾದ ದೇವತೆಗಳನ್ನು ಆಸನಸಮರ್ಪಣೆ ಯಿಂದಕೆಂಪುಹೂಗಳು, ಪತ್ರೆಗಳು ಇವುಗಳಿಂದಲೂ ಪೂಜಿಸಿ ವಟಕಪಿಷ್ಟಗಳನ್ನಾಗಲಿ, ತ್ರಿಮಧುವನ್ನಾಗಲಿ ಯತ್ನದಿಂದ ನಿವೇದಿಸಬೇಕು. ಬಳಿಕ 'ವಾಸ್ತೋಷ್ಪತೇ' ಎಂಬ ಮಂತ್ರವನ್ನು ಸಂತತವಾಗಿ ಜಪಿಸಿ ಅನಂತರ ಅಂಗೋಪಾಂಗಸಮೇತನಾದ ವಾಸ್ತು ಪುರುಷನನ್ನು ವಿಧಿಪೂರ್ವಕವಾಗಿ ಪೂಜಿಸಬೇಕು. ಹೀಗೆ ಪೂಜಿಸಿ ಆ ಮೇಲೆ ಪ್ರತಿ

ವಾಸ್ತೋಷ್ಪತೇ ದೃಢಂ ಜಪ್ತ್ವಾ ಯಜೇದ್ವಾಸ್ತುಪತಿಂ ಯದಾ ।
ಪಂಚೋಪಚಾರೈರ್ವಿಧಿವತ್ಸಾಂಗೋಪಾಂಗೈರನಂತರಂ ॥ ೧೩೮ ॥

ಬಲಿಮಾಸಾದಯೇತ್ಪಶ್ಚಾದ್ದದ್ಯಾದೇಕೈಕಶಃ ಕ್ರಮಾತ್ ।
ಬ್ರಾಹ್ಮಣೈಶ್ಚೈವ ದದ್ಯಾಚ್ಚ ಸದಾಚಾಜ್ಯಂ ಸಮಾಕ್ಷಿಕಂ ॥ ೧೩೯ ॥

ಶಾಲ್ಯನ್ನಂ ಶಿಖಿನೇ ದದ್ಯಾತ್ತಥಾ ನೀಲೋತ್ಪಲಾನಿ ಚ ।
ಓದನಂ ಸೋತ್ಪಲಂ ದದ್ಯಾತ್ಪರ್ಜನ್ಯಾಯ ವಿಚಕ್ಷಣಃ ॥ ೧೪೦ ॥

ಜಯಾಯ ಪಿಷ್ಟಕಂ ಕಾರ್ಯಮಿಂದ್ರಾಯ ಘೃತಮೋದಕಃ ।
ಸೂರ್ಯಾಯ ಪಿಷ್ಟಕಾನ್ನಂ ಚ ಸತ್ಯಾಯ ಯವಪೂಲಿಕಾಂ ॥ ೧೪೧ ॥

ವೃಷಾಯ ಮತ್ಸ್ಯಮಾಂಸಾನ್ನಂ ಶಷ್ಕುಲೀಮಂತರಿಕ್ಷತೆ ।
ವಾಯವ್ಯೇ ಚ ತಥಾ ಸಕ್ತೂನ್ಪೂಷೇ ಚಾಪೂಪಮೇವ ಹಿ ॥ ೧೪೨ ॥

---

ಯೊಂದು ದೇವತೆಯನ್ನೂ ಉದ್ದೇಶಿಸಿ, ಕ್ರಮವಾಗಿ ಬೇರೆಬೇರೆ ಬಲಿಪ್ರದಾನಮಾಡಬೇಕು. ಹೀಗೆ ಬಲಿಪ್ರದಾನಮಾಡುವಾಗ ಯಾವಾಗಲೂ ಬ್ರಾಹ್ಮಣರನ್ನು ಜೊತೆಯಲ್ಲಿ ಕರೆದುಕೊಂಡು ಹೊರಟು ಅಂಗೋಪಾಂಗ ದೇವತಾಸಹಿತನಾದ, ವಾಸ್ತುಪುರುಷನಿಗೆ ತುಪ್ಪ, ಜೇನುತುಪ್ಪ ಇವುಗಳ ಸಮೇತ ಬಲಿಯನ್ನು ಸಮರ್ಪಿಸಬೇಕು.

೧೪೦. ಈಗ ಆ ದೇವತೆಗಳಿಗೆ ಬಲಿಪ್ರದಾನಮಾಡುವ ವಿಧಾನವನ್ನು ತಿಳಿಸುತ್ತಾರೆ. 'ಶಿಖಿ'ಗೆ ಭತ್ತದ ಅಕ್ಕಿಯ ಅನ್ನವನ್ನೂ, ನೀಲೋತ್ಪಲಪುಷ್ಪಗಳನ್ನೂ ಅರ್ಪಿಸಬೇಕು. 'ಪರ್ಜನ್ಯ'ನಿಗೆ ನೈದಿಲೆಸಹಿತವಾದ ಅನ್ನವನ್ನು ಬಲಿಯಾಗಿ ಸಮರ್ಪಿಸಬೇಕು.

೧೪೧. 'ಜಯ' ಎಂಬ ದೇವತೆಗೆ ಪಿಷ್ಟಬಲಿಯನ್ನು ಕೊಡಬೇಕು. 'ಇಂದ್ರ' (ಕುಲಿಶಾಯುಧ) ನಿಗೆ ಘೃತಯುಕ್ತವಾದ ಮೋದಕವನ್ನೂ, 'ಸೂರ್ಯ' ನಿಗೆ ಹಿಟ್ಟು ಮಿಶ್ರವಾದ ಅನ್ನವನ್ನೂ, 'ಸತ್ಯ' ಎಂಬ ದೇವತೆಗೆ ಯವಧಾನ್ಯದ ಹಿಟ್ಟಿನ ಪೂರಿಯನ್ನೂ, ಅರ್ಪಿಸಬೇಕು.

೧೪೨. 'ವೃಷ'ನೆಂಬ ದೇವತೆಗೆ ಮೀನಿನ ಮಾಂಸಮಿಶ್ರವಾದ ಅನ್ನವನ್ನೂ, 'ಆಕಾಶ'ನಿಗೆ ಚಕ್ಕುಲಿಯನ್ನೂ, 'ವಾಯು'ವಿಗೆ ಸಕ್ತುವನ್ನೂ 'ಪೂಷ'ನಿಗೆ ಅಪೂಪವನ್ನು ಸಮರ್ಪಿಸಬೇಕು.

**ವಿತಥಾಯ ಕಲಾಯಾನ್ನಂ ಗುಹಾಖ್ಯಾಯ ಸಮಾಕ್ಷಿಕಂ ।**
**ಯಮಾಯ ಕೃಶರಾನ್ನಂ ಚ ಶಾಲ್ಯನ್ನಂ ಚ ನಿವೇದಯೇತ್ ॥ ೧೪೩ ॥**

**ಗಂಧರ್ವಾಯ ಕಸ್ತೂರಿಕಾನ್ನಂ ಕೃಶರಂ ಭೃಂಗರಾಜತೇ ।**
**ಮೃಗಾಯ ಯಾವಕಾನ್ನಂ ಚ ಪಿತೃಭ್ಯೋ ಮುದ್ಗಪಾಯಸಂ ॥ ೧೪೪ ॥**

**ದೌವಾರಿಕಾಯ ಕೃಶರಾನ್ಸುಗ್ರೀವಾಯ ಚ ಪೂಪಕಂ ।**
**ಪಾಯಸಂ ಪುಷ್ಪದಂತಾಯ ವರುಣಾಯ ಚ ಪಿಷ್ಟಕಂ ॥ ೧೪೫ ॥**

**ಅಸುರಾಯ ಮೋದಕಾಂಶ್ಚೈವ ದದ್ಯಾದಾಪಿಕ್ಷಯೇ ಸುರಾಂ ।**
**ಘೃತೋದನಂ ಚ ಸೋಮಾಯ ಕಣಾನ್ನಂ ಯಕ್ಷ್ಮಣೇ ದದೇತ್॥ ೧೪೬ ॥**

**ರೋಗಾಯ ಘೃತಲಡ್ಡೂಕಂ ಸಪಾಯಸಗುಡೌದನಂ ।**
**ಮೋಕ್ಷಾಯ ವಿವಿಧಾನ್ನಂ ಚ ಭಲ್ಲಾಟಾಯ ತಥೈವ ಚ ॥ ೧೪೭ ॥**

---

೧೪೩. 'ವಿತಥ'ನೆಂಬವನಿಗೆ ನೆಲಗಡಲೇಕಾಯಿ ಮಿಶ್ರವಾದ ಅನ್ನವನ್ನೂ, 'ಗುಹ'ನೆಂಬವನಿಗೆ ಜೇನುಮಿಶ್ರವಾದ ಅನ್ನವನ್ನೂ, 'ಯಮ'ದೇವತೆಗೆ ಎಳ್ಳುಹುಡಿ ಅನ್ನವನ್ನೂ, ಶಾಲ್ಯಾನ್ನವನ್ನೂ ಸಮರ್ಪಣಮಾಡಬೇಕು.

೧೪೪. 'ಗಂಧರ್ವ' ಎಂಬ ದೇವತೆಗೆ ಕಸ್ತೂರಿ ಮಿಶ್ರವಾದ ಅನ್ನವನ್ನೂ, 'ಭೃಂಗರಾಜ' ದೇವತೆಗೆ ಚಿಗುಳಿಯನ್ನೂ 'ಮೃಗ' ಎಂಬ ದೇವತೆಗೆ ಯವಧಾನ್ಯದ ಅನ್ನವನ್ನೂ 'ಪಿತೃ'ಗಣದೇವತೆಗೆ ಹೆಸರುಬೇಳೆ ಪಾಯಸವನ್ನೂ ; ಬಲಿಪ್ರದಾನ ಮಾಡಬೇಕು.

೧೪೫. 'ದೌವಾರಿಕ'ದೇವತೆಗೆ ಚಿಗಳೀ ಉಂಡೆಗಳನ್ನೂ, 'ಸುಗ್ರೀವ'ದೇವತೆಗೆ ಅಪೂಪವನ್ನೂ 'ಪುಷ್ಪದಂತ' ಎಂಬ ದೇವತೆಗೆ ಪಾಯಸವನ್ನೂ "ಜಲಾಧಿಪ"ದೇವತೆಗೆ ಪಿಷ್ಟವನ್ನೂ, ಬಲಿಸಮರ್ಪಣೆಮಾಡಬೇಕು.

೧೪೬. 'ಅಸುರ' ಎಂಬ ದೇವತೆಗೆ ಮೋದಕವನ್ನೂ, 'ಆಪೋ' ದೇವತೆಗೂ 'ಕ್ಷಯ' ದೇವತೆಗೂ ಮದ್ಯವನ್ನೂ ; "ಸೋಮ" ಎಂಬ ದೇವತೆಗೆ ತುಪ್ಪಮಿಶ್ರವಾದ ಅನ್ನವನ್ನೂ ; "ಯಕ್ಷ್ಮ"ದೇವತೆಗೆ ನುಚ್ಚಕ್ಕಿಯ ಅನ್ನವನ್ನೂ ಸಮರ್ಪಿಸಬೇಕು.

೧೪೭ 'ರೋಗ' ಎಂಬ ದೇವತೆಗೆ ತುಪ್ಪದಿಂದ ಕರಿದ ಕಾಳಿನಲಡ್ಡುಗೆಯನ್ನೂ; ಪಾಯಸಸಹಿತವಾಗಿ ಬೆಲ್ಲದ ಅನ್ನವನ್ನೂ ; 'ಮೋಕ್ಷ' ಎಂಬ ದೇವತೆಗೆ ನಾನಾಬಗೆಯ

**ಸೋಮಾಯ ಮಧುಶಾಲ್ಯನ್ನಂ ನಾಗಾಯ ಗುಡಪಿಷ್ಟಕಂ ।**
**ಅದಿತ್ಯೈ ಚಾಪಿ ಗೋಧೂಮಂ ಘೃತಪಕ್ವಂ ನಿವೇದಯೇತ್ ॥ ೧೪೮ ॥**

**ದಿತ್ಯೈ ದದ್ಯಾತ್ತಥಾ ಕ್ಷೀರಂ ಸಿತಶರ್ಕರಯಾ ಸಹ ।**
**ಕ್ಷೀರಾನ್ನಂ ಚೈವ ಪೂಷ್ಣೇ ಚ ಆಪವತ್ಸಾಯ ವೈ ದಧಿ ॥ ೧೪೯ ॥**

**ಸಾವಿತ್ರ್ಯೈ ಲಡ್ಡುಕಾನ್ನಂ ಚ ಸವಿತ್ರೇ ಚ ಗುಡೌದನಂ ।**
**ಜಯಾಯ ಘೃತಮನ್ನಂ ಚ ಮಿಷ್ಟಾನ್ನಂ ಚ ವಿವಸ್ವತೇ ॥ ೧೫೦ ॥**

**ವಿರೂಪಾಯ ಚ ತದ್ದದ್ಯಾದ್ಧರಿದ್ರಾನ್ನಂ ತಥೈವ ಚ ।**
**ಘೃತೌದನಂ ಚ ಚಿತ್ರಾಯ ರುದ್ರಾಯ ಘೃತಪಾಯಸಂ ॥ ೧೫೧ ॥**

---

ಅನ್ನವನ್ನೂ ; 'ಭಲ್ಲಾಟ'ನೆಂಬ ದೇವತೆಗೂ ; ಅದೇ ರೀತಿ ವಿವಿಧವಾದ ಅನ್ನವನ್ನೂ ನಿವೇದನ ಮಾಡಬೇಕು.

೧೪೮. "ಸೋಮ"ನಿಗೆ ಜೇನುತುಪ್ಪ ಮತ್ತು ಶಾಲ್ಯನ್ನವನ್ನೂ ; "ನಾಗ" ನೆಂಬುವನಿಗೆ ಬೆಲ್ಲ ಮತ್ತು ಹಿಟ್ಟನ್ನೂ (ತಂಬಿಟ್ಟನ್ನೂ); "ಅದಿತಿ"ಗೆ ತುಪ್ಪದಲ್ಲಿ ಬೇಯಿಸಿದ ಗೋಧೀಹಿಟ್ಟಿನ ಭಕ್ಷ್ಯವನ್ನೂ ನಿವೇದಿಸಬೇಕು.

೧೪೯. 'ದಿತಿ' ದೇವತೆಗೆ ಬೂರಾಸಕ್ಕರೆ ಮಿಶ್ರವಾದ ಹಾಲನ್ನೂ, 'ಪೂಷ'ನಿಗೆ ಹಾಲು ಮತ್ತು ಅನ್ನವನ್ನೂ; 'ಆಪವತ್ಸ'ನೆಂಬುವನಿಗೆ ಮೊಸರನ್ನೂ; ಸಾವಿತ್ರಿದೇವಿಗೆ ಲಡ್ಡುಕಾಯುಕ್ತವಾದ ಅನ್ನವನ್ನೂ ; "ಸವಿತೃ"ವಿಗೆ ಬೆಲ್ಲದ ಅನ್ನವನ್ನೂ ;

೧೫೦ 'ಜಯ' ಎಂಬ ದೇವತೆಗೆ ತುಪ್ಪಾನ್ನವನ್ನೂ, 'ವಿವಸ್ವಂತ'ನಿಗೆ ರುಚಿಕರವಾದ ಮೃಷ್ಟಾನ್ನವನ್ನೂ, 'ವಿರೂಪ'ನಿಗೆ ಹರಿದ್ರಾನ್ನವನ್ನೂ, (ಹಳದಿಯ ಬಣ್ಣದ ಅನ್ನವನ್ನೂ) ಸಮರ್ಪಿಸಬೇಕು.

೧೫೧. 'ಚಿತ್ರ'ನಿಗೆ ತುಪ್ಪ ಮಿಶ್ರವಾದ ಅನ್ನವನ್ನೂ, "ರುದ್ರ"ನಿಗೆ ತುಪ್ಪ ಮಿಶ್ರವಾದ ಪಾಯಸವನ್ನೂ ನಿಯಮದಿಂದ ಸಮರ್ಪಿಸಬೇಕು.

ಮಾಂಸೌದನಂ ಯಕ್ಷ್ಮಣೇ ಚ ಕೃಶರಂ ವರುಣಾಯ ಚ ।
ಅರ್ಯಮ್ಣೇ ಶರ್ಕರಾಪೂಪಂ ಬಹಿರ್ದದ್ಯಾಚ್ಚತುಷ್ಟಯಂ ॥ ೧೫೨ ॥

ಚಿತ್ರೌದನಂ ಸಮಾಂಸಂ ಚ ಮತ್ಸ್ಯಾನ್ನಂ ಗುಡಪಿಷ್ಟಕಂ ।
ಪ್ರತಿದೇವೋಪರಿ ಕ್ಷೀರಂ ಘೃತಕ್ಷೀರಸಮಾಯುತಂ ॥
ತೀರ್ಥತೋಯಸಮಾಯುಕ್ತಂ ಸುಗಂಧೇನ ಸಮನ್ವಿತಂ ॥ ೧೫೩ ॥

ಪತಾಕಾ ದೇವವರ್ಣೇನ ದದ್ಯಾದ್ಬ್ರಹ್ಮಾದಿಷು ಕ್ರಮಾತ್ ।
ಮಂತ್ರಂ ಜಪೇತ್ಸ್ವಸಾಮರ್ಥ್ಯಾತ್ಸ್ವಸಾಮರ್ಥ್ಯಾತ್‌ಸ್ತುತಿಂ ಪಠೇತ್
॥ ೧೫೪ ॥

ಪುರುಷಸ್ತವಸ್ಯ ಸೂರ್ಯಋಷಿರ್ಜಗತೀ ಛಂದಃ ।
ಸವಿತಾ ದೇವತಾ ಸೋಮಪಾಕೇ ಸ್ತುತೌ ವಿನಿಯೋಗಃ ॥ ೧೫೫ ॥

---

೧೫೨. 'ಯಕ್ಷ್ಮ'ನಿಗೆ ಮಾಂಸಮಿಶ್ರವಾದ ಅನ್ನವನ್ನೂ; 'ವರುಣ'ನಿಗೆ ಎಳ್ಳುಹುಡಿಯ ಅನ್ನವನ್ನೂ, 'ಆರ್ಯಮ'ನಿಗೆ ಸಕ್ಕರೆಯ ಅಪೂಪವನ್ನೂ (ಚಿರೋಟಿ) ಬಲಿಸಮರ್ಪಣಮಾಡಬೇಕು. ಅವುಗಳಲ್ಲಿ ಚಿತ್ರಾನ್ನ, ಮಾಂಸಮಿಶ್ರವಾದ ಅನ್ನ, ಮತ್ಸ್ಯಮಿಶ್ರವಾದ ಅನ್ನ, ಬೆಲ್ಲದನ್ನ ಇವು ನಾಲ್ಕನ್ನೂ ಹೊರಗಡೆ ನೈವೇದ್ಯಮಾಡಬೇಕು.

೧೫೩. ಪ್ರತಿಯೊಂದು ದೇವತೆಯ ಬಲಿಸಮರ್ಪಣೆಯ ದ್ರವ್ಯದಮೇಲೆ ತುಪ್ಪ ಹಾಲು ಇವುಗಳನ್ನು ಉದ್ಧರಣೆಯಿಂದ ಹಾಕಿ ಸುವಾಸನಾಯುಕ್ತವಾದ ತೀರ್ಥೋದಕವನ್ನೂ ಸಮರ್ಪಣೆಮಾಡಬೇಕು.

೧೫೪. ಬ್ರಹ್ಮ ಮೊದಲಾದವರಿಗೆ ಕ್ರಮವಾಗಿ ಆಯಾ ದೇವತಾರ್ಹವಾದ ಬಣ್ಣದ ಪತಾಕೆಗಳನ್ನು ಸಮರ್ಪಿಸಬೇಕು. ತನ್ನ ಶಕ್ತ್ಯನುಸಾರವಾಗಿ ಆಯಾ ದೇವತಾಮಂತ್ರಜಪಮಾಡಿ ಯಥಾಶಕ್ತಿ ಸ್ತೋತ್ರವನ್ನೂ ಪಠಿಸಬೇಕು.

೧೫೫. ಪರಮಪುರುಷಸ್ತೋತ್ರಮಂತ್ರಕ್ಕೆ ಸೂರ್ಯನು ಋಷಿ, ಜಗತೀ ಎಂಬುದು ಛಂದಸ್ಸು, ಸವಿತೃವೇ ದೇವತೆ, ಸೋಮಪಾಕಸ್ತುತಿಯಲ್ಲಿ ಈ ಮುಂದಿನ ಈ ಪರಮಪುರುಷಸ್ತೋತ್ರಮಂತ್ರವನ್ನು ಶ್ರದ್ಧೆಯಿಂದ ಪಠಿಸಬೇಕು.

॥ ಶಂಕರ ಉವಾಚ ॥

ವಿಷ್ಣುರ್ಜಿಷ್ಣುರ್ವಿಭುರ್ಯಜ್ಞೋ ಯಜ್ಞಿಯೋ ಯಜ್ಞಪಾಲಕಃ ।
ನಾರಾಯಣೋ ನರೋ ಹಂಸೋ ವಿಷ್ವಕ್ಸೇನೋ ಹುತಾಶನಃ ॥ ೧೫೬ ॥

ಯಜ್ಞೇಶಃ ಪುಂಡರೀಕಾಕ್ಷಃ ಕೃಷ್ಣಃ ಸೂರ್ಯಃ ಸುರಾರ್ಚಿತಃ ।
ಆದಿದೇವೋ ಜಗತ್ಕರ್ತಾ ಮಂಡಲೇಶೋ ಮಹೀಧರಃ ॥ ೧೫೭ ॥

ಪದ್ಮನಾಭೋ ಹೃಷೀಕೇಶೋ ದಾತಾ ದಾಮೋದರೋ ಹರಿಃ ।
ತ್ರಿವಿಕ್ರಮಸ್ತ್ರಿಲೋಕೇಶೋ ಬ್ರಹ್ಮಣಃ ಪ್ರೀತಿವರ್ಧನಃ ॥ ೧೫೮ ॥

ಭಕ್ತಿಪ್ರಿಯೋಽಚ್ಯುತಃ ಸತ್ಯಃ ಸತ್ಯವಾಕ್ಯೋ ಧ್ರುವಃ ಶುಚಿಃ ।
ಸಂನ್ಯಾಸೀ ಶಾಸ್ತ್ರತತ್ವಜ್ಞಸ್ತ್ರಿಪಂಚಾಶದ್ಗುಣಾತ್ಮಕಃ ॥ ೧೫೯ ॥

---

೧೫೬. ಶಂಕರನು ಹೇಳುತ್ತಾನೆ—ವ್ಯಾಪಕನೂ, ಜಯಶಾಲಿಯೂ, ಸರ್ವಕ್ಕೂ ಈಶ್ವರನೂ, ಯಜ್ಞಸ್ವರೂಪನೂ, ಯಜ್ಞದಲ್ಲಿ ಸಂಬಂಧವುಳ್ಳವನೂ, ಯಜ್ಞವನ್ನು ರಕ್ಷಿಸುವವನೂ, ನಾರಾಯಣನೂ, ನರಸ್ವರೂಪನೂ, ಹಂಸಮಂತ್ರಾತ್ಮಕನೂ, ವಿಷ್ವಕ್ಸೇನನೂ ಅಗ್ನಿಸ್ವರೂಪನೂ, ಆಗಿದ್ದೀಯೆ.

೧೫೭. ಯಜ್ಞಗಳಿಗೊಡೆಯನೂ ; ಬಿಳಿದಾವರೆಯಂತೆ ಕಣ್ಣುಳ್ಳವನೂ, ಕೃಷ್ಣನಾಮಕನೂ, ಸೂರ್ಯರೂಪನೂ, ದೇವತೆಗಳಿಂದ ಪೂಜಿಸಲ್ಪಡುವವನೂ, ಆದಿದೇವನೂ ಲೋಕಕ್ಕೆ ಕರ್ತೃವೂ, ಮಂಡಲಾಧಿಪತಿಯೂ, ಭೂಮಿಯನ್ನು ಧರಿಸಿದವನೂ, ಆಗಿರುವ

೧೫೮. ಮತ್ತು ಹೊಕ್ಕುಳಲ್ಲಿ ಕಮಲವುಳ್ಳವನೂ, ಇಂದ್ರಿಯಗಳಿಗೆ ಒಡೆಯನೂ, ದಾನಶೀಲನೂ, ದಾಮೋದರನೂ, ಹರಿಯೂ, ತ್ರಿವಿಕ್ರಮನೂ, (ಮೂರು ಹೆಜ್ಜೆಗಳಿಂದ ಲೋಕವನ್ನೇ ಅಳೆದವನೂ) ಮೂರುಲೋಕಗಳಿಗೂ ಒಡೆಯನೂ, ಬ್ರಹ್ಮನ ಪ್ರೀತಿಯನ್ನು ಅಭಿವೃದ್ಧಿಗೊಳಿಸತಕ್ಕವನೂ, ಆಗಿರುವೆ.

೧೫೯. ಭಕ್ತರಿಗೆ ಪ್ರಿಯವನ್ನುಂಟುಮಾಡುವವನೂ, ನಾಶರಹಿತನೂ, ಸತ್ಯಸ್ವರೂಪನೂ, ಸತ್ಯವಾದ ಮಾತನ್ನಾಡುವವನೂ, ಶಾಶ್ವತನೂ, ಶುಚಿಸ್ವರೂಪನೂ, ಕಾಮ್ಯಕರ್ಮವನ್ನೆಲ್ಲಾ ತ್ಯಾಗಮಾಡಿದ ಸಂನ್ಯಾಸಿಯೂ, ಶಾಸ್ತ್ರಗಳ ತತ್ವಗಳನ್ನು ತಿಳಿದವನೂ, ಐವತ್ತುಮೂರುಗುಣಗಳಿಗೂ ಆಶ್ರಯನೂ; ಆಗಿರುವೆ.

ವಿದಾರೀ ವಿನಯಃ ಶಾಂತಸ್ತಪಸ್ವೀ ವೈದ್ಯುತಪ್ರಭಃ ।
ಯಜ್ಞಸ್ತ್ವಂ ಹಿ ವಷಟ್ಕಾರಸ್ತ್ವಮೋಂಕಾರಸ್ತ್ವಮಗ್ನಯಃ ॥ ೧೬೦ ॥

ತ್ವಂ ಸ್ವಧಾ ತ್ವಂ ಹಿ ಸ್ವಾಹಾ ತ್ವಂ ಸುಧಾ ಚ ಪುರುಷೋತ್ತಮಃ ।
ನಮೋ ದೇವಾದಿದೇವಾಯ ವಿಷ್ಣವೇ ಶಾಶ್ವತಾಯ ಚ ॥ ೧೬೧ ॥

ಅನಂತಾಯಾಪ್ರಮೇಯಾಯ ನಮಸ್ತೇ ಗರುಡಧ್ವಜ ॥
ಬ್ರಹ್ಮಸ್ತವಮಿಮಂ ಪ್ರೋಕ್ತಂ ಮಹಾದೇವೇನ ಭಾಷಿತಂ ।
ಪ್ರಯತ್ನಾದ್ಯಃ ಪಠೇನ್ನಿತ್ಯಮಮೃತತ್ವಂ ಚ ಗಚ್ಛತಿ ॥ ೧೬೨ ॥

ಧ್ಯಾಯನ್ತಿ ಯೇ ನಿತ್ಯಮನಂತಮಚ್ಯುತಂ ।
ಹೃತ್ಪದ್ಮಮಧ್ಯೇ ಸ್ವಯಮಪ್ಯವಸ್ಥಿತಂ ॥

---

೧೬೦. ಮತ್ತು ದುಷ್ಟರನ್ನು ವಿದಾರಣಮಾಡತಕ್ಕವನೂ, ವಿನಯಶೀಲನೂ, ಶಾಂತನೂ. ತಪಸ್ವಿಯೂ, ಮಿಂಚಿನಂತೆ ಕಾಂತಿಯುಳ್ಳವನೂ ಆದ ಸ್ವಾಮಿಯೇ ! ನೀನೇ ಯಜ್ಞಸ್ವರೂಪನಾಗಿದ್ದೀ, ವಷಟ್ಕಾರ ಮತ್ತು ಓಂಕಾರಸ್ವರೂಪನೂ ನೀನೇ ಆಗಿರುವೆ, ನೀನೇ ಅಗ್ನಿಗಳ ಸ್ವರೂಪನೂ ಆಗಿದ್ದೀಯೆ.

೧೬೧. ಸ್ವಧಾ, ಸ್ವಾಹಾ ಮತ್ತು ಸುಧಾ (ಅಮೃತ) ಇವುಗಳೂ ನಿನ್ನ ಸ್ವರೂಪವೇ ಆಗಿರುವುವು. ನೀನೇ ಪುರುಷೋತ್ತಮನು. ದೇವತೆಗಳಿಗೆಲ್ಲಾ ಆದಿದೇವನೂ ಶಾಶ್ವತನೂ, ಅನಂತನೂ, ಅಪ್ರಮೇಯನೂ, ಗರುಡಧ್ವಜನೂ ಆದ ವಿಷ್ಣುವೇ! ನಿನಗೆ ನಮಸ್ಕಾರ.

೧೬೨. ಮಹಾದೇವನಿಂದ ಉಕ್ತವಾದ ಈ ಪರಮಪುರುಷ ಸ್ತೋತ್ರವನ್ನು ಯಾವನು ನಿತ್ಯವೂ ಪ್ರಯತ್ನದಿಂದ ಪಠಿಸುವನೋ ಅವನು ಅಮರತ್ವವನ್ನು ಪಡೆಯುವನು.

೧೬೩. ನಿತ್ಯನೂ, ಅನಂತನೂ, ಅಚ್ಯುತನೂ, ಹೃದಯಪದ್ಮದ ಮಧ್ಯಭಾಗದಲ್ಲಿ ಯಾವಾಗಲೂ ನೆಲಸಿರುವವನೂ, ಭಕ್ತರಸ್ವಾಮಿಯೂ, ಅದ್ವಿತೀಯನೂ,

**ಉಪಾಸಕಾನಾಂ ಪ್ರಭುಮೇಕಮೀಶ್ವರಂ ।**
**ತೇ ಯಾಂತಿ ಸಿದ್ಧಿಂ ಪರಮಾಂ ತು ವೈಷ್ಣವೀಂ ॥ ೧೬೩ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ ದ್ವಿತೀಯಭಾಗೇ ದ್ವಾದಶೋಽಧ್ಯಾಯಃ**



---

ಸರ್ವಸಮರ್ಥನೂ ಆದ ಸ್ವಾಮಿಯನ್ನು ಧ್ಯಾನಮಾಡುವವರು ವಿಷ್ಣುಸಂಬಂಧಿಯಾದ ಉತ್ತಮವಾದ ಸಿದ್ಧಿಯನ್ನು ಪಡೆಯುವರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಎರಡನೆಯ ಭಾಗದಲ್ಲಿ ಹನ್ನೊಂದು ಮತ್ತು ಹನ್ನೆರಡನೆಯ ಅಧ್ಯಾಯಗಳು ಮುಗಿದುವು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ದ್ವಿತೀಯಭಾಗೇ
## ತ್ರಯೋದಶೋಽಧ್ಯಾಯಃ

॥ ಸೂತ ಉವಾಚ ॥

ತತೋ ಭೇರ್ಯಾದಿಘೋಷೇಣ ಯಜಮಾನಉದಙ್ಮುಖಃ ।
ಕನಕತೋಯೇನ ಗಂಧೇನ ಮುದ್ಗಲಾಗ್ರೇಣ ಲೇಪಯೇತ್ ॥ ೧ ॥

ಐಶಾನ್ಯಾಂ ಮಧ್ಯಭಾಗೇ ವಾ ಯಜೇದ್ವಾ ಸುಸಮಾಹಿತಃ ।
ವರ್ತುಲಂ ಕಾರಯೇದ್ಯಸ್ಮಾನ್ಮನ ಇಚ್ಛತಿ ಸಂಜಪನ್ ॥ ೨ ॥

ಋಷಿಃ ಕಂಠೋಽಥ ಗಾಯತ್ರೀ ಛಂದ ಇತ್ಯಭಿಧೀಯತೇ ।
ದೇವತಾ ಪೃಥಿವೀ ಚೈವ ಸ್ತುತೌ ಚ ವಿನಿಯೋಜಯೇತ್ ॥ ೩ ॥

---

## ಹದಿಮೂರನೆಯ ಅಧ್ಯಾಯ

೧. ಸೂತರು ಹೇಳುತ್ತಾರೆ—ಕಾಲೋಚಿತವಾಗಿ ಮಂಗಳವಾದ್ಯಗಳ ಧ್ವನಿಯಾಗುತ್ತಿರುವಾಗ ಯಜಮಾನನು ಉತ್ತರಾಭಿಮುಖವಾಗಿ ಕುಳಿತು ಸುವರ್ಣೋದಕವನ್ನೂ, ಗಂಧವನ್ನೂ ಮುದ್ಗಲದ ತುದಿಯಿಂದ ಸ್ಥಲಕ್ಕೆ ಲೇಪಿಸಬೇಕು.

೨. ಈಶಾನ್ಯಭಾಗದಲ್ಲಿಯೋ ಅಥವಾ ಮಧ್ಯಭಾಗದಲ್ಲಿಯೋ ವರ್ತುಲಾಕೃತಿಯನ್ನು ಸಮಾಹಿತಮನಸ್ಕನಾಗಿ ರಚಿಸಿ 'ಮನಇಚ್ಛತಿ' ಎಂಬ ಮಂತ್ರವನ್ನು ಜಪಿಸುತ್ತಾ ಅದರಲ್ಲಿ ಪೂಜಿಸಬೇಕು.

೩. ಈ ಮಂತ್ರಕ್ಕೆ ಕಂಠನೆಂಬುವನು ಋಷಿ, ಗಾಯತ್ರೀ ಎಂಬುದು ಛಂದಸ್ಸು, ಪೃಥ್ವಿಯು ದೇವತೆ, ಭೂಸ್ತುತಿಮಾಡುವ ಸಂದರ್ಭದಲ್ಲಿ ಈ ಮಂತ್ರವನ್ನು ಉಪಯೋಗಿಸಬೇಕು.

**ವಿವರೇ ಪೂಜಯೇತ್ಕರ್ಮ ಬ್ರಹ್ಮಾಣಂ ಚ ಧರಾಧರಂ ।**
**ಪೃಥಿವೀಂ ಗಂಧಪುಷ್ಪಾದ್ಯೈರ್ನೈವೇದ್ಯೈರ್ವಿವಿಧೈರಪಿ ॥ ೪ ॥**

**ಅಗ್ರತೋಽಷ್ಟದಲಂ ಲೇಖ್ಯಂ ಸ್ಥಾಪಯೇತ್ಕಲಶಂ ತತಃ ।**
**ಮುಖೇ ವಿಧಾಯ ಕನಕಂ ರಾಜತೇನ ವಿನಿರ್ಮಿತಂ ॥ ೫ ॥**

**ಶುಕ್ತಿಶಂಖಸಮಂ ವಾಪಿ ವಿಶ್ವಾಮಿತ್ರಸಮುದ್ಭವಂ ।**
**ಪೂಜಯೇತ್ತೀರ್ಥತೋಯೇನ ಗಂಧಪುಷ್ಪಾಕ್ಷತಾದಿನಾ ॥ ೬ ॥**

**ವಿಷ್ಣುಕ್ರಾನ್ತಾವಚಾಕುಷ್ಠಚಂದನೇನ ವಿಲೋಡಿತಂ ।**
**ಕ್ಷೀರಂ ಚ ಮಾತುಲಿಂಗಂ ಚ ಸಾವಿತ್ರಂ ಚ ಸದೂರ್ವಯಾ ॥ ೭ ॥**

**ದಧ್ಯಕ್ಷತಂ ಮಧುಯುತಮೇವಮರ್ಘ್ಯಂ ಚ ಸಾಧಯೇತ್ ।**
**ಸಿತಚಂದನವಸ್ತ್ರಾದ್ಯೈಃ ಮಾಲ್ಯೈಶ್ಚ ವಿವಿಧೈರಪಿ ॥ ೮ ॥**

---

೪. ಆ ಪ್ರದೇಶದಲ್ಲಿ ಅವನು ಕರ್ಮಬ್ರಹ್ಮನನ್ನೂ, ಮೇರುವನ್ನೂ, ಪೃಥ್ವಿಯನ್ನೂ, ಗಂಧಪುಷ್ಪಾದಿಗಳ ಮತ್ತು ವಿವಿಧ ನೈವೇದ್ಯಗಳ ಸಮರ್ಪಣೆಯಿಂದ ಪೂಜಿಸಬೇಕು.

೫-೬. ತನ್ನ ಸಮ್ಮುಖದಲ್ಲಿ ಅಷ್ಟದಳ ಪದ್ಮವನ್ನು ಬರೆದು, ಅದರಮೇಲೆ ಕಲಶವನ್ನಿಡಬೇಕು. ಆ ಕಲಶವು ಮುತ್ತಿನಚಿಪ್ಪು ಶಂಖ ಇವುಗಳಿಗೆ ಸಮಾನವಾದ ಸ್ವಚ್ಛವಾದ ಬೆಳ್ಳಿಯಿಂದ ನಿರ್ಮಿತವಾದುದೋ ಅಥವಾ ವಿಶ್ವಾಮಿತ್ರನಿಂದ ಸೃಷ್ಟವಾದ ಲೋಹದಿಂದ ರಚನೆಯಾದುದೋ ಆಗಿರಬೇಕು. ಆ ಕಲಶದಲ್ಲಿ ಸುವರ್ಣವನ್ನು ಹಾಕಬೇಕು.

೭. ಅದರಲ್ಲಿ ತೀರ್ಥೋದಕವನ್ನೂ ಹಾಕಿ ಗಂಧ, ಪುಷ್ಪ, ಅಕ್ಷತೆ ಇವುಗಳನ್ನು ಸಮರ್ಪಿಸಿ ಪೂಜಿಸಬೇಕು. ಅಲ್ಲದೆ ವಿಷ್ಣುಕ್ರಾಂತ, ಬಜೆ, ಚಂಗಲಕೋಷ್ಠ ಇವನ್ನು ತೆಯ್ದು ಆ ಉದಕವಲ್ಲಿ ಕದಡಬೇಕು. ಕ್ಷಾರವೃಕ್ಷದ ಎಲೆ, ಮಾದಲದಎಲೆ,

೮. ಸಾವಿತ್ರ ಎಂದರೆ ಎಕ್ಕದೆಲೆ, ಗರಿಕೆ, ಮೊಸರು, ಅಕ್ಷತೆ, ಜೇನು ಇವನ್ನೆಲ್ಲಾ ಸೇರಿಸಿ ಅರ್ಘ್ಯೋದಕವನ್ನು ಸಿದ್ಧಮಾಡಬೇಕು. ಆ ಪ್ರಸನ್ನಾರ್ಘ್ಯಪಾತ್ರೆಯನ್ನು ಐದುಬಣ್ಣವುಳ್ಳದ್ದಾಗುವಂತೆ ಶೃಂಗರಿಸಿ ವಸ್ತ್ರಾದಿಗಳು, ಗಂಧ, ಬಗೆಬಗೆಯ ಪುಷ್ಪಗಳು ಇವುಗಳಿಂದ ಪೂಜಿಸತೊಡಗಬೇಕು.

**ಅವ್ರಣಂ ಕಲಶಂ ಕೃತ್ವಾ ಪಂಚವರ್ಣಸಮನ್ವಿತಂ ।**
**ಆವಾಹಯೇತ್ತೋಯನಿಧಿಂ ಮಂತ್ರೇಣಾನೇನ ಭಕ್ತಿತಃ ॥ ೯ ॥**

**ಆಯಾಹಿ ಭಗವನ್ದೇವ ತೋಯಮೂರ್ತೇ ಜಲೇಶ್ವರ ।**
**ಗೃಹಾಣಾರ್ಘ್ಯಂ ಮಯಾ ದತ್ತಂ ಪರಿತೋಷಾಯ ತೇ ನಮಃ ॥ ೧೦ ॥**

**ಗೃಹೇಭ್ಯಶ್ಚೈವ ಸೋಮಾಯ ತ್ವಷ್ಟ್ರೇಚೈವ ಚ ಶೂಲಿನೇ ।**
**ಇಮಂಮೇವರುಣೇತ್ಯಾದಿ ಪ್ರತ್ಯೇಕಂ ಸ್ಯಾದ್ಗತಿತ್ರಯಂ ॥ ೧೧ ॥**

**ತತೋऽರ್ಘ್ಯದಾನಂ ವಿಧಿವತ್ಕ್ಷೀರೇಣ ಹವಿಷಾ ಮಧು ।**
**ಯಜಮಾನಃ ಸಪತ್ನೀಕಃ ಕುಂಭಂ ಕುಕ್ಷೌ ನಿಧಾಯ ಚ ॥ ೧೨ ॥**

**ಹಿರಣ್ಯಗರ್ಭೇತಿಮಂತ್ರಸ್ಯ ಭರದ್ವಾಜಋಷಿಃ ಸ್ಮೃತಃ ।**
**ಛನ್ದಶ್ಚ ಜಗತೀ ಖ್ಯಾತಂ ದೇವತಾ ಚ ಜಲಾಧಿಪಃ ॥ ೧೩ ॥**

---

೯. ಈ ಪ್ರಕಾರ ಸಿದ್ಧಪಡಿಸಿದ ಪೂರ್ಣಕಲಶವನ್ನು, ಸ್ಥಾಪಿಸಿ ಅದರಲ್ಲಿ ಭಕ್ತಿಪೂರ್ವಕವಾಗಿ ಈ ಮಂತ್ರದಿಂದ ಜಲಾಧಿಪತಿಯಾದ ವರುಣನನ್ನು ಆವಾಹನೆಮಾಡಬೇಕು.

೧೦. " ಜಲಾಧಿಪನೂ, ಜಲಸ್ವರೂಪನೂ, ಪೂಜ್ಯನೂ ಆದ ಎಲೈ ವರುಣದೇವನೇ ! ಇಲ್ಲಿಗೆ ಬಿಜಮಾಡು. ನಿನ್ನ ಸಂತೋಷಾರ್ಥವಾಗಿ ನಾನು ಕೊಡುತ್ತಿರುವ ಅರ್ಘ್ಯವನ್ನು ಸ್ವೀಕರಿಸು. ನಿನಗೆ ನಮಸ್ಕಾರ" ಎಂದು ಹೇಳಬೇಕು.

೧೧. ಇದೇರೀತಿ 'ಇಮಂಮೇ ವರುಣ' ಮೊದಲಾದ ಮಂತ್ರದಿಂದ ಚಂದ್ರ ಬ್ರಹ್ಮ, ರುದ್ರ ಎಂಬ ಮೂರುದೇವತೆಗಳೂ ಕಲಶೋದಕದಲ್ಲಿ ಪ್ರತ್ಯೇಕವಾಗಿ ಆಗಮಿಸುವಂತೆ ಮಾಡಬೇಕು.

೧೨. ಅನಂತರ ಯಜಮಾನನು ಸಪತ್ನೀಕನಾಗಿ ಕುಂಭವನ್ನು ತನ್ನ ಕುಕ್ಷಿಪ್ರದೇಶದಲ್ಲಿ ಇಟ್ಟುಕೊಂಡು ಹಾಲು, ತುಪ್ಪ, ಜೇನು ಇವುಗಳ ಮಿಶ್ರಣದಿಂದ ವಿಧಿವತ್ತಾಗಿ ಅರ್ಘ್ಯಪ್ರದಾನಮಾಡಬೇಕು.

೧೩. 'ಹಿರಣ್ಯಗರ್ಭಸ್ಸಮವರ್ತತ' ಎಂಬ ಮಂತ್ರಕ್ಕೆ ಭರದ್ವಾಜನು ಋಷಿ, ಜಗತಿ ಎಂಬುದು ಛಂದಸ್ಸು, ವರುಣನು ದೇವತೆ.

**ವರುಣಸ್ಯೋತ್ತಂಭನೇತಿಮಂತ್ರಸ್ಯ ಜಲಕುಂಭಂ ನಿವೇದಯೇತ್ ।**
**ಅಸ್ಯ ಮಂತ್ರಸ್ಯ ಚ ಋಷಿರ್ನಾರದಃ ಪರಿಕೀರ್ತಿತಃ ॥**
**ವಿರಾಟ್‌ಛನ್ದಶ್ಚ ಈಶಾನೋ ದೇವತಾ ಸಮುದಾಹೃತಾ ॥ ೧೪ ॥**

**ಮೋಚಯೇನ್ಮೀನಯುಗ್ಮಂ ಚ ಮೇಷಯುಗ್ಮಂ ತಥೈವ ಚ ।**
**ಸಂಭವೇ ಪಕ್ಷಿಯುಗ್ಮಂ ಚ ಆಡೀಂ ವಾ ಚಕ್ರವಾಕಕಂ ॥ ೧೫ ॥**

**ಮೋಚಯೇನ್ನಾಗಯುಗ್ಮಂ ಚ ಆಯುರ್ವೃದ್ಧೇಶ್ಚ ಹೇತವೇ ।**
**ದಿಕ್ಷು ಜೀವನ್ತಿಕಾಂ ದನ್ಯಾದ್ರಾಕ್ಷಸೇಭ್ಯೋ ಬಲಿಂ ಹರೇತ್ ॥ ೧೬ ॥**

**ನಿರ್ಮಿತಂ ಮಾಷಭಕ್ತೇನ ರಕ್ತಪುಷ್ಪೈರಲಂಕೃತಂ ।**
**ಕ್ಷಾತ್ರಕೋ ಲಕ್ಷ್ಮಣಶ್ಚೈವ ಮಣಿಭದ್ರೋ ಗಣೇಶ್ವರಃ ॥**
**ಸಬಿಂದುಕೇನ ಹಸ್ತೇನ ದಿಕ್ಷು ಮಧ್ಯೇ ಯಥಾಕ್ರಮಾತ್ ॥ ೧೭ ॥**

---

೧೪. 'ಉತ್ತಂಭನ' ಮಂತ್ರದಿಂದ ಜಲಪೂರ್ಣವಾದ ಆ ಕುಂಭದಿಂದ ವರುಣನಿಗೆ ಅರ್ಘ್ಯವನ್ನು ನಿವೇದಿಸಬೇಕು. ಈ ಮಂತ್ರಕ್ಕೆ ನಾರದನು ಋಷಿ, ವಿರಾಟ್ ಎಂಬುದು ಛಂದಸ್ಸು, ಈಶಾನನು ದೇವತೆ ಎಂದು ಪ್ರಸಿದ್ಧವಾಗಿದೆ.

೧೫. ತನ್ನ ಆಯುಸ್ಸು ವೃದ್ಧಿಯಾಗಲಿ ಎಂಬ ಉದ್ದೇಶವುಳ್ಳವನು ದಂಪತಿಗಳೆನಿಸಿ ಬಂಧಿತವಾದ ಎರಡು ಮೀನುಗಳನ್ನೋ, ಎರಡು ಕುರಿಗಳನ್ನೋ, ಸಾಧ್ಯವಾದರೆ ಎರಡು ಪಕ್ಷಿಗಳನ್ನೋ, ಎರಡು ನಳ್ಳಿಗಳನ್ನೋ, ಎರಡು ಚಕ್ರವಾಕಗಳನ್ನೋ, ಇಲ್ಲವೇ ಎರಡು ಸರ್ಪಗಳನ್ನೋ ಬಂಧನದಿಂದ ಬಿಡಿಸಬೇಕು.

೧೬. ಎಲ್ಲ ದಿಕ್ಕುಗಳಲ್ಲಿಯೂ ಜೀವಂತಿ (ಅಮೃತವಳ್ಳಿ) ಎಂಬ ಗಿಡದ ಎಲೆಯನ್ನು ಹಾಕಿ ರಾಕ್ಷಸರ ಪ್ರೀತ್ಯರ್ಥವಾಗಿ ಬಲಿಪ್ರದಾನ ಮಾಡುವವನಾಗಿ ಉದ್ದಿನ ಹುಡಿಯ ಅನ್ನವನ್ನು ಸಿದ್ಧಪಡಿಸಬೇಕು.

೧೭. ಅದನ್ನು ಕೆಂಪುಹೂಗಳಿಂದ ಶೃಂಗರಿಸಿ, ಕ್ಷಾತ್ರಕ, ಲಕ್ಷ್ಮಣ, ಮಣಿಭದ್ರ, ಗಣೇಶ್ವರ ಎಂಬುವರಿಗೆ ಜಲಬಿಂದುಸಹಿತವಾದ ಹಸ್ತದಿಂದ ಎಲ್ಲ ದಿಕ್ಕುಗಳಲ್ಲಿಯೂ, ಮಧ್ಯಪ್ರದೇಶದಲ್ಲಿಯೂ ಕ್ರಮವಾಗಿ ಬಲಿಯನ್ನು ಸಮರ್ಪಿಸಿ ಹೀಗೆ ಹೇಳಬೇಕು.

ಯೇ ಭವಾ ಭಾವಿನೋ ಭೂತಾ ಯೇ ಚ ತೇಷು ಮಯಾಸಿನಃ ।
ಆಹರಂತು ಬಲಿಂ ತುಷ್ಟ್ಯಾ ಪ್ರಯಚ್ಛಂತ್ತು ಶುಭಂ ಮಮ ॥ ೧೮ ॥

ಇತ್ಯುಕ್ತ್ವಾ ಚ ಬಲಿಂ ದದ್ಯಾನ್ನಮಸ್ಕುರ್ಯಾದನಂತರಂ ।
ದದ್ಯಾತ್ಪಯಸ್ವಿನೀಂ ಗಾಂ ಚ ಆಚಾರ್ಯಾಯ ವಿಶೇಷತಃ ॥ ೧೯ ॥

ಅನ್ಯೇಷಾಂ ಹಿ ಹಿರಣ್ಯಂ ಚ ಗಾಂ ಚ ದದ್ಯಾದ್ದ್ವಿಜನ್ಮನೇ ।
ವ್ಯಾಹೃತಿದ್ವಿತಯಂ ಚೈವ ತತೋ ವಾರುಣಪಂಚಕಂ ॥ ೨೦ ॥

ಪ್ರಾಜಾಪತ್ಯಂ ಸ್ವಿಷ್ಟಕೃಚ್ಚ ಜುಹುಯಾತ್ತದನಂತರಂ ।
ಘೃತೈಃ ಸ್ವಿಷ್ಟಕೃತಂ ನಾಸ್ತಿ ತಥಾ ರಸವಿಸಾರಕೈಃ ॥ ೨೧ ॥

ಪದ್ಮೋತ್ಪಲೈರ್ಮಾತುಲಿಂಗೈಃ ಪನಸೈರ್ಮಾತುಲುಂಗಕೈಃ ।
ಮಧೂಕೈರ್ವಿಶ್ವಪುಷ್ಪೈಶ್ಚ ತಥಾಮ್ರಾತಕಕಾಶಕೈಃ ॥ ೨೨ ॥

---

೧೮. ಈ ದಿಕ್ಕಿನಲ್ಲಿ ವಾಸಿಸುತ್ತಿರುವವರು ಮತ್ತು ಇನ್ನು ಮುಂದೆ ಬಂದೊದಗುವವರು, ಹಿಂದೆ ಇದ್ದವರು, ಅವರಲ್ಲಿ ಈಗ ನನ್ನ ಸಂಗಡ ಕುಳಿತಿರುವವರು, ಎಲ್ಲರೂ ಸಂತೋಷದಿಂದ ಈ ಬಲಿಯನ್ನು ಸ್ವೀಕರಿಸಿರಿ. ನನಗೆ ಶುಭವನ್ನು ಕೊಡಿ. ಎಂದು ಹೇಳಿ ಬಲಿಪ್ರದಾನಮಾಡಿ ಅನಂತರ ನಮಸ್ಕಾರಮಾಡಬೇಕು.

೧೯. ಹೀಗೆ ಬಲಿಸಮರ್ಪಣೋತ್ಸವದಲ್ಲಿ ಆಚಾರ್ಯನಿಗೆ ಕರೆಯುವ ಹಸುವನ್ನು ದಾನಮಾಡಬೇಕು. ಇತರ ಬ್ರಾಹ್ಮಣರಿಗೂ ಸುವರ್ಣನಾಣ್ಯದ ದಕ್ಷಿಣೆಗಳನ್ನೂ ಯಥಾಶಕ್ತಿ ಗೋವುಗಳನ್ನೂ ಕೊಡಬೇಕು.

೨೦. ಈ ಕರ್ಮಾಂಗವಾಗಿ ಎರಡು ವ್ಯಾಹೃತಿತ್ರಯ ಹೋಮಗಳು, ಮತ್ತು ವರುಣದೇವತಾಕವಾದ ಮಂತ್ರದಿಂದ ಐದುಹೋಮಗಳು, ಪ್ರಾಜಾಪತ್ಯಹೋಮ, ಆಮೇಲೆ ಸ್ವಿಷ್ಟಕೃತ್ ಹೋಮ ಇವನ್ನು ಆಜ್ಯಾಹುತಿಯಿಂದ ನೆರವೇರಿಸಬೇಕು.

೨೧–೨೨. ಈ ಸ್ವಿಷ್ಟಕೃತ್ ಹೋಮವನ್ನು ರಸಸ್ರವಿಸುವಂತೆ ಮಾಡಕೂಡದು ಬಳಿಕ ಕಮಲ, ನೈದಿಲೆ, ಹಿಪ್ಪೇಹೂ, ವಿಶ್ವಪುಷ್ಪ (ಶುಂಠಿ), ಅಮಟೆಯಹೂ, ಕಾಶಪುಷ್ಪ ಇವುಗಳನ್ನೂ; ಮಾದಲ, ಹಲಸು, ಮುಂತಾದ ಫಲಗಳನ್ನೂ ಅರ್ಪಿಸಿ 'ಸುಮಾಸ್ತು' ಎಂಬ ಮಂತ್ರವನ್ನು ಜಪಿಸುತ್ತಾ ಜಲವನ್ನು ಅಭಿಷೇಕಮಾಡಬೇಕು.

**ಅಭಿಷೇಕಂ ತತಃ ಕುರ್ಯಾತ್ಸ್ವಸ್ತಿ ವಾಸ್ತ್ವಿತಿ ಚ ವೈ ಜಪನ್ ।**
**ದದ್ಯಾತ್ಪೂರ್ಣಾಂ ಚ ವಿಧಿವತ್ಸೂರ್ಯಾಯಾರ್ಘ್ಯಂ ನಿವೇದಯೇತ್ ॥ ೨೩ ॥**

**ಪಂಚದೋಷಂ ಬಹಿಷ್ಕೃತ್ಯ ಬ್ರಾಹ್ಮಣಾನುಮತೇನ ಚ ॥**
**ಗೃಹಂ ಪ್ರವಿಶ್ಯ ಚ ತತೋ ಬ್ರಾಹ್ಮಣಾನಥ ಭೋಜಯೇತ್ ॥ ೨೪ ॥**

**ದೀನಾಂಧಕೃಪಣೇ ಚೈವ ದದ್ಯಾದ್ವಿತ್ತಾನುಸಾರತಃ ।**
**ಜ್ಞಾತಿಭಿಃ ಸಹ ಭುಂಜೀತ ದಧಿಕ್ಷೀರಾಮಿಷಂ ವಿನಾ ॥ ೨೫ ॥**

**ನ ಕ್ಷೀರಂ ನ ಚ ಕಾಷಾಯಂ ಭರ್ಜಿತಂ ಶಾಕಮೇವ ಚ ।**
**ನ ಕಾಂಡಂ ಚ ನ ಪುಷ್ಪಂ ಚ ಕರೀರಂ ಚ ಕದಾಚನ ॥ ೨೬ ॥**

**ಶಾಲ್ಯನ್ನಂ ಮೂಲಕಂ ಚೈವ ಪನಸಾಮ್ರಫಲಾನಿ ಚ ।**
**ಮುಸ್ತಂ ಮಧುಘೃತಗುಡಂ ಮಾತುಲಿಂಗಂ ಸಸೈಂಧವಂ ॥ ೨೭ ॥**

---

೨೩. ಅನಂತರ ವಿಧಿವತ್ತಾಗಿ ಪೂರ್ಣಾಹುತಿಯನ್ನು ಸಮರ್ಪಿಸಿ, ಸೂರ್ಯನಿಗೆ ಅರ್ಘ್ಯಪ್ರದಾನಮಾಡಬೇಕು.

೨೪. ವೈಶ್ವದೇವಕರ್ಮ ಮಾಡುವಮೂಲಕ ಪಂಚಸೂನಾದೋಷಗಳನ್ನು ಪರಿಹರಿಸಿ, ಅನಂತರ ಬ್ರಾಹ್ಮಣರ ಅನುಜ್ಞಾ ಪೂರ್ವಕವಾಗಿ ಸ್ವಗೃಹವನ್ನು ಪ್ರವೇಶಿಸಿ, ಬ್ರಾಹ್ಮಣಸಂತರ್ಪಣೆಯನ್ನು ಮಾಡಬೇಕು.

೨೫. ದರಿದ್ರರು, ಕುರುಡರು, ಕಾರ್ಪಣ್ಯಪಡುವವರು ಇವರುಗಳಿಗೆ ತನ್ನ ಶಕ್ತಿಯಿದ್ದಷ್ಟುಮಟ್ಟಿಗೆ ದಾನಮಾಡಿ ಜ್ಞಾತಿಗಳೊಡನೆ ಭೋಜನಮಾಡಬೇಕು. ಆ ದಿವಸ ಮೊಸರು, ಹಾಲು, ಮಾಂಸ ಇವುಗಳನ್ನು ಭುಂಜಿಸಬಾರದು.

೨೬. ಈ ಕಾರ್ಯ ಮಾಡುವಾಗ ಹಾಲು, ಕಹಿವಸ್ತುಗಳು, ಹುರಿದ ಅರಳು, ಪುರಿ ಮುಂತಾದ ವಸ್ತುಗಳು, ತರಕಾರಿ, ಕಾಂಡ (ದಂಟು) ಅಗಸೆಯ ಹೂ, ಬಿದಿರ ಮೊಳಕೆ, (ಕಳಲೆ) ಇವುಗಳನ್ನು ಯಾವಾಗಲೂ ಸೇವಿಸಬಾರದು.

೨೭. ಶಾಲ್ಯನ್ನ, ಮೂಲಂಗಿ ಇವುಗಳನ್ನೂ, ಹಲಸು, ಮಾವು, ಮಾದಲ ಮುಂತಾದ ಹಣ್ಣುಗಳನ್ನೂ, ಹಾಲಿನಕೆನೆ, ಜೇನು, ತುಪ್ಪ, ಬೆಲ್ಲ, ಉಪ್ಪುಸಹಿತವಾದ ಮಾದಲ ಇವುಗಳನ್ನೂ ಸೇವಿಸಬಹುದು.

**ಬದರಂ ಧಾತಕಿಫಲಂ ಕುಂದಪುಷ್ಪಂ ತಥಾ ತಿಲಂ ।**
**ಏತತ್ಪ್ರಶಸ್ತಂ ಚಾನಿಯಾನ್ಮರಿಚಾನಿ ವಿಶೇಷತಃ ॥ ೨೮ ॥**

**ತ್ರಿರಾತ್ರಮಥ ಸಪ್ತಾಹಂ ಪರಿತ್ಯಜ್ಯ ಖಲೇ ತತಃ ।**
**ಪಂಚಾಂಗಕಂ ತತಃ ಕುರ್ಯಾತ್ ಸ್ಥಾಪಯೇನ್ನೇತಿಯುಗ್ಮಕಂ ॥ ೨೯ ॥**

**ಪ್ರಥಮಾಚಾರ್ಕಹಸ್ತೇನ ದ್ವಿತೀಯಾಂ ದಶಹಸ್ತಿಕಾ ।**
**ವಿತಸ್ತೇ ತು ಭವೇಚ್ಛತಂ ದ್ವಿಗುಣಂ ತದನಂತರಂ ॥ ೩೦ ॥**

**ಶತಾರ್ಧಂ ತು ತತಃ ಪಶ್ಚಾತ್ ಷಷ್ಟಿಹಸ್ತಮನಂತರಂ ॥ ೩೧ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ ದ್ವಿತೀಯಭಾಗೇ ತ್ರಯೋದಶೋಽಧ್ಯಾಯಃ**



---

೨೮. ಮತ್ತು ಎಗಚೀಹಣ್ಣು, ಧಾತಕೀಹಣ್ಣು, ಎಳ್ಳು, ಮೆಣಸು, ಇವುಗಳು ಸೇವಿಸಲು ಪ್ರಶಸ್ತವಾದುವು. ಮತ್ತು ಆಗ ಮಲ್ಲಿಯಹೂವು ಧರಿಸಲು ಪ್ರಶಸ್ತವಾದುದು.

೨೯. ಮೂರುದಿನ ಅಥವಾ ಏಳುದಿನ ಬಿಟ್ಟು ಆ ಸ್ಥಳಗದಲ್ಲಿ ಪಂಚಅಂಗಗಳನ್ನೇ ಸ್ಥಾಪನೆಮಾಡಬೇಕು. ಯುಗ್ಮಗಳನ್ನು ಸ್ಥಾಪಿಸಬಾರದು.

೩೦-೩೧. ಒಂದನೆಯದು ಹನ್ನೆರಡುಮೊಳ, ಎರಡನೆಯದು ಹತ್ತುಮೊಳ, ಉಳ್ಳದ್ದಾಗಿರಬೇಕು. ಒಂದುನೂರು ವಿತಸ್ತಿಯೋ (ಗುದ್ದುಮೊಳವೋ) ಅದರ ಎರಡರಷ್ಟೋ ಇರಬಹುದು. ಅಥವಾ ಐವತ್ತುಹಸ್ತವಾಗಲಿ, ಅರವತ್ತುಹಸ್ತ ಆಳತೆಯಾಗಲಿ ಇರಬಹುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ದ್ವಿತೀಯಭಾಗದಲ್ಲಿ ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ದ್ವಿತೀಯಭಾಗೇ

## ಚತುರ್ದಶೋಽಧ್ಯಾಯಃ

ಸೂತ ಉವಾಚ

ಸ್ವಗೃಹ್ಯಾಗ್ನಿವಿಧಿಂ ವಕ್ಷ್ಯೇ ಯೋಗಭೇದೇಷು ಸತ್ತಮಾಃ ।
ನ ಪರೋಕ್ತಂವಿಧಾನೇನ ಭಯದಂ ಕೀರ್ತಿಧ್ವಂಸನಂ ॥ ೧ ॥

ಪುತ್ರಾ ಏವ ಚ ಕನ್ಯಾಶ್ಚ ಜನಿಷ್ಯಾಶ್ಚಾಪರೇ ಸುತಾಃ ।
ಗೃಹ್ಯಾ ಇತಿ ಸಮಾಖ್ಯಾತಾ ಯಜಮಾನಸ್ಯ ದಾಯದಾಃ ॥ ೨ ॥

---

## ಹದಿನಾಲ್ಕನೆಯ ಅಧ್ಯಾಯ

೧. ಸೂತರು ಶೌನಕಾದಿಮುನಿಗಳಿಗೆ ಹೇಳುತ್ತಾರೆ—ಎಲೈ ಸಜ್ಜನಶ್ರೇಷ್ಠರೇ ಕೇಳಿ; ಬೇರೆಬೇರೆ ಯಾಗ ಮಾಡುವ ಆಶ್ವಲಾಯನ ಆಪಸ್ತಂಭಾದಿ ವಿವಿಧಶಾಖೆಗಳವರು ಸ್ವಶಾಖೆಯಲ್ಲಿಯೇ ಮಾಡಬೇಕಾದ ಹೋಮ, ಮೊದಲಾದ ವಿಧಿಗಳನ್ನು ಹೇಳುತ್ತೇನೆ. ಸ್ವಶಾಖೋಕ್ತವಿಧಾನದಲ್ಲಿ ನಡೆಸದೆ ಪರಶಾಖೋಕ್ತಪ್ರಕಾರ ಮಾಡುವುದು ಭಯಂಕರವೂ ಕೀರ್ತಿನಾಶನವೂ ಆಗಿದೆ.

೨. ಯಜಮಾನನಿಗೆ ಇರುವ ಗಂಡುಮಕ್ಕಳೂ, ಹೆಣ್ಣುಮಕ್ಕಳೂ, ಮತ್ತು ಮುಂದೆ ಹುಟ್ಟುವ ಮಕ್ಕಳೂ ಇವರುಗಳೆಲ್ಲ ಯಜಮಾನನು ಗಳಿಸಿದ ದಾಯಭಾಗವನ್ನು ಅನುಭವಿಸತಕ್ಕ ಗೃಹ್ಯರೆನಿಸಿಕೊಳ್ಳುತ್ತಾರೆ.

ತೇಷಾಂ ಸಂಸ್ಕಾರಯಾಗೇಷು ಶಾನ್ತಿಕರ್ಮಕ್ರಿಯಾಸು ಚ ।
ಆಚಾರ್ಯವಿಹಿತಃ ಕಲ್ಪಸ್ತಸ್ಮಾಚ್ಚಕ್ಷ ಇತಿ ಸ್ಮೃತಃ ॥ ೩ ॥

ತ್ರಿಕುಶಂ ಪರಿಗೃಹ್ಣಾತಿ ತತಶ್ಚ ಕುರುತೇ ದೃಢಂ ।
ಋಷಿರ್ದಕ್ಷಶ್ಚ ಜಗತೀ ಛಂದೋ ವಿಷ್ಣುಶ್ಚ ದೇವತಾ ॥ ೪ ॥

ಕಶ್ಯಪಸ್ತೃಪ್ತತಾಮಿತಿ ಭೂರಸೀತಿ ಚ ಶೋಧನಂ ।
ಋಷಿಃ ಸುಪರ್ಣೋ ಗಾಯತ್ರೀ ಜಗತೀ ಛನ್ದ ಇಷ್ಯತೇ ॥
ದೇವತಾ ಚ ಭವೇತ್ಸೂರ್ಯಃ ಪೃಥಿವೀಶೋಧನೇ ನ್ಯಸೇತ್ ॥ ೫ ॥

ಐಶಾನ್ಯಾದಿ ಕ್ರಮೇಣೈವ ಪ್ರಾದಕ್ಷಿಣ್ಯೇನ ಯತ್ನತಃ ।
ಯತ್ಪವಿತ್ರೇತಿಮಂತ್ರೇಣ ತರ್ಜನ್ಯಂಗುಷ್ಠಯೋರಪಿ ॥ ೬ ॥

ಕುಶಗರ್ಭತ್ರಯೇಣಾಪಿ ಭ್ರಾಮಯೇದ್ವಲಯಾಕೃತಿ ।
ಪರಿಸಮೂಹನಮಿತ್ಯುಕ್ತಂ ಸ್ನಪನಂ ಶೃಣು ಸತ್ತಮಾಃ ॥ ೭ ॥

---

೩. ಅವರಿಗೆ ಉಪನಯನ ವಿವಾಹಾದಿ ಸಂಸ್ಕಾರಾರ್ಥವಾಗಿ ಮಾಡುವ ಯಾಗ (ಹೋಮ)ಗಳಲ್ಲಿಯೂ, ಇತರ ಶಾನ್ತಿಕರ್ಮಾರ್ಥವಾಗಿ ಮಾಡುವ ಹೋಮದಲ್ಲಿಯೂ, ಆಚಾರ್ಯನು ಯಾವ ಕಲ್ಪವನ್ನು ವಿಧಾನಮಾಡುವನೋ ಆ ಕಲ್ಪಕ್ಕೆ ಚಕ್ಷವೆಂದು ಹೆಸರು.

೪. ಮೂರುದರ್ಭೆಗಳನ್ನು ತೆಗೆದುಕೊಂಡು ಹೊಸೆದು ದೃಢವಾದ ಹುರಿ ಮಾಡಬೇಕು. 'ಕಶ್ಯಪಸ್ತೃಪ್ತತಾಂ' ಎಂಬ ಮಂತ್ರದಿಂದಲೂ,

೫. 'ಭೂರಸಿ' ಎಂಬ ಮಂತ್ರದಿಂದಲೂ ಶೋಧನೆಮಾಡಬೇಕು. ಮೊದಲನೆಯ ಮಂತ್ರಕ್ಕೆ ದಕ್ಷನು ಋಷಿ, ಜಗತೀ ಎಂಬುದು ಛಂದಸ್ಸು, ವಿಷ್ಣುವು ದೇವತೆ, 'ಭೂರಸಿ' ಎಂಬ ಮಂತ್ರಕ್ಕೆ ಸುಪರ್ಣನು ಋಷಿ, ಗಾಯತ್ರೀ ಎಂಬುದೂ ಜಗತೀ ಎಂಬುದೂ ಛಂದಸ್ಸು, ಸೂರ್ಯನೇ ದೇವತೆ; ಪೃಥ್ವೀಶೋಧನೆಯಲ್ಲಿ ಈ ಮಂತ್ರವನ್ನು ವಿನಿಯೋಗಿಸಬೇಕು.

೬-೭. ಈಶಾನ್ಯಮೂಲೆ ಮೊದಲುಗೊಂಡು ಪ್ರದಕ್ಷಿಣವಾಗಿ 'ಯತ್ಪವಿತ್ರ' ಎಂಬ ಮಂತ್ರಪೂರ್ವಕವಾಗಿ ಅಂಗುಷ್ಟ ತರ್ಜನಿ ಈ ಎರಡು ಬೆರಳುಗಳಿಂದ ಆ ಮೂರು ದರ್ಭೆಯಿಂದ ಮಾಡಿದ ರಜ್ಜುವನ್ನು ಹಿಡಿದು ಗುಂಡಾಗಿ ತಿರುಗಿಸಬೇಕು. ಈಗ ಪರಿಸಮೂಹನವೆಂದು ಹೇಳಲ್ಪಟ್ಟ ಸ್ನಪನಕ್ರಮವನ್ನು ಹೇಳುತ್ತೇನೆ ಕೇಳಿ. ಬ್ರಾಹ್ಮಣ ಶ್ರೇಷ್ಠರೇ!

**ಈಶಾನಾದೇಶ್ಚ ಸಂಸ್ಕಾರಂ ಕುರ್ಯಾತ್ಪರಿಸಮೂಹನಂ ।**
**ಪ್ರತಿಷ್ಠಾಯಾಂ ಚರೇತ್ಕಾದಿರ್ನೈಋತ್ಯಾದಿಗ್ರಹಂ ಮಖೇ ॥ ೮ ॥**

**ಪರಿಸಮೂಹನಮ್ಯೆಂದ್ರಸ್ಯ ಪರ್ವತೋಽಸ್ಯ ಋಷಿಃ ಸ್ಮೃತಃ ।**
**ಪಂಕ್ತಿಶ್ಛಂದಃ ಸಮುದ್ದಿಷ್ಟಮಿಂದ್ರಾಣೀಚಾಸ್ಯ ದೇವತಾ ॥ ೯ ॥**

**ಗೋಮಯಂ ಚ ತ್ರಿಗಂಧಂ ಚ ಪಂಚಮೃತ್ತಿಕಯಾಪಿ ಚ ।**
**ಕನಿಷ್ಠಂ ಗುಹ್ಯಕಂ ತ್ಯಕ್ತ್ವಾ ದೇವತಾರ್ಥೇ ನು ಲೇಪಯೇತ್ ॥ ೧೦ ॥**

**ಮಾನಸ್ತೋಕೇನೇತಿ ಋಚಾ ವಿಶ್ವೇದೇವಶ್ಚ ಪೂಜ್ಯತಾಂ ।**
**ಋಷಿಃ ಸ್ವಾತ್ಕಾಶ್ಯಪಶ್ಛಂದೋ ವಿರಾಡೇವ ಪ್ರಕೀರ್ತಿತಃ ॥ ೧೧ ॥**

**ಯೋಜಯೇಲ್ಲೇಪಯೇದ್ವಿದ್ವಾನ್ ಘಟಮಾಬಧ್ಯ ಸತ್ತಮಾಃ ।**
**ಮಧ್ಯಮಾತರ್ಜನೀಭ್ಯಾಂ ಚ ಕುಶಮಾಲಭ್ಯ ದಕ್ಷಿಣಂ ॥ ೧೨ ॥**

---

೮. ಈಶಾನ್ಯಮೂಲೆಯಿಂದ ಮೊದಲು ಮಾಡಿಕೊಂಡು ಪ್ರದಕ್ಷಿಣವಾಗಿ ಹೋಮದ ಜಗುಲಿಯನ್ನು ಬೆರಳಿನಿಂದ ಸವರುವುದೇ ಪರಿಸಮೂಹವೆನಿಸುವುದು. ಗೃಹಪ್ರತಿಷ್ಠಾಂಗವಾದ ಹೋಮಮಾಡುವಾಗ ಪರಿಸಮೂಹನಕರ್ಮವನ್ನು ನೈಋತ್ಯದಿಂದ ಆರಂಭಿಸಬೇಕು.

೯. 'ಐಂದ್ರಸ್ಯಪರಿಸಮೂಹನ' ವೆಂಬ ಮಂತ್ರಕ್ಕೆ ಪರ್ವತನೆಂಬುವನು ಋಷಿ, ಪಂಕ್ತಿ ಎಂಬುದು ಛಂದಸ್ಸು, ಇಂದ್ರಾಣಿಯು ದೇವತೆ ಎಂದು ಉದ್ದಿಷ್ಟವಾಗಿದೆ.

೧೦. ಗೋಮಯ, ತ್ರಿಗಂಧಗಳು ಐದುಸ್ಥಳದ ಮೃತ್ತಿಕೆಗಳು ಇವುಗಳನ್ನು ನಿಕೃಷ್ಟವಾದ ಗುಹ್ಯಸ್ಥಾನ ವಿನಾ, ಮಿಕ್ಕ ದೇಹಭಾಗಗಳಲ್ಲಿ ದೇವತಾಪೂಜಾರ್ಥವಾಗಿ ಲೇಪನಮಾಡಿಕೊಳ್ಳಬೇಕು.

೧೧. 'ಮಾನಸ್ತೋಕೇನ' ಎಂಬ ಮಂತ್ರದಿಂದ ವಿಶ್ವೇದೇವ ಪೂಜೆಯನ್ನು ಮಾಡಬೇಕು. ಈ ಮಂತ್ರಕ್ಕೆ ಕಶ್ಯಪನೇ ಋಷಿ, ವಿರಾಟ್ ಎಂಬುದೇ ಛಂದಸ್ಸು.

೧೨. ಎಲೈ ಸತ್ಪುರುಷಶ್ರೇಷ್ಠರೇ! ಕೇಳಿ; ತಿಳಿವಳಿಕೆಯುಳ್ಳವನು ಕಲಶವನ್ನು ಆ ದರ್ಭೆಯ ಹುರಿಯಿಂದ ಸುತ್ತಿ, ಮಧ್ಯಮ, ತರ್ಜನಿ ಈ ಎರಡು ಬೆರಳುಗಳಿಂದ ದರ್ಭೆಯನ್ನು ಸ್ಪರ್ಶಮಾಡಿಕೊಂಡು ಬಲಗಡೆಗೆ ಲೇಪನಮಾಡಬೇಕು.

**ಚತುರಸ್ರೀಕೃತಂ ಕ್ಷೇತ್ರಂ ಹಸ್ತಮಾನಂ ತಥಾನನಂ ।**
**ಯಜ್ವಭಿರಿತಿ ಮಂತ್ರೇಣ ಸೂರ್ಯಃ ಪ್ರೀಣಾತಿ ಸತ್ತಮಾಃ ॥ ೧೩ ॥**

**ದಕ್ಷೇ ಸಾರ್ಧಾಂಗುಲಂ ತ್ಯಕ್ತ್ವಾ ಪಶ್ಚಿಮೇನ ಪರಿತ್ಯಜೇತ್ ।**
**ಉತ್ತರಾಗ್ರಾಂ ಲಿಖೇದ್ರೇಖಾಮನ್ಯಥಾಽಮಂಗಲಂ ಭವೇತ್ ॥ ೧೪ ॥**

**ಆಪ್ಯಾಯಸ್ವೇತಿ ಮಂತ್ರಸ್ಯ ಧನ್ವಂತರಿಋಷಿಃ ಸ್ಮೃತಃ ।**
**ತ್ರಿಷ್ಟುಪ್ಛಂದಃ ಸಮಾಖ್ಯಾತಂ ಸವಿತಾ ಚಾತ್ರ ದೇವತಾ ॥ ೧೫ ॥**

**ತಲ್ಲಗ್ನಂ ದಕ್ಷಿಣೇ ಚೈಕಂ ಪೂರ್ವಾರ್ಧಂ ದ್ವಾದಶಾಂಗುಲಂ ।**
**ಅನ್ಯಾಂಗುಲಾಂತರಂ ಚೈಕಂ ತತಃ ಸಪ್ತಾಂಗುಲಂ ಭವೇತ್ ॥ ೧೬ ॥**

**ಕುಶಮೂಲೇನ ಸ್ವರ್ಣೇನ ಪ್ರತಿಷ್ಠಾಯಾಂ ಚ ರಾಜತೆ ।**
**ಅಂಗುಷ್ಠಾನಾಮಿಕಾಭ್ಯಾಂ ಚ ಸಂಜ್ಯೋತೀತಿ ಚ ಸಂಜಪನ್ ॥ ೧೭ ॥**

---

೧೩. ಬಳಿಕ ಒಂದು ಮೊಳ ಅಳತೆಯ ಚೌಕಮಾಡಿದ ನೆಲದಲ್ಲಿ ಆ ಕಲಶವನ್ನಿಟ್ಟು, ಆದರ ಬಾಯನ್ನು ಕೈಯಿಂದ ಮುಚ್ಚಿ "ಯಜ್ವಭಿಃ" ಎಂಬ ಮಂತ್ರವನ್ನು ಹೇಳಿ ಸಂಸ್ಕಾರ ಮಾಡಿದರೆ ಸೂರ್ಯನು ಸುಪ್ರೀತನಾಗುವನು.

೧೪. (ದಕ್ಷಿಣದಲ್ಲಿ) ಬಲಗಡೆ ಒಂದೂವರೆ ಅಂಗುಲದಷ್ಟು ಸ್ಥಳ ಬಿಟ್ಟು ಉತ್ತರಾಗ್ರವಾಗಿ ರೇಖೆಯನ್ನು ಬರೆಯಬೇಕು. ಹೀಗೆ ಮಾಡದೆ ಅನ್ಯಥಾ ರಚಿಸಿದರೆ ಅಶುಭಪ್ರಾಪ್ತಿಯಾಗುವುದು.

೧೫ "ಆಪ್ಯಾಯಸ್ವ" ಎಂಬ ಮಂತ್ರಕ್ಕೆ ಧನ್ವಂತರಿಯು ಋಷಿ, ತ್ರಿಷ್ಟುಪ್ ಎಂಬುದು ಛನ್ದಸ್ಸು, ಸವಿತೃ (ಸೂರ್ಯ) ದೇವತೆ ಎಂದು ಉಕ್ತವಾಗಿದೆ.

೧೬. ಅದಕ್ಕೆ ಸೇರಿದಂತೆ ದಕ್ಷಿಣ (ಬಲ) ಭಾಗದ ಪೂರ್ವಾರ್ಧದಲ್ಲಿ ಹನ್ನೆರಡು ಅಂಗುಲವುಳ್ಳದ್ದು ಒಂದು, ಮತ್ತೆ ಒಂದು ಅಂಗುಲ ಅಂತರ ಹೆಚ್ಚು ಉಳ್ಳದ್ದು ಒಂದು, ಅನಂತರ ಏಳು ಅಂಗುಲದ್ದು ಒಂದು, ಈ ಪ್ರಕಾರ ರೇಖೆಗಳನ್ನು ರಚಿಸಬೇಕು.

೧೭. ಪ್ರತಿಷ್ಠಾಪನ ಕಾರ್ಯದಲ್ಲಿ ಅಂಗುಷ್ಠ ಅನಾಮಿಕ ಈ ಬೆರಳುಗಳಿಂದ ಕುಶವನ್ನೂ ಸ್ವರ್ಣವನ್ನೂ ಹಿಡಿದು, ಈ ರೇಖಾರಚನ ಕಾರ್ಯವನ್ನು ನಡೆಯಿಸಬೇಕು. ಆಗ "ಸಂಜ್ಯೋತಿ" ಎಂಬ ಮಂತ್ರವನ್ನು ಜಪಿಸುತ್ತಾ ಮಿತ್ರಾವರುಣರನ್ನು ಸ್ಮರಣೆ ಮಾಡುತ್ತಿರಬೇಕು.

ಸಂಸ್ಮರೇನ್ಮಿತ್ರಾವರುಣೌ ಋಷಿರೌತಥ್ಯಸಂಜ್ಞಕಃ ।
ಪಂಕ್ತಿಶ್ಛಂದಃ ಶಿವೋ ದೇವೋ ರೇಖಾಮಥ ಚ ಯೋಜಯೇತ್ ॥ ೧೮ ॥

ತೇನೈವೋರ್ಧ್ವಕರೌ ಕುರ್ಯಾದ್ದಕ್ಷವಾಮೌ ಸಕೃತ್ಸಕೃತ್ ।
ಭಾಸ್ವರಾಯ ಕ್ಷಿಪೇದಗ್ನೌ ತತ ಊರ್ಧ್ವಂ ರಣಂ ಸ್ಮೃತಂ ॥ ೧೯ ॥

ಸದಸಂಪದ್ಋಷಿಃ ಕಣ್ವೋ ವಿರಾಡಿತಿ ಉದಾಹೃತಃ ।
ಛಂದ ಇಂದ್ರೋ ದೇವತಾ ಚ ಪೃಥಿವ್ಯಾ ದೇವತಾ ಭವೇತ್ ॥ ೨೦ ॥

ಕುಶಪುಷ್ಪೋದಕೇನಾಪಿ ದೇವತೀರ್ಥೇನ ಸತ್ತಮಾಃ ।
ಪಂಚಗವ್ಯೇನ ಮತಿಮಾನ್ ಪಂಚರತ್ನೋದಕೇನ ಚ ॥
ಪಂಚಪಲ್ಲವತೋಯೇನ ಮಹಾಯೋಗೇ ವಿಶೇಷತಃ ॥ ೨೧ ॥

ಅಥೋನಸ್ಯ ಚ ಮಂತ್ರಸ್ಯ ವಶಿಷ್ಠಃ ಪರಿಕೀರ್ತಿತಃ ।
ಛಂದೋಽಥ ದೇವೀ ಗಾಯತ್ರೀ ದೇವತಾ ಗಣನಾಯಕಃ ॥ ೨೨ ॥

---

೧೮. ಈ "ಸಂಜ್ಯೋತಿ" ಎಂಬ ಮಂತ್ರಕ್ಕೆ ಔತಥ್ಯನೆಂಬವನು ಋಷಿ, ಪಂಕ್ತಿ ಎಂಬುದು ಛನ್ದಸ್ಸು, ಶಿವನೇ ದೇವತೆ. ರೇಖಾರಚನೆಯಲ್ಲಿ ಈ ಮಂತ್ರವನ್ನು ವಿನಿಯೋಗಿಸಬೇಕು.

೧೯. ಅಗ್ನಿಯು ಪ್ರಜ್ವಲಿಸುವುದಕ್ಕಾಗಿ ಬಲಗೈಯನ್ನೂ ಎಡಗೈಯನ್ನೂ ಸ್ವಲ್ಪ ಸ್ವಲ್ಪ ಮೇಲಕ್ಕೆತ್ತಿ ಅಗ್ನಿಯಲ್ಲಿ ಆಜ್ಯವನ್ನು ಹಾಕಬೇಕು. ಕೈಗಳನ್ನು ಹೆಚ್ಚಾಗಿ ಊರ್ಧ್ವಮಾಡುವುದು ರಣಸೂಚನೆಯೆಂದು ತಿಳಿಯಬೇಕು.

೨೦. ಈ ಮಂತ್ರಕ್ಕೆ ಸದಸಂಪತ್ಕಣ್ವನು ಋಷಿ, ವಿರಾಟ್ ಎಂಬುದು ಛನ್ದಸ್ಸು; ಇಂದ್ರನು ಮತ್ತು ಪೃಥ್ವಿಯು ದೇವತೆ, ಎಂದು ಹೇಳಿದೆ.

೨೧. ಸಜ್ಜನಶ್ರೇಷ್ಠರೇ! ದರ್ಭೆ, ಹೂ, ದೇವಗಂಗೆ, ಮುಂತಾದ ನದಿಯ ತೀರ್ಥಗಳು ಇವುಗಳನ್ನೂ; ಪಂಚಗವ್ಯ, ಮತ್ತು ಪಂಚರತ್ನಗಳು, ಪಂಚಪಲ್ಲವಗಳು ಇವುಗಳೆಲ್ಲವನ್ನೂ ಆ ಕಲಶದಲ್ಲಿ ಸೇರಿಸಿ, ವಿಶೇಷವಾಗಿ ಮಹಾಯೋಗವನ್ನುಂಟು ಮಾಡಬೇಕು.

೨೨. "ಅಥೋನಸ್ಯ" ಎಂಬ ಮಂತ್ರಕ್ಕೆ ವಸಿಷ್ಠನು ಋಷಿ, ದೇವಿಯಾದ ಗಾಯತ್ರೀ ಎಂಬುದು ಛನ್ದಸ್ಸು ಗಣಪತಿಯು ದೇವತೆ ಎಂದು ಹೇಳಿದೆ.

ಕೀಶಾದಗ್ನಿಂ ಸಮಾದಾಯ ಮೋ ಗೃಹ್ಣಾಮೀತಿ ಸಂಪಠನ್ ।
ಮೋಗೃಹ್ಣಾಮೀತಿಮಂತ್ರಸ್ಯ ಋಷಿರ್ಗೌತಮ ಈರಿತಃ ॥
ಛನ್ದೋಽನುಷ್ಟುಪ್ಸಮಾಖ್ಯಾತಂ ವಾಮದೇವೋಽಥ ದೇವತಾ ॥ ೨೩ ॥

ಕ್ರವ್ಯಾದಗ್ನಿಂ ಪರಿತ್ಯಜ್ಯ ಕ್ರವ್ಯಾದಮಗ್ನಿಮೀರಯನ್ ।
ಮಂತ್ರೇಣಾನೇನ ಮತಿಮಾನ್ ದಕ್ಷಿಣಸ್ಯಾಂ ವಿನಿಕ್ಷಿಪೇತ್ ॥ ೨೪ ॥

ಅಸ್ಯ ಮಂತ್ರಸ್ಯ ಹಾರೀತಃ ಅಷ್ಟಿಃ ಸ್ಯಾಚ್ಛಂದ ಇಷ್ಯತೇ ।
ದೇವತಾ ವಾಮದೇವೋಽಪಿ ದಾಹೇಪಿ ವಿನಿಯೋಜಯೇತ್ ॥ ೨೫ ॥

ಆವಾಹನಂ ತತಃ ಕುರ್ಯಾತ್ಸಂಸರಕ್ಷೇತಿ ಸಂಜಪನ್ ।
ಸಂಸರಕ್ಷೇತಿ ಮಂತ್ರಸ್ಯ ಋಷಿರ್ನೀಲ ಉದಾಹೃತಃ ॥
ವಿರಾಟ್‌ಛಂದೋಽಥ ವಿಜ್ಞೇಯೋ ದೇವತಾ ಚ ಶತಕ್ರತುಃ ॥ ೨೬ ॥

---

೨೩. "ಮೋಗೃಹ್ಣಾಮಿ" ಎಂಬ ಮಂತ್ರಪೂರ್ವಕವಾಗಿ ಯಮನ ದಿಕ್ಕಿನಿಂದ ಎಂದರೆ ದಕ್ಷಿಣಭಾಗದಿಂದ ಅಗ್ನಿಯನ್ನು ತೆಗೆದುಕೊಳ್ಳಬೇಕು. ಈ ಮಂತ್ರಕ್ಕೆ ಗೌತಮನು ಋಷಿ. ಅನುಷ್ಟುಪ್ಪೆಂಬುದು ಛನ್ದಸ್ಸು, ವಾಮದೇವನು ದೇವತೆಯೆಂದು ಹೇಳಿದೆ.

೨೪. ಬುದ್ಧಿಶಾಲಿಯಾದವನು 'ಕ್ರವ್ಯಾದಗ್ನಿಂ' ಎಂಬ ಮಂತ್ರವನ್ನು ಹೇಳುತ್ತಾ ಅದರ ನೈಋತ್ಯಭಾಗದ ಅಗ್ನಿಯನ್ನು ಬಿಟ್ಟು ಉಳಿದುದನ್ನು ದಕ್ಷಿಣದಕಡೆ ಹಾಕಬೇಕು.

೨೫. ಈ ಮಂತ್ರಕ್ಕೆ ಹಾರೀತನೆಂಬವನು ಋಷಿ, ಅಷ್ಟಿ ಎಂಬುದು ಛಂದಸ್ಸು, ವಾಮದೇವನು ದೇವತೆ, ದಹನಕಾಲದಲ್ಲಿ ಈ ಮಂತ್ರವನ್ನು ವಿನಿಯೋಗಿಸಬೇಕು.

೨೬. ಅನಂತರ 'ಸಂಸರಕ್ಷಾ' ಎಂಬ ಮಂತ್ರವನ್ನು ಜಪಿಸುತ್ತಾ ಅಗ್ನಿಯನ್ನು ಆವಾಹನೆಮಾಡಬೇಕು. ಈ 'ಸಂಸರಕ್ಷ' ಎಂಬ ಮಂತ್ರಕ್ಕೆ ನೀಲನೆಂಬುವನು ಋಷಿ, ವಿರಾಟ್ ಎಂಬುದು ಛಂದಸ್ಸು, ಶತಕ್ರತುವೆನಿಸಿದ ಇಂದ್ರನೇ ದೇವತೆ ಎಂದು ತಿಳಿಯಬೇಕು.

**ವೈಶ್ವಾನರ ಇತಿ ಋಚಾ ಅಗ್ನಿಸ್ಥಾಪನಮೀರಿತಂ ।
ಮಂತ್ರಮಾಚಾತಿ ಪ್ರೀಣಾತಿ ಋಷಿಸ್ಸ್ಯಾತ್ಕಾಶ್ಯಪಃ ಸ್ಮೃತಃ ॥
ಅನುಷ್ಟುಪ್ಚ ಭವೇಚ್ಛಂದೋ ದೇವತಾ ಹವ್ಯವಾಹನಃ ॥ ೨೭ ॥**

**ಬಧ್ನಾಸೀತಿ ಚ ಮಂತ್ರೇಣ ಅಗ್ನಿಂ ಕುರ್ಯಾತ್ಪ್ರದಕ್ಷಿಣಂ ।
ಋಷಿಃ ಸ್ವಯಂಭೂರಾಖ್ಯಾತೋ ವಿರಾಟ್ ಛಂದ ಉದಾಹೃತಂ ॥
ದೇವತಾ ಪರಮಾತ್ಮಾ ಚ ನಮಸ್ಕಾರೇಣ ಯೋಜಯೇತ್ ॥ ೨೮ ॥**

**ತತೋಽಗ್ನಿದಕ್ಷಿಣೇ ಭಾಗೇ ಪ್ರಾಗಗ್ರಕುಶಕುಬ್ಜಕೇ ।
ದ್ವಿಹಸ್ತೇ ಭವತಶ್ಚೈವ ಹಸ್ತಮಾನಾಸನೇ ಅಥ ॥ ೨೯ ॥**

**ಬ್ರಹ್ಮನ್ನಿಹೋಪವೇಶ್ಯತಾಮಿತಿ ಬ್ರಹ್ಮಾಣಂ ವಿನಿವೇಶಯೇತ್ ।
ಬ್ರಹ್ಮಜಿಜ್ಞಾನಮೃಚಾ ದೋಗ್ಧ್ರೀಧೇನುರಿತಿ ತ್ಯೃಚಾ ॥ ೩೦ ॥**

**ದ್ವಾಭ್ಯಾಮಿತಿ ಚ ಮಂತ್ರಾಭ್ಯಾಮಿತಿ ಬ್ರಹ್ಮಪ್ರವೇಶನಂ ।
ಶಕ್ರೋಽಸ್ಯತ್ರಾಯುತಾಮೇತಿ ಶೃಣುಋಗ್ಭ್ಯಾಮೃಷೀ ದ್ವಿಜಾಃ ॥ ೩೧ ॥**

---

೨೭. 'ವೈಶ್ವಾನರಂ' ಎಂಬ ಮಂತ್ರಪೂರ್ವಕವಾಗಿ ಅಗ್ನಿಯನ್ನು ಪ್ರತಿಷ್ಠಾಪನೆ ಮಾಡಬೇಕು. ಈ ಮಂತ್ರಕ್ಕೆ ಕಾಶ್ಯಪನೆಂಬುವನು ಋಷಿ, ಅನುಷ್ಟುಪ್ ಎಂಬುದು ಛಂದಸ್ಸು, ಹವ್ಯವಾಹನನಾದ ಅಗ್ನಿಯೇ ದೇವತೆ, ಈ ಮಂತ್ರಪಠನಾನಂತರ ಆಚಮನ ಮಾಡಬೇಕು. ಇದರಿಂದ ಅಗ್ನಿ ಸುಪ್ರೀತನಾಗುವನು.

೨೮. 'ಬಧ್ನಾಸಿ' ಎಂಬ ಮಂತ್ರಪೂರ್ವಕವಾಗಿ ಅಗ್ನಿಯನ್ನು ಪ್ರದಕ್ಷಿಣೆಮಾಡಬೇಕು. ಈ ಮಂತ್ರಕ್ಕೆ 'ಸ್ವಯಂಭೂ' ಎಂಬವನು ಋಷಿ, ವಿರಾಟ್" ಎಂಬುದು ಛಂದಸ್ಸು, ಪರಮಾತ್ಮನೇ ದೇವತೆ, ನಮಸ್ಕಾರಮಾಡುವುದಕ್ಕೆ ಇದನ್ನು ವಿನಿಯೋಗಿಸಬೇಕು.

೨೯-೩೦. ಅನಂತರ ಅಗ್ನಿಯ ದಕ್ಷಿಣಭಾಗದಲ್ಲಿ ದ್ವಿಹಸ್ತಪ್ರಮಾಣಉಳ್ಳದ್ದಾಗಿಯೋ ಏಕಹಸ್ತಪ್ರಮಾಣ ಉಳ್ಳದ್ದಾಗಿಯೋ ಇರುವ ದರ್ಭೆಯ ಆಸನವನ್ನು ಪೂರ್ವದಿಕ್ಕಿಗೆ ತುದಿ ಆಗುವಂತೆ ಹಾಸಿ, "ಬ್ರಹ್ಮನೇ! ಇಲ್ಲಿ ಕುಳಿತುಕೊಳ್ಳೋಣವಾಗಲಿ" ಎಂದು ಹೇಳಿ ಬ್ರಹ್ಮತ್ವಕ್ಕೆ ವಿಪ್ರನನ್ನು ಆಹ್ವಾನಿಸಬೇಕು.

೩೧. ಆಗ ಬ್ರಹ್ಮತ್ವವನ್ನು ವಹಿಸುವ ಬ್ರಾಹ್ಮಣನು 'ಬ್ರಹ್ಮಜಿಜ್ಞಾನಂ' ಮತ್ತು "ದೋಗ್ಧ್ರೀಧೇನು" ಎಂಬ ಇವೆರಡು ಮಂತ್ರಗಳನ್ನೂ ಹೇಳಿ, ಶಕ್ರನು

**ಪ್ರಜಾಪತಿಋಷಿಶ್ಛಂದಸ್ತ್ರಿಷ್ಟುಬ್ದೇವೋಽಥ ಶಂಕರಃ ।**
**ನಾರದಶ್ಚ ಋಷಿಶ್ಛಂದಸ್ತ್ರಿಷ್ಟುಬ್ದೇವಃ ಶಚೀಪತಿಃ ॥ ೩೨ ॥**

**ಅಗ್ನೇರುತ್ತರಭಾಗೇ ಚ ಹಸ್ತಮಾನಾಂತರೇಽಪಿ ಚ ।**
**ಪ್ರಣೀತಾಸ್ಥಾಪನಂ ಕುರ್ಯಾದ್ದಿನಏಹೀತಿ ಸಂಜಪನ್ ॥ ೩೩ ॥**

**ಮಂತ್ರಸ್ಯ ಚ ಋಷಿಶ್ಛಂದೋ ವಾಮದೇವಃ ಪ್ರಕೀರ್ತಿತಃ ।**
**ಜಗತೀ ಚ ಭವೇಚ್ಛಂದೋ ದೇವತಾ ಚ ಶತಕ್ರತುಃ ॥ ೩೪ ॥**

**ಶ್ರೀಪರ್ಣೀಸಹಕಾರೋತ್ಥಂ ವರುಣಸ್ಯ ವಿಶೇಷತಃ ।**
**ಷಡಂಗುಲೇನ ವಿಸ್ತಾರಂ ವಿಂಶತ್ಯಂಗುಲಕೇನ ಚ ॥ ೩೫ ॥**

---

ಈ ಕರ್ಮವನ್ನು ಸಾಂಗವಾಗುವಂತೆ ಕಾಪಾಡಲಿ ಎಂದು ಪ್ರಾರ್ಥಿಸಿ ಆ ಪೀಠವನ್ನು ಸ್ವೀಕರಿಸಲು ಪ್ರವೇಶಮಾಡಬೇಕು. ಓ ವಿಪ್ರೋತ್ತಮರೇ! ಈ ಎರಡು ಋಕ್ಕುಗಳಿಗೂ ಋಷಿಗಳು, ಛಂದಸ್ಸು ಇತ್ಯಾದಿಗಳನ್ನು ಹೇಳುವೆನು ಕೇಳಿ.

೩೨. ಒಂದನೇ ಮಂತ್ರಕ್ಕೆ ಪ್ರಜಾಪತಿಯು ಋಷಿ, ತ್ರಿಷ್ಟುಪ್ ಎಂಬುದು ಛಂದಸ್ಸು, ಶಂಕರನು ದೇವತೆ, ಮತ್ತೊಂದು ಮಂತ್ರಕ್ಕೆ ನಾರದನು ಋಷಿ, ತ್ರಿಷ್ಟುಪ್ ಎಂಬುದು ಛಂದಸ್ಸು, ಇಂದ್ರನು ದೇವತೆ.

೩೩. ಅಗ್ನಿಯ ಉತ್ತರಭಾಗದಲ್ಲಿ ಒಂದುಮೊಳದ ಅಂತರದಲ್ಲಿ ಪ್ರಣೀತಾ ಪಾತ್ರೆಯನ್ನು ಇರಿಸಬೇಕು. ಇದನ್ನು ಇರಿಸುವಾಗ 'ದಿನಏಹಿ' ಎಂಬ ಮಂತ್ರವನ್ನು ಪಠಿಸಬೇಕು.

೩೪. ಈ ಮಂತ್ರಕ್ಕೆ ವಾಮದೇವನೇ ಋಷಿಯೆಂದೂ, ಜಗತೀ ಎಂಬುದು ಛಂದಸ್ಸೆಂದೂ, ಇಂದ್ರನು ದೇವತೆಯೆಂದೂ ಹೇಳಿದೆ.

೩೫. ಅಗ್ನಿಯ ಪಶ್ಚಿಮದಿಕ್ಕಿನಲ್ಲಿ ಎಂದರೆ ಯಜಮಾನನ ಮುಂದುಗಡೆ ಇರಿಸಬೇಕಾದ ಈ ಪಾತ್ರೆಯು ತೇಗದ ಮರದಿಂದಲೋ, ಅಥವಾ ಸಿಹಿಮಾವಿನ ಮರದಿಂದಲೋ, ರಚಿತವಾಗಿ, ಇಪ್ಪತ್ತುಅಂಗುಲ ಉದ್ದ, ಆರುಅಂಗುಲ ಅಗಲ ಇರಬೇಕು.

ದೈರ್ಘ್ಯೇಣ ಚ ಚತುಃಖ್ಯಾತಕಾಂಗುಲಂ ಚ ಪ್ರಮಾಣತಃ ।
ದ್ವ್ಯಂಗುಲೇ ಚರಕಾಕಾರಾ್ಯ ಮಾಸಾಸಂದೇವಕರ್ಮಣಿ　　॥ ೩೬ ॥

ಅಭಿಚಾರೇ ಭವೇತ್ಕಾಂಸ್ಯಂ ತಾಮ್ರಂ ಸ್ಯಾಚ್ಛಾಂತಿಕರ್ಮಣಿ ।
ಪ್ರತಿಷ್ಠಾಯಾಂ ಮೃಣ್ಮಯಂ ಚ ಅಷ್ಟಾಂಗುಲಮಥಾಪಿ ವಾ　　॥ ೩೭ ॥

ದ್ವಾದಶಾಂಗುಲಪ್ರಸ್ತಾರಂ ತೈಜಸಂ ಮಾನವರ್ಜಿತಂ ।
ಇಮಂ ಮೇ ವರುಣೇನಾರ್ಚಾ ಪ್ರಣೀತಾಮಥ ಪೂರಯೇತ್　　॥ ೩೮ ॥

ಸಾಗರಾಅಥ ಪ್ರೀಯಂತಾಮಿತ್ಥಮಾಧ್ಯಾನಮಾಚರೇತ್ ।
ಸಕೃದಚ್ಛಿನ್ನದರ್ಭೇಣ ದಿಗ್ವಿದಿಕ್ಷು ಪರಿಸ್ತರೇತ್　　॥ ೩೯ ॥

ನೈಋತೇ ದಿಕ್ಷು ಪೀತಃ ಸ್ಯಾತ್ ವೈಶ್ವದೇವೇ ತಥೈವ ಚ ।
ಕಯಾ ನಶ್ಚಿತ್ರ ಇತ್ಯೃಚಾ ನಾಗಃ ಪ್ರೀಣಾತಿ ಸತ್ತಮಾಃ　　॥ ೪೦ ॥

---

೩೬. ಅದು ನಾಲ್ಕುಅಂಗುಲ ಆಳ, ಸುತ್ತಲೂ ಎರಡುಅಂಗುಲ ವಟ್ಟ ಇವು ಉಳ್ಳಂತೆ ರಚಿತವಾಗಬೇಕು. ದೇವಕರ್ಮಗಳ ಉಪಯೋಗಕ್ಕಾದರೆ ಈ ಪ್ರಕಾರ ಇರಬೇಕು.

೩೭–೩೮. ಶೂನ್ಯ, ಮಾಟ ಮುಂತಾದ ಕರ್ಮಗಳಿಗೋಸ್ಕರವಾದರೆ ಕಂಚಿನಿಂದ ರಚಿತವಾಗಿರಬೇಕು. ಶಾಂತಿಕರ್ಮಗಳಲ್ಲಿ ಉಪಯೋಗಿಸಬೇಕಾದರೆ ತಾಮ್ರದಿಂದ ಮಾಡಲ್ಪಟ್ಟಿರಬೇಕು. ಪ್ರತಿಮಾ ತಟಾಕಾದಿಗಳ ಪ್ರತಿಷ್ಠಾಕರ್ಮದಲ್ಲಿ ಉಪಯೋಗಿಸಲು ಎಂಟು ಅಂಗುಲ ಅಥವಾ ಹನ್ನೆರಡು ಅಂಗುಲ ಅಳತೆಯುಳ್ಳ ಹಾಗೆ ಇರಬೇಕು. ಇದು ಮಣ್ಣಿನಿಂದಾದರೂ ರಚಿತವಾಗಬಹುದು. ಈ ಅಳತೆಯಿಲ್ಲದಿದ್ದರೂ ತೇಜಸ್ಸಂಬಂಧವುಳ್ಳದ್ದಾಗಿರುವಂತೆ ಸುಟ್ಟುದಾಗಿರಬೇಕು.

೩೯. "ಇಮಂ ಮೇ ವರುಣ" ಎಂಬ ಮಂತ್ರದಿಂದ ಪ್ರಣೀತಾಪಾತ್ರೆಯ ತುಂಬ ಉದಕವನ್ನು ಹಾಕಬೇಕು. ಹೀಗೆ ನೀರನ್ನು ಹಾಕುವಾಗ 'ಸಾಗರಗಳು ಸುಪ್ರೀತವಾಗಲಿ' ಎಂಬದಾಗಿ ಧ್ಯಾನಮಾಡುತ್ತಿರಬೇಕು. ಅಚ್ಛಿನ್ನಗಳಾದ (ಉದ್ದವಾದ) ದರ್ಭೆಗಳಿಂದ ದಿಕ್ಕುಗಳಲ್ಲಿಯೂ ವಿದಿಕ್ಕುಗಳಲ್ಲಿಯೂ ಪರಿಸ್ತರಣವನ್ನು ಹಾಕಬೇಕು.

೪೦. ಋಷಿಶ್ರೇಷ್ಠರೇ! ಕೇಳಿ; ವೈಶ್ವದೇವ ಮಾಡುವಾಗ ಅದೇರೀತಿ ನೈಋತ್ಯದಲ್ಲೂ ಇತರ ದಿಕ್ಕಿನಲ್ಲೂ ಹಾಕಬೇಕು. ಓ ವಿಪ್ರಶ್ರೇಷ್ಠರೇ! "ಕಯಾನಶ್ಚಿತ್ರಾ ಭವತ್" ಎಂಬ ಮಂತ್ರಪೂರ್ವಕವಾದ ಹೋಮದಿಂದ ನಾಗನು ಸುಪ್ರೀತನಾಗುತ್ತಾನೆ.

ಅಸ್ಯ ಮಂತ್ರಸ್ಯ ಚ ಋಷಿರ್ಭರದ್ವಾಜ ಉದಾಹೃತಃ ।
ಛನ್ದೋಽನುಷ್ಟುಬ್ದೇವತಾ ಚ ಈಶಾನಃ ಪರಿಕೀರ್ತಿತಃ ॥ ೪೧ ॥

ಪ್ರಯೋಜನಾದಿಕಂ ದ್ರವ್ಯಂ ತತ ಆಸಾದಯೇತ್ಕ್ರಮಾತ್ ।
ದಕ್ಷಿಣಾದಿ ಉತ್ತರಾನ್ತಂ ಧ್ರುವಾಸ ಇತ್ಯೃಚಾಪಿ ಚ ॥ ೪೨ ॥

ಋಷಿಃ ಸ್ಯಾನ್ನಾರದಶ್ಛಂದೋಽನುಷ್ಟುಪ್ಚೈವಾಥ ದೇವತಾ ।
ಶತಕ್ರತುಶ್ಚ ಪ್ರೀಣಾತಿ ಯೋಜಯೇದಥ ಸಾದರಾತ್ ॥ ೪೩ ॥

ಕಾಷ್ಠಂ ಚ ಪಶ್ಚಿಮೇ ಕುರ್ಯಾತ್ಪ್ರಯಚ್ಛನ್ಪಶ್ಚಿಮೇನ ತು ।
ಪುರತೋಽನ್ನಂ ಪಂಚವ್ರೀಹೀಸ್ತಿಲಾಶ್ಚ ಶಹಸರ್ಷಪಾನ್ ॥ ೪೪ ॥

ದಕ್ಷಿಣೇ ಚೈವ ಆಪೂಪಂ ಭೃಂಗರಾಜಂ ತಥೈವ ಚ ।
ಫಲಪತ್ರೇ ವಾಮಭಾಗೇ ಪಿಷ್ಟಕಂ ದಧಿ ದುಗ್ಧಕಂ ॥ ೪೫ ॥

---

೪೧–೪೨. ಈ ಮಂತ್ರಕ್ಕೆ ಭರದ್ವಾಜನು ಋಷಿ, ಅನುಷ್ಟುಪ್ ಎಂಬುದು ಛಂದಸ್ಸು, ಈಶಾನನೇ ದೇವತೆ ಎಂದು ಹೇಳಿದೆ. ಇನ್ನು ಹೋಮಕ್ಕೆ ಉಪಯೋಗಿಸ ಬೇಕಾದ ದ್ರವ್ಯಗಳನ್ನು ದಕ್ಷಿಣದಿಂದ ಆರಂಭಿಸಿ, ಉತ್ತರಾಂತವಾಗಿ "ಧ್ರುವಾಸ" ಎಂಬ ಮಂತ್ರಪೂರ್ವಕವಾಗಿ ಇರಿಸಬೇಕು.

೪೩. ಈ ಮಂತ್ರಕ್ಕೆ ನಾರದನು ಋಷಿ, ಅನುಷ್ಟುಪ್ ಎಂಬುದು ಛಂದಸ್ಸು, ಇಂದ್ರನು ದೇವತೆ, ಅವನ ಪ್ರೀತ್ಯರ್ಥವಾಗಿ ಆದರದಿಂದ ವಿನಿಯೋಗಿಸಬೇಕು.

೪೪. ಮೊದಲು ಆ ಪಾತ್ರೆಯ ಪಶ್ಚಿಮದಲ್ಲಿ ಸಮಿತ್ತುಗಳನ್ನು ಇಡಬೇಕು. ಪಶ್ಚಿಮದ ಕಡೆಯಿಂದ ಆರಂಭಿಸಿ ಅದರ ಮುಂಭಾಗದಲ್ಲಿ ಚರುವನ್ನೂ, ಪಂಚವ್ರೀಹಿ ಗಳನ್ನೂ, ಶಹ, ಸಾಸುವೆ, ಎಳ್ಳು ಇವುಗಳನ್ನೂ ಇಡಬೇಕು.

೪೫-೪೬. ಆದರ ದಕ್ಷಿಣದಿಕ್ಕಿನಲ್ಲಿ (ಬಲಗಡೆ) ಅಪೂಪ ಭಕ್ಷ್ಯವನ್ನೂ, ಭೃಂಗ ರಾಜಪತ್ರವನ್ನೂ, ಇತರ ಫಲಗಳನ್ನೂ, ಪತ್ರಗಳನ್ನೂ ಇಡಬೇಕು. ಎಡಗಡೆಯಲ್ಲಿ ಪಿಷ್ಟ, (ಪುರೋಡಾಶ) ಮೊಸರು, ಹಾಲು, ಹಲಸಿನಹಣ್ಣು, ತೆಂಗಿನಕಾಯಿ, ಮೋದಕ,

**ಪನಸಂ ನಾರಿಕೇಳಂ ಚ ಮೋದಕಂ ಲಡ್ಡುಕಂ ತಥಾ ।**
**ಪ್ರಣೀತಾಂ ಚ ದಿಗ್ವಿದಿಕ್ಷು ಸ್ಥಾಪಯೇದವಿಚಾರಯನ್ ॥ ೪೬ ॥**

**ಪ್ರಣೀತಾಂ ನ ಸ್ಪೃಶೇಜ್ಜಾತು ಹೋಮಕಾಲೇ ಕಥಂಚನ ।**
**ಸ್ನಾನಕುಂಭಂ ಚ ಭೋ ವಿಪ್ರಾ ಯಾವದ್ಯಾಗಃ ಪ್ರವರ್ತತೆ ॥ ೪೭ ॥**

**ಉಚ್ಛೀರಕಂ ಮಾತುಲಿಂಗಂ ದೂರ್ವಾಂ ಧಾತ್ರೀಫಲಾನಿ ಚ ।**
**ತುಲಸೀಮಾಲತೀಜಾಜೀ ಜಲಜಾನಿ ವಿಶೇಷತಃ ॥ ೪೮ ॥**

**ಐಶಾನ್ಯಾಂ ಸ್ಥಾಪಯೇತ್ಸರ್ವಂ ಯಚ್ಚ ವೈಕಂಕತೀಮಯಂ ।**
**ನೈಋತ್ಯೇತಿ ವಿಶೇಷೋಯಂ ಯಚ್ಚ ವೈಕಂಕತೀ ಶಮೀ ॥ ೪೯ ॥**

**ಯಥಾಯೋಗೇನ ತತ್ಸರ್ವಂ ಗ್ರಾಹ್ಯಂ ತತ್ಪಾತ್ರಮೇವ ಚ ।**
**ಕ್ಷೀರಪಾಕೇ ತು ಕ್ಷೀರಾನ್ತೇ ಚರುಸ್ಥಾಲೀಮಥಾನಯೇತ್ ॥ ೫೦ ॥**

---

ಲಡ್ಡಿಗೆ ಇವೇ ಮೊದಲಾದುವುಗಳನ್ನು ಹೀಗೆ ಪ್ರಣೀತಾಪಾತ್ರೆಯ ದಿಕ್ಕುಗಳಲ್ಲಿಯೂ, ವಿದಿಕ್ಕುಗಳಲ್ಲಿಯೂ ಇರಿಸಬೇಕು.

೪೭. ಈ ಹೋಮ ಮಾಡುತ್ತಿರುವಾಗ ಮಧ್ಯೆ ಯಾವಾಗಲೂ ಪ್ರಣೀತಾ ಪಾತ್ರೆಯನ್ನು ಮುಟ್ಟಬಾರದು. ಓ ಬ್ರಾಹ್ಮಣೋತ್ತಮರೇ! ಯಾಗವು (ಹೋಮವು) ನಡೆಯುವವರೆಗೂ ಹೇಗೂ ಸ್ನಾನಕುಂಭವನ್ನು ಮುಟ್ಟಬಾರದು.

೪೮. ಉಜ್ಜೀರಕ, ಮಾದಲ, ಗರಿಕೆ, ನೆಲ್ಲಿಯಕಾಯಿ, ಇವುಗಳನ್ನೂ, ವಿಶೇಷತಃ ತುಲಸಿ, ಮಾಲತೀಹೂ, ಜಾಜಿಯಹೂ, ಇವನ್ನೂ ಕಂಕತಿ ಎಂಬ ಸಸ್ಯಸಹಿತ ಈಶಾನ್ಯದಿಕ್ಕಿನಲ್ಲಿ ಇರಿಸಬೇಕು.

೪೯. ಕಂಕತಿಯ ಶಮಿ (ಗೂಟ) ಯೊಂದನ್ನು ನೈಋತ್ಯದಲ್ಲಿ ಸ್ಥಾಪಿಸುವುದು ವಿಶೇಷವಿಧಿ, ಸಂದರ್ಭಾನುಸಾರ ಅವುಗಳೆಲ್ಲವನ್ನೂ, ಆಗಲಿಲ್ಲವಾದರೆ ಅದರ ಎಲೆಗಳನ್ನಾಗಲಿ ಶೇಖರಿಸಬೇಕು.

೫೦. ಕ್ಷೀರಹೋಮ ಮಾಡುವಪಕ್ಷದಲ್ಲಿ ಅದನ್ನು ಕಾಯಿಸಿ ಹೋಮಮಾಡಬೇಕು. ಕ್ಷೀರವನ್ನು ಕಾಯಿಸಿದ ಮೇಲೆ ಚರು ಮಾಡಿದ ಪಾತ್ರೆಯನ್ನು ಅದರ ಬಳಿ ಇರಿಸಬೇಕು.

ಪವಿತ್ರಚ್ಛೇದನಕುಶೈಃ ಛಿಂದ್ಯಾತ್ಪ್ರಾದೇಶಿಕಂ ಪುನಃ ।
ಛಿತ್ವಾ ಪವಿತ್ರಂ ಪ್ರೋಕ್ಷಿಣ್ಯಾಂ ಸ್ಥಾಪಯೇದ್ಬಲಭಿದಾಮ್ರಕಂ ॥ ೫೧ ॥

ವಿಷ್ಣೋಃ ರರಾಟಮಂತ್ರೇಣ ಛೇದಯೇದಗ್ರಭಾಗತಃ ।
ಪಾಯುಸೇನ ಕಾಠಿನೇನ ಪ್ರಮಥ್ನೀಯಾತ್ಕದಾಚನ ॥ ೫೨ ॥

ನ ರಸೇನ ನ ಕಾರ್ಷ್ಣೇನ ನ ದೃಢೇನ ಕದಾಚನ ।
ತಾಮ್ರೇಣ ಭಸ್ಮನಾ ಚಾಥ ಶುಕ್ತಿಶಂಖೇನ ವಾಗ್ಯತಃ ॥ ೫೩ ॥

ಛೇದಯೇತ್ಪಿಂಜುಲೀಂ ಚಾಪಿ ಪವಿತ್ರಮಥ ದೇಶಿಕಃ ।
ವಿಷ್ಣೋರರಾಟಮಂತ್ರಸ್ಯ ಹಾರೀತಶ್ಚ ಋಷಿಃ ಸ್ಮೃತಃ ॥ ೫೪ ॥

ಪಂಕ್ತಿಶ್ಛಂದೋ ಭವೇದ್ದೇವಃ ಸಂಸ್ಕಾರೇ ವಿನಿಯೋಜಯೇತ್ ।
ಪ್ರಣೀತಾಭಾಜನಂ ಗೃಹ್ಯ ಪ್ರೋಕ್ಷಣೀಂ ಪೂರಯೇತ್ತ್ರಿಭಿಃ ॥ ೫೫ ॥

---

೫೧. ಒಂದುಚೋಟು ಉದ್ದವಿರುವ ದರ್ಭೆಯಿಂದ ಮಾಡಿದ ಪವಿತ್ರವನ್ನು ಅದರಮೇಲೆ ಇಟ್ಟು ಆ ಪವಿತ್ರವನ್ನು ಕತ್ತರಿಸಿ ಮಾವಿನ ಎಲೆಗಳಿಂದ ಅದರಲ್ಲಿ ಅದ್ದಿ ಇಂದ್ರ ಮಂತ್ರಪೂರ್ವಕವಾಗಿ ಪ್ರೋಕ್ಷಣಪಾತ್ರೆಯ ಮೇಲೆ ಇರಿಸಬೇಕು.

೫೨. "ವಿಷ್ಣೋರರಾಟಮಸಿ" ಎಂಬ ಮಂತ್ರಪೂರ್ವಕವಾಗಿ ಅದರ ಅಗ್ರಭಾಗವನ್ನು ಕತ್ತರಿಸಬೇಕು. ಕಠಿನಭಾಗದಿಂದ ಅದನ್ನು ಮಥನಮಾಡಿ ಬೆರಸಿ ಕೊಳ್ಳಬೇಕು. ಆಗ ವಾಙ್ನಿಯಮದಿಂದಿರಬೇಕು.

೫೩. ರಸಕಡ್ಡಿಯಿಂದಾಗಲಿ, ಕಪ್ಪುಕೊಳ್ಳಿಯ ಕಡ್ಡಿಯಿಂದಾಗಲಿ, ಅತಿ ದೃಢವಾದ ಶಿಲಾದಿಗಳಿಂದಾಗಲಿ, ತಾಮ್ರದ ಕಡ್ಡಿಯಿಂದಾಗಲಿ, ಬೂದಿಯಿಂದ ಕೂಡಿದ ಕಾಷ್ಠದಿಂದಾಗಲಿ, ಮುತ್ತಿನಚಿಪ್ಪು, ಶಂಖ ಇವುಗಳಿಂದಾಗಲಿ ಮಥಿಸಬಾರದು.

೫೪. ಬಳಿಕ ಆಚಾರ್ಯನು ಹಿಂದೆ ಹೇಳಿದಂತೆ ಮಂತ್ರಪೂರ್ವಕವಾಗಿ ಆ ಪವಿತ್ರವನ್ನು ಪಿಂಜುಲಿಯಲ್ಲಿ ಛೇದಿಸಬೇಕು. ಆ "ವಿಷ್ಣೋರರಾಟಮಸಿ" ಎಂಬ ಮಂತ್ರಕ್ಕೆ ಹಾರೀತನು ಋಷಿ.

೫೫. ಪಂಕ್ತಿ ಎಂಬುದು ಛಂದಸ್ಸು, ಭವನೇ ದೇವತೆ, ಹವಿಸ್ಸಂಸ್ಕಾರ ಮಾಡುವಾಗ ಈ ಮಂತ್ರವನ್ನು ವಿನಿಯೋಗಿಸಬೇಕು. ಬಳಿಕ ಪ್ರಣೀತಾಪಾತ್ರೆಯನ್ನು ಕೈಗೆ ತೆಗೆದುಕೊಂಡು ಅದರಿಂದ ಮೂರು ಉದ್ಧರಣೆ ನೀರನ್ನು ಪ್ರೋಕ್ಷಣಪಾತ್ರೆಯ ಒಳಕ್ಕೆ ಹಾಕಬೇಕು.

**ಕಾಯತೀರ್ಥೇನ ತತ್ಕುರ್ಯಾದ್ದೇವತೀರ್ಥೇನ ಚೇತ್ಯಪಿ ।**
**ವಾಮಹಸ್ತತಲೇ ಪಶ್ಚಾತ್ ಸ್ಥಾಪಯೇತ್ಪ್ರೋಕ್ಷಣೀಯಕಂ ॥ ೫೬ ॥**

**ಮಧ್ಯಮಾ ಮಧ್ಯಮಾಂಗುಷ್ಠ ಅಪಾಮಾರ್ಗೇಣ ಮಂತ್ರಿಭಿಃ ।**
**ಉತ್ತಾನಂ ತತ್ಪವಿತ್ರಂ ಚ ಪವಿತ್ರಂ ತೇತಿ ಸಂಜಪನ್ ॥ ೫೭ ॥**

**ಋಷಿಃ ಸ್ಯಾದ್ಗೌತಮಶ್ಛಂದೋ ಧರ್ಮರಾಜೋಽಥ ದೇವತಾ ।**
**ಅಥ ಸ್ಥಾಪಿತದ್ರವ್ಯಾಣಿ ಪ್ರೋಕ್ಷಯೇತ್ಸ್ಥಾಪಯೇತ್ಕ್ರಮಾತ್ ॥ ೫೮ ॥**

**ಸಕೃದ್ದ್ರವ್ಯೇ ತ್ರಿಭಿಃ ಕಾಷ್ಠೈಃ ತ್ರಿವಾರಂ ಮಂತ್ರಪುಷ್ಪಕೈಃ ।**
**ಸ್ಥಿರಸ್ಥಾನೇನ ತು ಸಂಪ್ರಾಪ್ತಪ್ರಣೀತಾಯಾಶ್ಚ ದಕ್ಷಿಣೇ ॥ ೫೯ ॥**

---

೫೬. ಹೀಗೆ ನೀರುಹಾಕುವ ಕಾರ್ಯವನ್ನು ಪ್ರಾಜಾಪತ್ಯತೀರ್ಥದಿಂದಲೋ, (ಕಿರುಬೆರಳಿನ ಕಡೆಯಿಂದ ನೀರು ಬೀಳುವರೀತಿ) ಅಥವಾ ದೈವತತೀರ್ಥದಿಂದಲೋ (ಅಂಗುಳಿಗಳ ತುದಿಯಿಂದ ಬೀಳುವರೀತಿ) ನಡೆಸಬೇಕು. ಅನಂತರ ಪ್ರೋಕ್ಷಣಪಾತ್ರೆಯನ್ನು ಎಡದ ಅಂಗೈಯಲ್ಲಿ ಇರಿಸಿಕೊಳ್ಳಬೇಕು.

೫೭. ಅಂಗುಷ್ಠ, ಮಧ್ಯಮ, ಈ ಬೆರಳುಗಳಿಂದ ಉತ್ತರಣೆಕಡ್ಡಿಯ ಮಧ್ಯಭಾಗದಲ್ಲಿ ಹಿಡಿದು ಮಂತ್ರಜ್ಞನಾದವನು " ಪವಿತ್ರಂತೇ ವಿತತಂ " ಎಂಬ ಮಂತ್ರವನ್ನು ಜಪಿಸುತ್ತಾ ಆ ಪವಿತ್ರವನ್ನು ಅಡ್ಡಲಾಗಿಡಬೇಕು.

೫೮. ಈ " ಪವಿತ್ರಂತೇ ವಿತತಂ " ಎಂಬ ಮಂತ್ರಕ್ಕೆ ಗೌತಮನು ಋಷಿ, ತ್ರಿಷ್ಟುಪ್ ಎಂಬುದು ಛಂದಸ್ಸು, ಧರ್ಮರಾಜನು (ಯಮ) ದೇವತೆ, ಹವಿಸ್ಸಂಸ್ಕಾರದಲ್ಲಿ ಈ ಮಂತ್ರವನ್ನು ವಿನಿಯೋಗಮಾಡಬೇಕು. ಅನಂತರ ಹೋಮಕ್ಕೆ ಬೇಕಾದ ಉಪಕರಣಾದಿಗಳನ್ನು ಕ್ರಮವಾಗಿ ಸ್ಥಾಪಿಸಿ, ಹಾಗೆ ಇರಿಸಿದ ದ್ರವ್ಯಗಳನ್ನು ಪ್ರೋಕ್ಷಣೆ ಮಾಡಬೇಕು.

೫೯. ಪ್ರಣೀತಾ ಪಾತ್ರೆಯ ದಕ್ಷಿಣ (ಬಲ) ಭಾಗದಲ್ಲಿ ಗೊತ್ತಾದ ಜಾಗದಲ್ಲಿ ಇರಿಸಿದ ದ್ರವ್ಯಗಳ ಮೇಲೆ ಒಂದುಸಾರಿಯೂ, ಸಮಿತ್ತುಗಳಮೇಲೆ ಮಂತ್ರಪುಷ್ಪಗಳಿಂದ ಮೂರುಸಾರಿಯೂ ಪ್ರೋಕ್ಷಿಸಬೇಕು.

ಪ್ರಾದೇಶಾನ್ತರತಶ್ಚೈವ ಆಜ್ಯಸ್ಥಾಲೀಮಥಾರ್ಪಯೇತ್ ।
ಅಗ್ರತೋ ಮಂಡಲಂ ಕೃತ್ವಾ ವಹ್ನಿಂ ವಿಪ್ರೇ ತು ಸ್ಥಾಪಯೇತ್ ॥ ೬೦ ॥

ದ್ಯೂತಂ ನಿಸ್ಸಾರಯೇತ್ತತ್ತು ನಿರೂಪ್ಯಾಶುಕ್ರಮೇಣ ತು ।
ಈಶಾನೇತಿ ಚ ಮಂತ್ರೇಣ ಅಧಿಶ್ರಪಣಮೀರಿತಂ ॥ ೬೧ ॥

ಋಷಿರ್ನಾರಾಯಣಶ್ಛಂದಃ ಪಂಕ್ತಿರೀಶೋಽಥ ದೇವತಾ ।
ಪರ್ಯಗ್ನಿಕರಣಂ ಕುರ್ಯಾದಾದರಾದ್ದ್ವಯಮಪ್ಯಥ ॥ ೬೨ ॥

ಅವೇಕ್ಷ್ಯೈಈಮಾರಭ್ಯ ದಕ್ಷಿಣಾವರ್ತಕೇನ ತು ।
ಕುಲಾಯನೀತಿಮಂತ್ರೇಣ ಋಷಿಶ್ಛಂದಾದಿಕಂ ಸ್ಮರನ್ ॥ ೬೩ ॥

ಪರಿವೇಷ್ಯಾಜ್ಯಸ್ಥಾಲೀಂ ಚ ತ್ರಿಃ ಸಕೃದ್ವಾ ಸಮಾಹಿತಃ ।
ಪಿತರಸ್ತೃಪ್ಯಂತಾಮಿತಿ ಸಂಸ್ಕಾರೇ ಮಾತರಃ ಸ್ಮೃತಾಃ ॥ ೬೪ ॥

---

೬೦. ಒಂದುಚೋಟು ಅಂತರದಲ್ಲಿ ಆಜ್ಯಸ್ಥಾಲಿಯನ್ನು ಇಡಬೇಕು. ಅಗ್ರಭಾಗದಲ್ಲಿ ಮಂಡಲವನ್ನು ಮಾಡಿ ಅಲ್ಲಿ ಕುಳ್ಳಿರಿಸಿದ ಆ ಬ್ರಾಹ್ಮಣನಲ್ಲಿ ಅಗ್ನಿಯನ್ನು ಆವಾಹಿಸಬೇಕು

೬೧. ಶೀಘ್ರಕ್ರಮದಲ್ಲಿ ಚೆನ್ನಾಗಿ ನೋಡಿ ದ್ಯೂತವನ್ನು ನಿಸ್ಸರಣಮಾಡಬೇಕು "ಈಶಾನ" ಎಂಬ ಮಂತ್ರಪೂರ್ವಕವಾಗಿ ಅಧಿರೋಪಣ ಮಾಡಬೇಕೆಂದು ಹೇಳಿದೆ

೬೨-೬೩. ಈ ಮಂತ್ರಕ್ಕೆ ನಾರಾಯಣನು ಋಷಿ,ಪಂಕ್ತಿ ಎಂಬುದು ಛನ್ದಸ್ಸು ಈಶ್ವರನು ದೇವತೆ, ಈಶಾನ್ಯದಿಕ್ಕು ಮೊದಲುಗೊಂಡು ದಕ್ಷಿಣಾವರ್ತವಾಗಿ (ಪ್ರದಕ್ಷಿಣವಾಗಿ) "ಕುಲಾಯನೀ" ಎಂಬ ಮಂತ್ರಪೂರ್ವಕವಾಗಿ ಅದರ ಋಷಿ, ಛಂದಸ್ಸು, ಮುಂತಾದುವನ್ನು ಸ್ಮರಿಸುತ್ತಾ ಚೆನ್ನಾಗಿ ನೋಡಿಕೊಂಡು ಆದರದಿಂದ ಇವೆರಡಕ್ಕೂ ಪರ್ಯಗ್ನಿಕರಣಮಾಡಬೇಕು.

೬೪. ಬಳಿಕ ಸಮಾಹಿತವಾದ ಮನಸ್ಸುಳ್ಳವನಾಗಿ ಮೂರು ಆವೃತ್ತಿಯೋ, ಅಥವಾ ಒಂದು ಆವೃತ್ತಿಯೋ, ಆಜ್ಯಸ್ಥಾಲಿಯು ಸುತ್ತಲೂ ನೀರಿನಿಂದ ಪರಿವೇಷಣ ಮಾಡಿ ಪಿತರಃ ತೃಪ್ಯಂತಾಂ (ಪಿತೃಗಳು ತೃಪ್ತರಾಗಲಿ) ಎಂಬ ಮಂತ್ರ ಮಾತೃಗಳು ತೃಪ್ತರಾಗಲಿ ಎಂಬ ಮಂತ್ರದಿಂದ ಸಂಸ್ಕಾರಮಾಡಬೇಕೆಂದು ಹೇಳಿದೆ.

**ಋಷಿಃ ಸ್ಯಾಜ್ಜಮದಗ್ನಿಶ್ಚ ಗಾಯತ್ರೀ ಛಂದ ಈರಿತಂ ।**
**ದೇವತಾ ಚ ಪಿನಾಕೀ ಸ್ಯಾದಗ್ನಿಷ್ಟೋಮೇ ಚ ಯೋಜಯೇತ್ ॥ ೬೫ ॥**

**ಘೃತಸ್ಯ ಚ ತಥಾ ತ್ವಂನೋಬ್ರಹ್ಮಾ ವೈ ತುಷ್ಯತಾಮಿತಿ ।**
**ಷಡಂಗುಲಂ ಸ್ರುವಂ ಪಶ್ಚಾದ್ಗೃಹೀತ್ವಾಽಗ್ನೌ ಪ್ರತಪ್ಯ ಚ ॥ ೬೬ ॥**

**ತ್ರಿರಾತ್ರಂ ತು ಮಹಾಯೋಗೇ ಸಕೃದನ್ಯತ್ರ ಸತ್ತಮಾಃ ।**
**ಸಮ್ಮಾರ್ಜಯೇತ್ಕುಶೇನಾಽಪಿ ಮೂಲಾದಗ್ರಂ ತು ಸೇಚಯೇತ್ ॥ ೬೭ ॥**

**ಅಗ್ರಾನ್ಮೂಲಂ ಪುನಃ ಕುರ್ಯಾತ್ಸಂಪ್ರೋಜ್ಯ ಚ ಪುನಃ ಪುನಃ ।**
**ತ್ರಿಭಿಸ್ತ್ರಿಭಿಃ ಪ್ರಣೀತೋದೇ ಪ್ರೋಕ್ಷಯೇತ್ತದನಂತರಂ ॥ ೬೮ ॥**

**ಸ್ರುವಂ ಪುನಃ ಪ್ರತಪ್ಯಾಥ ಪ್ರೋಕ್ಷಣ್ಯುತ್ತರತೋ ನ್ಯಸೇತ್ ।**
**ಆಜ್ಯಪಾತ್ರಂ ಪುರಸ್ಕೃತ್ಯ ಪವಿತ್ರಂ ಚ ಸಮಾಹರೇತ್ ॥ ೬೯ ॥**

---

೬೫. ಈ ಮಂತ್ರಕ್ಕೆ ಜಮದಗ್ನಿಯು ಋಷಿ, ಗಾಯತ್ರಿ ಎಂಬುದು ಛನ್ದಸ್ಸು, ಈಶ್ವರನು ದೇವತೆ, ಅಗ್ನಿಷ್ಟೋಮಯಾಗದಲ್ಲಿ ಇದನ್ನು ವಿನಿಯೋಗಿಸಬೇಕು.

೬೬ ಅನಂತರ ಆರುಅಂಗುಲ ಉದ್ದದ ಸ್ರುವವನ್ನು ಕೈಗೆ ತೆಗೆದುಕೊಂಡು ಅಗ್ನಿಯಲ್ಲಿ ಕಾಯಿಸಿ " ತ್ವನ್ನೋ ಬ್ರಹ್ಮಾ ವೈ ತುಷ್ಯತಾಂ " ಎಂಬ ಮಂತ್ರದಿಂದ ತುಪ್ಪವನ್ನು ಹೋಮಮಾಡಬೇಕು.

೬೭. ಸಜ್ಜನಶ್ರೇಷ್ಠರೇ! ಮಹಾಯಾಗ ಸಂದರ್ಭದಲ್ಲಿ ಮೂರು ರಾತ್ರಿಯೂ ಇತರ ಹೋಮಗಳಲ್ಲಿ ಒಂದುಸಾರಿಯೂ ಹೀಗೆ ಮಾಡಬೇಕು. ದರ್ಭೆಯ ತುದಿ ಯಿಂದಲೂ, ಬುಡದಿಂದಲೂ ನೀರು ಅದ್ದಿ ಆ ಸ್ರುವವನ್ನು ಸಮಾರ್ಜನೆಮಾಡಬೇಕು

೬೮. ಮತ್ತೆ ತುದಿಯಿಂದ ಒಂದುಸಲ, ಮತ್ತೆ ಬುಡದಿಂದ ಒಂದುಸಲ ಹೀಗೆ ಮತ್ತೆ ಮತ್ತೆ ಕಾಯಿಸಿ ಈ ರೀತಿ ಮೂರು ಮೂರು ಸಾರಿ ಸಂಮಾರ್ಜನೆ ಮಾಡಿ ಅನಂತರ ಪ್ರಣೀತಾಪಾತ್ರೆಯ ಜಲದಿಂದ ಪ್ರೋಕ್ಷಣಮಾಡಬೇಕು.

೬೯. ಅನಂತರ ಅಗ್ನಿಯಲ್ಲಿ ಸ್ರುವವನ್ನೂ ಕಾಯಿಸಿ ಪ್ರೋಕ್ಷಣಪಾತ್ರೆಯ ಉತ್ತರಭಾಗದಲ್ಲಿ ತಂದಿಟ್ಟುಕೊಂಡು ಅದರ ಮೇಲೆ ದರ್ಭೆಯ ಪವಿತ್ರವನ್ನು ಇರಿಸ ಬೇಕು.

**ಅಂಗುಷ್ಠೇ ದ್ವೇ ಅನಾಮೇ ತು ಗೃಹ್ಣೀಯಾತ್ತತ್ಪವಿತ್ರಕಂ ।**
**ಅಷ್ಟಾಂಗುಲಂ ಮಧ್ಯಕೃತ್ವೋ ಘೃತಂ ತ್ರಿಃ ಪವನಂ ಚರೇತ್ ॥ ೭೦ ॥**

**ಪಾತಾಲೇ ತ್ರಿಸ್ತಥಾಕಾಶೇ ಅವೇಕ್ಷ್ಯಾಜ್ಯಂ ತತಸ್ತ್ರಿಭಿಃ ।**
**ಪ್ರೋಕ್ಷಣ್ಯಾಂ ಚ ತಥಾ ಕುರ್ಯಾದಧಃ ಸಂಪ್ರೋಕ್ಷ್ಯ ದೇಶಿಕಃ ॥ ೭೧ ॥**

**ತತಃ ಪಾಯಸಮಾದಾಯ ಉತ್ಥಾಯ ಚ ಸಮಂತ್ರಕಂ ।**
**ತೂಷ್ಣೀಂ ದದ್ಯಾತ್ತಥಾ ಚಾಗ್ನೌ ಸನ್ನಿವೇಶೇನ ತತ್ವತಃ ॥ ೭೨ ॥**

**ಸಪವಿತ್ರಂ ದಕ್ಷಕರೇ ಗೃಹೀತ್ವಾ ಪ್ರೋಕ್ಷಣೀಯಕಂ ।**
**ಅಷ್ಟಾಂಗುಲೇ ಮೂಲಭಾಗೇ ತಜ್ಜಲೇನ ಈಶಾದಿತಃ ॥ ೭೩ ॥**

---

೭೦. ಅನಂತರ ಎರಡುಕೈಯಿನ ಅಂಗುಷ್ಠ ಅನಾಮಿಕೆ ಎಂಬ ಎರಡು ಬೆರಳುಗಳಿಂದ ಆ ಪವಿತ್ರವನ್ನು ಎರಡು ತುದಿಗಳಲ್ಲೂ ಹಿಡಿದುಕೊಳ್ಳಬೇಕು. ಹೀಗೆ ಹಿಡಿದುಕೊಳ್ಳುವಾಗ ಮಧ್ಯೆ ಎಂಟುಅಂಗುಲ ಪ್ರಮಾಣವಿರಬೇಕು. ಹೀಗೆ ಹಿಡಿದ ಆ ಪವಿತ್ರದಿಂದ ಪಾತ್ರೆಯಲ್ಲಿರುವ ತುಪ್ಪವನ್ನು ಮೂರಾವೃತ್ತಿ ಆಲೋಡನೆಮಾಡಬೇಕು.

೭೧. ಹೀಗೆ ತುಪ್ಪದ ಕೆಳಭಾಗ, ಮಧ್ಯಭಾಗ, ಮೇಲುಭಾಗ ಮೂರರಲ್ಲೂ ಕಲಕಿದೆಯೇ ಎಂದು ತುಪ್ಪವನ್ನು ನೋಡಬೇಕು. ಆಚಾರ್ಯನು ಬಳಿಕ ಯಜಮಾನನು ಹಿಡಿದಿರುವ ಪ್ರೋಕ್ಷಣಪಾತ್ರೆಯ ಜಲದಿಂದ ಕೆಳಗೆಲ್ಲಾ ಪ್ರೋಕ್ಷಣೆಮಾಡಬೇಕು.

೭೨. ಅನಂತರ ಪಾಯಸವನ್ನು ಪಾತ್ರೆಸಹಿತ ಕೈಗೆ ತೆಗೆದುಕೊಂಡು ಎದ್ದು ನಿಂತು ಮಂತ್ರಸಹಿತವಾಗಿಯೋ, ಅಥವಾ ಸುಮ್ಮನೆಯೋ ತತ್ತ್ವತಃ ಸನ್ನಿವೇಶಕ್ಕೆ ಅನುಸಾರವಾಗಿ ಅಗ್ನಿಯಲ್ಲಿ ಆಹುತಿಕೊಡಬೇಕು.

೭೩. ಬಲಕೈಯಲ್ಲಿ ಪವಿತ್ರಸಹಿತವಾಗಿ ಪ್ರೋಕ್ಷಣಪಾತ್ರೆಯನ್ನು ತೆಗೆದುಕೊಂಡು ಅನಂತರ ಮೂಲದಿಂದ ಎಂಟುಅಂಗುಲ ದೂರದಲ್ಲಿ ಈಶಾನ್ಯದಿಕ್ಕು ಮೊದಲುಗೊಂಡು ದಕ್ಷಿಣಾವರ್ತವಾಗಿ (ಪ್ರದಕ್ಷಿಣವಾಗಿ) ಆ ನೀರಿನಿಂದ ಅಗ್ನಿಯಸುತ್ತಲೂ ಪರ್ಯುಕ್ಷಣ (ಚುಮುಕಿಸಬೇಕು) ಮಾಡಬೇಕು.

ಅಗ್ನಿಂ ಪರ್ಯುಕ್ಷಯೇತ್ಪಶ್ಚಾದ್ದಕ್ಷಿಣಾವರ್ತಕೇನ ಚ ।
ಪವಿತ್ರಂ ಚ ಪ್ರಣೀತಾಯಾಂ ನಿಧಾಯ ಪ್ರೋಕ್ಷಣೀಯಕಂ ॥ ೭೪ ॥

ಸಂಯಾವಾರ್ಥಂ ಚ ಭೋ ವಿಪ್ರಾ ಅಗ್ನಿವತ್ತತ್ರ ದೇಶಿಕಃ ।
ಧ್ಯಾಯೇದಗ್ನಿಂ ರಕ್ತವರ್ಣಂ ಸ್ರುವಹಸ್ತಂ ತ್ರಿಬಾಹುಕಂ ॥ ೭೫ ॥

ಕಮಂಡಲುಂ ಪರೇ ಹಸ್ತೇ ತತೋ ದಕ್ಷಕರೇಣ ತು ।
ಸ್ರುವಂ ಗೃಹೀತ್ವಾ ಜುಹುಯಾತ್ತೂಷ್ಣೀಮೇವ ಸಮಾಹಿತಃ ॥ ೭೬ ॥

ಅಂತೇ ಚ ದೇವತೋದ್ದೇಶಂ ಪ್ರಾಜಾಪತ್ಯಂ ಸಮೀರಯನ್ ।
ಪ್ರಣವಾಂತೇನ ಜುಹುಯಾತ್ಸರ್ವತ್ರ ದ್ವಿಜಸತ್ತಮಾಃ ॥ ೭೭ ॥

ವಾಯುಕೋಣಂ ಸಮಾರಭ್ಯ ವಹ್ನಿಕೋಣಾಂತಕೇನ ತು ।
ಅಚ್ಛಿನ್ನೇನ ಘೃತೇನೈವ ಇಂದ್ರಾಯ ತದನಂತರಂ ॥ ೭೮ ॥

---

೭೪. ಅನಂತರ ಆ ಪವಿತ್ರವನ್ನೇ ಪ್ರಣೀತಾಪಾತ್ರೆಯಮೇಲೆ ಇಟ್ಟು ಪ್ರೋಕ್ಷಣ ಪಾತ್ರೆಯ ಮುಂದೆ ಹವಿಸ್ಸಿನ ಸಜ್ಜಿಗೆಯನ್ನು ಇರಿಸಬೇಕು.

೭೫. ಎಲೈ ಬ್ರಾಹ್ಮಣಶ್ರೇಷ್ಠರೇ! ಈ ಹೋಮದಲ್ಲಿ ಅಗ್ನಿಸ್ವರೂಪನಾದ ಆಚಾರ್ಯನು; ಕೆಂಪುಬಣ್ಣವುಳ್ಳವನೂ, ಮೂರು ಬಾಹುಗಳುಳ್ಳವನೂ, ಮತ್ತು ಬಲಗೈಯಲ್ಲಿ ಸ್ರುವ

೭೬. ಮತ್ತೊಂದು ಕೈಯಲ್ಲಿ ಕಮಂಡಲವನ್ನು ಹಿಡಿದಿರುವವನೂ ಆದ ಅಗ್ನಿ ಮೂರ್ತಿಯನ್ನು ಧ್ಯಾನಮಾಡಬೇಕು. ಅನಂತರ ಬಲಗೈಯಲ್ಲಿ ಸ್ರುವವನ್ನು ತಾನು ಹಿಡಿದು ಸಮಾಹಿತಚಿತ್ತನಾಗಿ ಮೌನದಿಂದ ಹೋಮಮಾಡಬೇಕು.

೭೭. ಎಲೈ ಬ್ರಾಹ್ಮಣಶ್ರೇಷ್ಠರೇ! ಕೊನೆಯಲ್ಲಿ ಇಷ್ಟದೇವತೆಯನ್ನು ಉದ್ದೇಶಿಸಿ ಸರ್ವತ್ರ ಓಂಕಾರವು ಅಂತ್ಯದಲ್ಲಿರುವಂತೆ ಪ್ರಾಜಾಪತ್ಯ ಮಂತ್ರವನ್ನು ಪಠಿಸುತ್ತಾ ಹೋಮಮಾಡಬೇಕು

೭೮. ವಾಯುವ್ಯಮೂಲೆಯಿಂದ ಆರಂಭಿಸಿ ಆಗ್ನೇಯ ಮೂಲೆಯವರೆಗೂ ಎಡೆಬಿಡದೆ ತುಪ್ಪದಧಾರೆ ಹನಿಯುವಂತೆ ಒಂದು ಆಘಾರ ಹೋಮವನ್ನು ಮಾಡಿ ಅನಂತರ ಇಂದ್ರನಿಗೆ ಆಜ್ಯಾಹುತಿಯನ್ನು ಕೊಡಬೇಕು.

ಅಗ್ನೀಷೋಮಾತ್ಮಕಂ ಚೈವ ಜುಹುಯಾದ್ರಾಕ್ಷಸಾದಿತಃ ।
ಐಶಾನಕೋಣಪರ್ಯನ್ತಂ ತತೋ ನೈಮಿತ್ತಿಕಂ ಚರೇತ್ ॥ ೭೯ ॥

ಪಶ್ಚಾತ್ಸ್ವಿಷ್ಟಂ ತತೋ ದದ್ಯಾದ್ದದ್ಯಾಚ್ಚ ಮತಿಭಿಸ್ತಥಾ ।
ವಾರುಣಂ ಪಂಚಕಂ ಚೈವ ಕೃತ್ವಾ ಪೂರ್ಣಾಂ ತತೋ ಲಭೇತ್ ॥ ೮೦ ॥

ಉದ್ವಾಹ ಇತಿ ಮಂತ್ರಸ್ಯ ಅಥರ್ವಣಋಷಿಃ ಸ್ಮೃತಃ ।
ಛಂದೋ ದೇವೀ ಚ ಗಾಯತ್ರೀ ದೇವತಂ ಚಾಪಿ ವಾರುಣಂ ॥ ೮೧ ॥

ಪ್ರಕೃತೇ ಯೋಜಯೇಜಯೇನ್ಮಂತ್ರೀ ಸ್ತುತೌ ಚಾಪಿ ನಿಯೋಜಯೇತ್ ।
ತ್ವನ್ನೋಽಗ್ನ ಇತಿಮಂತ್ರಸ್ಯ ಋಷಿರ್ವಾಶಿಷ್ಠಸಂಜ್ಞಕಃ ॥
ಛಂದದಶ್ಚ ಬೃಹತೀ ಖ್ಯಾತಂ ದೇವತಾಗ್ನಿಃ ಪ್ರಕೀರ್ತಿತಃ ॥ ೮೨ ॥

ಇಡೋ ಗತಮಿತಿಮಂತ್ರಸ್ಯ ಋಷಿಃ ಕೋಗೃಹ್ಯಸಂಜ್ಞಕಃ ।
ಛಂದಶ್ಚ ಜಗತೀ ಖ್ಯಾತಂ ದೇವೋ ವಿಷ್ಣುಃ ಪ್ರಕೀರ್ತಿತಃ ॥ ೮೩ ॥

---

೭೯. ಹೀಗೆಯೇ ನೈಋತ್ಯಮೂಲೆಯಿಂದ ಆರಂಭಿಸಿ ಈಶಾನ್ಯ ಮೂಲೆಯವರೆಗೆ ಆಜ್ಯಧಾರೆಹನಿಯುವಂತೆ ಇನ್ನೊಂದು ಆಘಾರಹೋಮಮಾಡಿ ಅಗ್ನೀಷೋಮಾತ್ಮಕನಾದ ಅಗ್ನಿದೇವನಿಗೆ ಆಹುತಿಯನ್ನು ಕೊಟ್ಟು ಅನಂತರ ತತ್ಕಾಲನಿಮಿತ್ತವಾದ ಹೋಮವನ್ನು ಮಾಡಬೇಕು.

೮೦. ಅನಂತರ ಸ್ವಿಷ್ಟಕೃತ್ ಹೋಮದ ಆಹುತಿಗಳನ್ನು ಕೊಡಬೇಕು. ಅದೇ ರೀತಿಯಲ್ಲಿ ವರುಣಸಂಬಂಧವಾದ ಐದುಮಂತ್ರಗಳಿಂದಲೂ ಆಹುತಿಕೊಟ್ಟು, ಆಮೇಲೆ ಪೂರ್ಣಾಹುತಿಯನ್ನು ಕೊಡಬೇಕು.

೮೧. "ಉದ್ವಾಹ" ಎಂಬ ಮಂತ್ರಕ್ಕೆ ಅಥರ್ವಣನು ಋಷಿ, ದೇವೀಗಾಯತ್ರಿ ಎಂಬುದು ಛಂದಸ್ಸು, ವರುಣನು ದೇವತೆ, ಮಂತ್ರಜ್ಞನಾದವನು ಪ್ರಕೃತಹೋಮದಲ್ಲಿಯೂ ಸ್ತೋತ್ರಮಾಡುವ ಸಂದರ್ಭದಲ್ಲಿಯೂ ವಿನಿಯೋಗಿಸಬೇಕು.

೮೨. "ತ್ವನ್ನೋಽಗ್ನ" ಎಂಬ ಮಂತ್ರಕ್ಕೆ ವಸಿಷ್ಠನು ಋಷಿ, ಬೃಹತೀ ಎಂಬುದು ಛಂದಸ್ಸು, ಅಗ್ನಿಯು ದೇವತೆ ಎಂದು ಹೇಳಿದೆ.

೮೩. "ಇಡೋಗತಂ" ಎಂಬ ಮಂತ್ರಕ್ಕೆ ಗೃಹ್ಯಸಂಜ್ಞಕನಾದ ವಾಚಸ್ಪತಿಯು ಋಷಿ, ಜಗತೀ ಎಂಬುದು ಛಂದಸ್ಸು, ವಿಷ್ಣುವು ದೇವತೆ ಎಂದು ಹೇಳಲ್ಪಟ್ಟಿದೆ

**ಉದ್ವರ್ತನ ಇತಿ ಮಂತ್ರಸ್ಯ ಋಷಿಃ ಕೋನು ಪ್ರಕೀರ್ತಿತಃ ।**
**ಛಂದೋ ದೇವೀ ಚ ಗಾಯತ್ರೀ ವರುಣಶ್ಚಾಧಿದೇವತಾ ॥ ೪೪ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ ದ್ವಿತೀಯ ಭಾಗೇ ಚತುರ್ದಶೋಽಧ್ಯಾಯಃ**



---

೪೪. " ಉದ್ವರ್ತನ " ಎಂಬ ಮಂತ್ರಕ್ಕೆ ಅನುಪೂರ್ವಕ ಗೃಹ್ಯಸಂಜ್ಞಕನಾದವನು ಋಷಿ, ದೇವೀಗಾಯತ್ರೀ ಎಂಬುದು ಛಂದಸ್ಸು, ವರುಣನು ಅಧಿದೇವತೆ ಎಂದು ಹೇಳಿದೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ದ್ವಿತೀಯಭಾಗದಲ್ಲಿ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ದ್ವಿತೀಯಭಾಗೇ

## ಪಂಚದಶೋಽಧ್ಯಾಯಃ

॥ ಸೂತ ಉವಾಚ ॥

ಮಖೇ ಸರ್ವತ್ರ ಬ್ರಹ್ಮಾಣಮೃತ್ವಿಜಂ ವರಯೇದಥ ।
ಕುಶಕಂಡೀಂ ಸ್ವಗೃಹ್ಯೇನ ಕೃತ್ವಾಗ್ನಿಂ ಚಾರ್ಚಯೇತ್ತತಃ ॥ ೧ ॥

ಆಘಾರಾವಾಜ್ಯಭಾಗೌ ತು ಮಹಾವ್ಯಾಹೃತಯಸ್ತ್ರಯಃ ।
ಸರ್ವಪ್ರಾಯಶ್ಚಿತ್ತಸಂಜ್ಞಂ ಪ್ರಾಜಾಪತ್ಯಂ ಚ ಸ್ವಿಷ್ಟಕೃತ್ ॥ ೨ ॥

ಏತನ್ನಿತ್ಯಂ ಹಿ ಸರ್ವತ್ರ ಹೋಮೋ ಕರ್ಮಣಿ ನಿರ್ದಿಶೇತ್ ।
ಪ್ರಾಜಾಪತ್ಯೇ ಚ ಇಂದ್ರಾಯ ಏತಾವಾಘಾರಸಂಜ್ಞಕೌ ॥ ೩ ॥

---

## ಹದಿನೈದನೆಯ ಅಧ್ಯಾಯ

೧. ಸೂತರು ಶೌನಕಾದಿಋಷಿಗಳಿಗೆ ಹೇಳುತ್ತಾರೆ—ಎಲ್ಲಾ ಯಜ್ಞಗಳಿಗೂ ಬ್ರಹ್ಮನನ್ನೂ, ಋತ್ವಿಜನನ್ನೂ ನಿಯಮಿಸಿಕೊಳ್ಳಬೇಕು, ಅಗ್ನಿಕುಂಡವನ್ನು ಪರಿಸ್ತರಣದ ಸಮೇತವಾಗಿರುವಂತೆ ಮಾಡಿ ತನ್ನ ಶಾಖೆಯಲ್ಲಿ ಉಕ್ತವಾದ ಪ್ರಕಾರ ಅಗ್ನಿಯನ್ನು ಪ್ರತಿಷ್ಠೆಮಾಡಿ ಪೂಜಿಸಬೇಕು.

೨-೩. ಗ್ರಹಯಜ್ಞಾದಿ ಎಲ್ಲ ಹೋಮಗಳನ್ನು ಮಾಡುವಾಗಲೂ ಎರಡು ಆಘಾರಹೋಮಗಳು, ಆಜ್ಯಭಾಗ ಹೋಮ, ಮೂರು ಮಹಾವ್ಯಾಹೃತಿ ಹೋಮಗಳು ಸರ್ವಪ್ರಾಯಶ್ಚಿತ್ತಹೋಮ, ಪ್ರಾಜಾಪತ್ಯಹೋಮ ಸ್ವಿಷ್ಟಕೃತ್‌ಹೋಮ ಇಷ್ಟನ್ನೂ ನಿತ್ಯವಾಗಿ ಮಾಡಬೇಕೆಂದು ನಿರ್ದೇಶಮಾಡಿದೆ. ಪ್ರಜಾಪತಯೇಸ್ವಾಹಾ, ಇಂದ್ರಾಯ ಸ್ವಾಹಾ ಎಂಬಿವೆರಡೂ ಆಘಾರಹೋಮಗಳು.

**ಅಗ್ನಯೇ ಚೈವ ಸೋಮಾಯ ಆಜ್ಯಭಾಗೌ ಪ್ರಕೀರ್ತಿತೌ ।**
**ಭೂರ್ಭುವಸ್ಸ್ವಸ್ತ್ರಯಶ್ಚೈವ ಮಹಾವ್ಯಾಹೃತಯಃ ಸ್ಮೃತಾಃ ॥ ೪ ॥**

**ಅಯಾಶ್ಚಾಗ್ನೇ ಇತಿ ತಥಾ ಯೇ ತೇ ಶತಮನುತ್ತಮಂ ।**
**ಸರ್ವಪ್ರಾಯಶ್ಚಿತ್ತಸಂಜ್ಞಾ ಏತೇ ವೈ ಪಂಚಮಂತ್ರಕಾಃ ॥ ೫ ॥**

**ಪ್ರಾಜಾಪತ್ಯಾಹುತಿಶ್ಚೈಕಾ ಸ್ವಿಷ್ಟಕೃಚ್ಚಾಪರಾ ಸ್ಮೃತಾ ।**
**ಚತುರ್ದಶೈತಾಹುತಯೋ ಹೋತವ್ಯಾ ನಿತ್ಯಸಂಜ್ಞಕಾಃ ॥ ೬ ॥**

**ಕೃತ್ವಾ ದೌ ದೇವತೋದ್ದೇಶಂ ಹೋಮಂ ಪಶ್ಚಾತ್ಸಮಾಚರೇತ್ ।**
**ಸೋಮಪಾಯೇ ಚ ಗೋಯಾಗೇ ನರಮೇಧಾಶ್ವಮೇಧಯೋಃ ॥ ೭ ॥**

**ಅನ್ಯತ್ರ ವಿಪರೀತೇನ ಸ್ವಾಹಾನ್ತೇನ ಹುನೇದ್ಬುಧಃ ।**
**ನೈಮಿತ್ತಿಕಂ ವಿನಾ ನಿತ್ಯಂ ವಿಫಲಂ ಯಾತಿ ನಾನ್ಯಥಾ ॥ ೮ ॥**

---

೪. ಅಗ್ನಯೇಸ್ವಾಹಾ, ಸೋಮಾಯಸ್ವಾಹಾ ಎಂಬ ಎರಡು ಹೋಮಗಳನ್ನೂ ಅಗ್ನಿಗೆ ಚಕ್ಷುಸ್ಸನ್ನು ಉಂಟುಮಾಡುವ ಚಾಕ್ಷುಷೀ ಹೋಮ ಅಥವಾ ಆಜ್ಯಭಾಗ ಹೋಮಗಳೆನ್ನುವರು. ಭೂರಗ್ನಯೇ ಭುವೋವಾಯವೇ ಸ್ವರಾದಿತ್ಯಾಯ ಎಂಬ ಮೂರೂ ಮಹಾವ್ಯಾಹೃತಿ ಹೋಮಗಳು.

೫. ಆಯಾಶ್ಚಾಗ್ನೇ ಎಂಬುದೇ ಮೊದಲಾದ ಶ್ರೇಷ್ಠಗಳಾದ ಐದು ಮಂತ್ರಗಳು ಸರ್ವಪ್ರಾಯಶ್ಚಿತ್ತ ಸಂಜ್ಞಕಹೋಮಗಳೆನಿಸಿಕೊಳ್ಳುತ್ತವೆ.

೬. ಪ್ರಾಜಾಪತ್ಯಹೋಮ ಒಂದು, ಸ್ವಿಷ್ಟಕೃತ್ ಹೋಮ ಒಂದು, ಈ ರೀತಿ ಒಟ್ಟು ಹದಿನಾಲ್ಕು ಆಹುತಿಹೋಮಗಳು ಸಕಲ ಅಗ್ನಿಮುಖಗಳಲ್ಲಿಯೂ ನಿತ್ಯವಾಗಿ ಮಾಡಬೇಕಾದುವು.

೭. ಇವುಗಳ ಪ್ರಾರಂಭದಲ್ಲಿ ಆಯಾ ದೇವತೆಗಳನ್ನು ಉದ್ದೇಶಿಸಿ ಅನಂತರ ಹೋಮಮಾಡಬೇಕು. ನರಮೇಧ, ಅಶ್ವಮೇಧ ಇವೆರಡು ಹೋಮಗಳಲ್ಲಿ ಹೊರತು ಸೋಮಯಾಗ, ಗೋಮೇಧಯಾಗ ಇವುಗಳನ್ನು ಮಾಡುವಾಗ,

೮ ತಿಳಿದವನು ಸ್ವಾಹಾ ಎಂಬ ಶಬ್ದವು ಕಡೆಯಲ್ಲಿ ಬರುವಂತೆ ಮಂತ್ರೋಚ್ಚಾರಮಾಡಿ ಹೋಮಮಾಡಬೇಕು. ಉಳಿದಕಡೆ ಎಂದರೆ ನರಮೇಧ, ಅಶ್ವಮೇಧಗಳಲ್ಲಿ ಇದಕ್ಕೆ ವ್ಯತಿರಿಕ್ತವಾಗಿ ಮಾಡಬೇಕು. ನಿತ್ಯಕರ್ಮಗಳನ್ನು ಬಿಟ್ಟು ನೈಮಿತ್ತಿಕ

**ನಿತ್ಯಂ ವರ್ಜ್ಯಂ ಶತಾರ್ಧೇ ನ ವೈಶ್ವದೇವೇ ತಥೈವ ಚ ।**
**ತ್ರ್ಯಹಸಾಧ್ಯಾದಿಯಾಗೇಷು ನಿದೇಶಂ ಶೃಣುತ ದ್ವಿಜಾಃ ॥ ೯ ॥**

**ಏಕಾಹೇ ವಾಘಾರಾವಾಜ್ಯೌ ಕೃತ್ವಾ ನೈಮಿತ್ತಿಕೀಃ ಕೃತೀಃ ।**
**ಸಮಂ ಸ್ವಿಷ್ಟಕೃತಂ ವಿದ್ಯಾದ್ವ್ಯಾಹೃತ್ಯಾದ್ಯಾಸ್ತತಃ ಪರಂ ॥ ೧೦ ॥**

**ವಿಶೇಷತಸ್ತ್ರ್ಯಹಾದೌ ತು ಆಘಾರಾವಾಜ್ಯಪೂರ್ವಕಂ ।**
**ಪಶ್ಚಾನ್ನೈಮಿತ್ತಿಕಂ ಕುರ್ಯಾತ್ಸಮಾಪ್ತಿದಿವಸೇऽಪ್ಯಥ ॥ ೧೧ ॥**

**ಆಘಾರಾವಾಜ್ಯಪೂರ್ವೇಣ ತತೋ ನೈಮಿತ್ತಿಕಂ ಚರೇತ್ ।**
**ಸ್ವಿಷ್ಟಕೃದ್ವ್ಯಾಹೃತಿಶ್ಚೈವ ವಾರುಣಾದ್ಯಾಸ್ತಥಾ ಹಿ ಷಟ್ ॥ ೧೨ ॥**

---

ಕರ್ಮಗಳನ್ನು ಆಚರಿಸಿದರೆ ಅವು ನಿಷ್ಫಲವೇ ಆಗುವುದು ಆದುದರಿಂದ ಯಾವಾಗಲೂ ನಿತ್ಯಕರ್ಮ ಮಾಡಿದ ಅನಂತರವೇ ನೈಮಿತ್ತಿಕಕರ್ಮ ಮಾಡಬೇಕು.

೯. ಶತಾರ್ಧಹೋಮ (ಆಜ್ಯಾಹುತಿ) ವೈಶ್ವದೇವಹೋಮ ಇವುಗಳಲ್ಲೂ ನಿತ್ಯಕರ್ಮವನ್ನು ಬಿಡತಕ್ಕದ್ದಲ್ಲ. ಮೂರುದಿವಸ ಆಚರಿಸಬೇಕಾದ ಅಗ್ನಿಷ್ಟೋಮ ಸೋಮಯಾಗ ಇವುಗಳಲ್ಲಿ ಮಾಡಬೇಕಾದ ನಿಯಮವನ್ನು ಹೇಳುತ್ತೇನೆ. ಕೇಳಿ ; ಬ್ರಾಹ್ಮಣರೇ !

೧೦. ಒಂದನೆಯ ದಿವಸ ಆಘಾರಹೋಮ, ಆಜ್ಯಹೋಮಗಳನ್ನು ಮಾಡಿ ; ಅನಂತರ ನೈಮಿತ್ತಿಕ ಯಾಗಕಾರ್ಯಗಳನ್ನು ಮಾಡಬೇಕು. ಯಾವಾಗಲೂ ವ್ಯಾಹೃತಿ ಹೋಮಗಳನ್ನು ಮಾಡಿದ ಒಡನೆಯೇ ಸ್ವಿಷ್ಟಕೃತ್ ಹೋಮವನ್ನು ಮಾಡತಕ್ಕದ್ದೆಂದು ತಿಳಿಯಬೇಕು.

೧೧. ಮೂರುದಿನ ನಡೆಯಬೇಕಾದ ಹೋಮದಲ್ಲಿ ಹೋಮದ್ರವ್ಯವು ಆಜ್ಯವಾಗಿರುವುದರಿಂದ ವಿಶೇಷವಾಗಿ ಆಘಾರಹೋಮಗಳನ್ನು ಆಜ್ಯಪೂರ್ವಕವಾಗಿಯೇ ಮಾಡಬೇಕು. ಅನಂತರವೂ ಸಮಾಪ್ತಿದಿವಸದಲ್ಲಿಯೂ ನೈಮಿತ್ತಿಕಹೋಮವನ್ನು ಮಾಡಬೇಕು.

೧೨. ಆಘಾರಹೋಮಗಳನ್ನು ಆಜ್ಯಪೂರ್ವಕವಾಗಿ ಮಾಡಿ, ಅನಂತರ ನೈಮಿತ್ತಿಕ ಹೋಮಮಾಡಬೇಕು. ಸ್ವಿಷ್ಟಕೃತ್‌ಹೋಮ, ವ್ಯಾಹೃತಿಹೋಮಗಳು, ವರುಣಾದಿಯಾದ ಆರುಹೋಮಗಳು ಇವುಗಳನ್ನು ಎರಡನೆಯದಿನ ಮಾಡಬಹುದು.

**ದ್ವಿಜಾತಿಃ ಪತಿತೋ ಯತ್ರ ದ್ವಿತ್ರಿಕಂ ಚ ಚತುಶ್ಚತುಃ ।**
**ಏಕಸ್ಮಿನ್ದಿವಸೇ ಕುರ್ಯಾತ್ಹೋಮಯಾಗೇಚಶ್ಯೈಶವೇಕಾ ॥ ೧೩ ॥**

**ದ್ವಿಜಾತೀನಾಂ ವಿವಾಹೇ ತು ನೈತ್ಯಿಕಂ ಪ್ರಥಮಂ ಭವೇತ್ ।**
**ಏಕಸ್ಮಿನ್ದಿವಸೇ ಕುರ್ಯಾದಗ್ನಿಕಾರ್ಯಂ ಪೃಥಕ್ಪೃಥಕ್ ॥ ೧೪ ॥**

**ದದ್ಯಾದೇಕಂ ಚ ನಿತ್ಯಂ ಚ ಪೃಥಙ್ನಿತ್ಯಂ ಚ ನಾಚರೇತ್ ।**
**ದ್ವಿಜಾತಿಃ ಪತಿತೋ ಯತ್ರ ದ್ವಿತ್ರಿಕಂ ಚ ಚತುಶ್ಚತುಃ ॥ ೧೫ ॥**

**ಏಕಸ್ಮಿನ್‌ದಿವಸೇ ಕುರ್ಯಾತ್ತತ್ರಾಪಿ ನೈತ್ತಿಕಂ ತ್ಯಜೇತ್ ।**
**ಹೋಮೇ ಬ್ರಹ್ಮಾ ಸ್ರುಕೇ ವಿಷ್ಣುಃ ಸ್ರುವೇ ಚೈವ ಮಹೇಶ್ವರಃ ॥ ೧೬ ॥**

---

೧೩. ಬ್ರಾಹ್ಮಣಜಾತಿಯಲ್ಲಿದ್ದು ಪತಿತನಾದವನಿಗೆ ಪ್ರಾಯಶ್ಚಿತ್ತಮಾಡುವಾಗ ವ್ಯಾಹೃತಿಹೋಮ, ಸ್ವಿಷ್ಟಕೃತ್ ಹೋಮಗಳನ್ನು ಎರಡೆರಡು ಅಥವಾ ಮೂರುಮೂರು ಸಾರಿಯೂ, ವರುಣಾದಿ ಆರುಮಂತ್ರಪೂರ್ವಕವಾಗಿ ನಾಲ್ಕುನಾಲ್ಕು ಸಾರಿಯೂ ಹೋಮಮಾಡಬೇಕು. ಸೋಮಯಾಗದಲ್ಲಿಯೂ,ನಾಮಕರಣದಲ್ಲಿಯೂಈ ಹೋಮ ವನ್ನು ಕ್ಲಪ್ತಸಂಖ್ಯಾ ದಿನದಲ್ಲಿಯೇ ಮಾಡಬೇಕು.

೧೪. ಬ್ರಾಹ್ಮಣಾದಿಗಳ ವಿವಾಹದಲ್ಲಿ ನಿತ್ಯಹೋಮವನ್ನು ಮೊದಲೇ ಮಾಡಬೇಕು. ಅಂಥ ದಿನದಲ್ಲಿ ಹೀಗೆ ಮಾಡುವಾಗ ವಧೂವರಪಕ್ಷದವರು ತಾವು ಮಾಡುವ ಔಪಾಸನಾದಿ ಅಗ್ನಿಕಾರ್ಯಗಳನ್ನು ಪ್ರತ್ಯೇಕವಾಗಿ ಮಾಡಿಕೊಳ್ಳಬೇಕು.

೧೫. ಮೊದಲು ನಿತ್ಯಹೋಮವನ್ನು ಯಾವ ಅಗ್ನಿಯಲ್ಲಿ ಮಾಡಿರುತ್ತೇವೆಯೋ ಅದೇ ಅಗ್ನಿಯಲ್ಲಿ ನಿತ್ಯಹೋಮಾದಿಗಳನ್ನು ಮಾಡಬೇಕೇ ವಿನಾ ಬೇರೆ ಅಗ್ನಿಯಲ್ಲಿ ಮಾಡಬಾರದು. ಬ್ರಾಹ್ಮಣ ಜಾತಿಯಲ್ಲಿದ್ದು ಪತಿತನಾದವನಿಗೆ ಪ್ರಾಯಶ್ಚಿತ್ತ ಮಾಡುವಾಗ ನಿತ್ಯಕರ್ಮ ಮಾಡಿದ ಅಗ್ನಿಯಲ್ಲೇ ವ್ಯಾಹೃತಿಹೋಮ ಸ್ವಿಷ್ಟಕೃತ್ ಹೋಮಗಳನ್ನು ಎರಡೆರಡು ಅಥವಾ ಮೂರುಮೂರು ಸಲವೂ, ವರುಣಾದಿ ಆರುಮಂತ್ರವನ್ನು ಉಚ್ಚರಿಸಿ ನಾಲ್ಕುನಾಲ್ಕು ಸಾರಿಯೂ ಹೋಮಮಾಡಬೇಕು.

೧೬. ಒಂದೇದಿನ ಮಾಡತಕ್ಕ ಯಾಗದಲ್ಲಿ ನಿತ್ಯಹೋಮಗಳನ್ನು ಮಾಡಿ ನೈಮಿತ್ತಿಕ ಹೋಮವನ್ನೂ ಮಾಡಬೇಕು.

ಅಜಸ್ಯಾನಿಯಮೇ ಚೇಂದ್ರೋsಧಿಶ್ರಯಣಂ ವಿವಸ್ವತಃ ।
ಪರ್ಯಗ್ನಿಕರಣೇ ಚೈವ ಉದ್ವಾಹೇ ಮಾತರಃ ಸ್ಮೃತಾಃ ॥ ೧೭ ॥

ಚಂದ್ರಾದಿತ್ಯೌ ಚೋತ್ಪವನೇ ವೀಕ್ಷಣೇ ಚ ದಿಶಸ್ತಥಾ ।
ಪ್ರೋಕ್ಷಣ್ಯಾಂ ಸ್ಥಾಪನೇ ದುರ್ಗಾ ಇಮೇ ಲಕ್ಷ್ಮೀ ಪ್ರತಿಷ್ಠಿತಾ ॥ ೧೮ ॥

ಹೋಮಂ ಕುರ್ಯಾದ್ದ್ವಿಜಶ್ರೇಷ್ಠಾ ವಿಧಿಂ ಕುರ್ಯಾತ್ಸಮಾಹಿತಃ ।
ಏತೇಷು ದೇವತಾಃ ಪ್ರೋಕ್ತಾ ದ್ವಿಜಾತೀನಾಂ ಹಿತಾಯ ಚ ॥ ೧೯ ॥

ಯಜೇತ್ಸ್ವಪಶುಬದ್ಧೇಷು ಸಂಸ್ಕಾರೇ ಚೈವ ಕರ್ಮಣಿ ।
ದೇವಾಃ ಸರ್ವಾಶ್ಚ ಜ್ಞಾತವ್ಯಾ ಏತಾ ಯಜ್ಞೇ ಸಮಾಹಿತೈಃ ॥ ೨೦ ॥

---

೧೭. ಹೋಮಕರ್ಮದಲ್ಲಿ ಬ್ರಹ್ಮನೇ ದೇವತೆ, ಸ್ರುಕ್ಕಿಗೆ ವಿಷ್ಣುವು ದೇವತೆ, ಸ್ರುವಕ್ಕೆ ಮಹೇಶ್ವರನು ದೇವತೆ, ಬ್ರಹ್ಮನು ದೇವತೆಯೆಂಬುದು ನಿಯಮವಿಲ್ಲದ ಕಡೆ ಇಂದ್ರನು ದೇವತೆಯಾಗಬಹುದು, ಅಧಿಶ್ರಯಣಕ್ಕೆ ಸೂರ್ಯನು ದೇವತೆ, ಪರ್ಯಗ್ನಿಕರಣದಲ್ಲಿಯೂ, ವಿವಾಹಕಾರ್ಯದಲ್ಲಿಯೂ ಸಪ್ತಮಾತೃಕೆಯರು ದೇವತೆಗಳೆಂದು ಉಕ್ತವಾಗಿದೆ.

೧೮. ಆಜ್ಯೋತ್ಪವನ (ತುಪ್ಪವನ್ನು ಆಲೋಡಿಸುವುದ) ಕ್ಕೆ ಚಂದ್ರನು ದೇವತೆ, ದಿಕ್ಕುಗಳ ವೀಕ್ಷಣೆಗೆ ಸೂರ್ಯನು ದೇವತೆ, ಪ್ರೋಕ್ಷಣಾಕಾರ್ಯಕ್ಕೆ ದುರ್ಗೆಯು ದೇವತೆ, ಸ್ಥಾಪನಾಕಾರ್ಯಕ್ಕೆ ಲಕ್ಷ್ಮಿಯು ದೇವತೆ ಎಂದು ನಿಶ್ಚಿತವಾಗಿದ್ದಾರೆ.

೧೯. ಅಯ್ಯಾ ದ್ವಿಜಶ್ರೇಷ್ಠರೇ! ದ್ವಿಜರ ಹಿತಕ್ಕಾಗಿ ಇವುಗಳಲ್ಲಿ ದೇವತಾಸ್ಥಿತಿಯನ್ನು ಹೇಳಿದುದಾಯಿತು. ಮಾನವನು ಚಿತ್ತಶುದ್ಧಿಯುಳ್ಳವನಾಗಿ ಈ ವಿಚಾರವನ್ನು ಅರಿತು ವಿಧಿಯನ್ನು ಅನುಸರಿಸಿ ಹೋಮಮಾಡಬೇಕು.

೨೦. ನಿರೂಢ ಪಶುಬಂಧಯಾಗದಲ್ಲಿಯೂ, ಪೂರ್ಣಮಾಸೇಷ್ಟಿ, ದರ್ಶೇಷ್ಟಿ ಮುಂತಾದ ಹೋಮಗಳಲ್ಲಿಯೂ ಆಹೂತರಾಗುವ ಎಲ್ಲ ದೇವತೆಗಳ ಸ್ವರೂಪವನ್ನು ಸ್ಥಿರಚಿತ್ತದಿಂದ ತಿಳಿದಿರಬೇಕು.

**ಅಧಿದೈವೇನ ಜಾನೀಯಾತ್ಕರವಲ್ಯಾಂ ಫಲಂ ಯತಃ ।**
**ತಸ್ಮಾತ್ಸರ್ವಪ್ರಯತ್ನೇನ ದೇವತಾಮಥ ವಿನ್ಯಸೇತ್ ॥ ೨೧ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ ದ್ವಿತೀಯಭಾಗೇ ಪಂಚದಶೋಽಧ್ಯಾಯಃ**



---

೨೧. ಅಂಗೈಯಲ್ಲಿರುವ ಬದರೀಫಲ ಸ್ವರೂಪವನ್ನು ಯಾವ ರೀತಿ ಸ್ಪಷ್ಟವಾಗಿ ತಿಳಿಯುವೆವೋ ಅದೇ ರೀತಿ ಅದರ ಅಧಿದೇವತಾಸ್ವರೂಪವನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ಆದುದರಿಂದ ಸರ್ವಪ್ರಯತ್ನದಿಂದಲೂ ದೇವತೆ ಅಧಿದೇವತೆಗಳನ್ನು ಸ್ಪಷ್ಟವಾಗಿ ತಿಳಿದು ಸ್ಥಾಪಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಎರಡನೆಯ ಭಾಗದಲ್ಲಿ ಹದಿನೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ದ್ವಿತೀಯಭಾಗೇ
## ಷೋಡಶೋಽಧ್ಯಾಯಃ

॥ ಸೂತ ಉವಾಚ ॥

ಅಥ ವಕ್ಷ್ಯಾಮಿ ಸಚ್ಛ್ರೇಷ್ಠಾ ದೇವಾನಾಂ ಧ್ಯಾನಮುತ್ತಮಂ ।
ಅಸ್ಯ ಯಜ್ಞೇ ಪರಿಜ್ಞಾನಾಜ್ಜಿಹ್ವಾಸಮ್ಯಕ್ಫಲಪ್ರದಾ ॥ ೧ ॥

ಹಿರಣ್ಯವರ್ಣಾಂ ಪ್ರಥಮಾಂ ವಹ್ನಿಜಿಹ್ವಾಂ ಮಹಾದ್ಯುತಿಂ ।
ಕನಕಾಢ್ಯಕರಾಂ ದೇವೀಂ ಹಿರಣ್ಯಾಖ್ಯೇಷ್ಟಸಿದ್ಧಯೇ ॥ ೨ ॥

---

## ಹದಿನಾರನೆಯ ಅಧ್ಯಾಯ

೧. ಸೂತರು ಶೌನಕಾದಿಗಳನ್ನು ಕುರಿತು ಮುಂದುವರಿಸಿ ಹೇಳುತ್ತಾರೆ—ಇನ್ನು ಮುಂದೆ ದೇವತೆಗಳನ್ನು ಧ್ಯಾನಮಾಡುವ ಉತ್ತಮಕ್ರಮವನ್ನು ಹೇಳುತ್ತೇನೆ ಕೇಳಿ; ಯಜ್ಞದಲ್ಲಿ ಅಗ್ನಿಜಿಹ್ವಾ ಪರಿಜ್ಞಾನವುಂಟಾದರೆ ಯಜ್ಞದಫಲವು ಸಮಗ್ರವಾಗಿ ಲಭಿಸುವುದು.

೨. ಮೊದಲನೆಯ ಅಗ್ನಿಜಿಹ್ವೆಯು ಚಿನ್ನದ ಬಣ್ಣವಾಗಿರುವಳು. ಆಕೆ ಮಹಾಕಾಂತಿಯುಕ್ತಳೂ, ಸುವರ್ಣದಿಂದ ಪೂರ್ಣವಾದ ಹಸ್ತವುಳ್ಳವಳೂ ಹಿರಣ್ಯಜಿಹ್ವೆ ಎಂದು ಹೆಸರುಳ್ಳವಳೂ ಆಗಿರುತ್ತಾಳೆ. ನಮ್ಮ ಇಷ್ಟಾರ್ಥಸಿದ್ಧಿಯಾಗುವುದಕ್ಕಾಗಿ ಇಂತಹ ಪ್ರಥಮಜಿಹ್ವೆಯನ್ನು ಧ್ಯಾನಮಾಡಬೇಕು.

**ಕನಕಾಂ ದ್ವಿಭುಜಾಂ ಶುಕ್ಲಾಂ ಹಸ್ತಾಭ್ಯಾಂ ದರ್ಭಸಂಯುತಾಂ ।**
**ಕಮಂಡಲುಂ ಚ ಬಿಭ್ರಾಣಾಂ ನುಮಃ ಸಾಧಕಸಿದ್ಧಿದಾಂ ॥ ೩ ॥**

**ಉದ್ಯದಿನ್ದುನಿಭಾಂ ರಕ್ತಾಂ ಚತುರ್ಭಿರ್ಭುಜಪಲ್ಲವೈಃ ।**
**ಶಂಖಚಕ್ರಾಭಯವರಾನ್ದಧತೀಂ ಪ್ರಣಮಾಮ್ಯಹಂ ॥ ೪ ॥**

**ಭಿನ್ನಾಂಜನಚಯಪ್ರಖ್ಯಾಂ ಸ್ವರ್ಣಕುಂಭಂ ತು ವಾಮತಃ ।**
**ದಕ್ಷಿಣೇನ ವರಾ ರಕ್ತಾಂ ಧಾರಯಂತೀಂ ನಮಾಮ್ಯಹಂ ॥ ೫ ॥**

**ಸುಪ್ರಭಾಮಂಡಲಾಭಾ ಚ ಕರಾಭ್ಯಾಂ ತತ್ಕೃತಾಂಜಲಿಃ ।**
**ಪದ್ಮಾಸನಸ್ಥಾ ಕೌಶೇಯವಸನಾ ಮೇ ಪ್ರಸೀದತು ॥ ೬ ॥**

---

೩. ಎರಡುಭುಜಗಳುಳ್ಳವಳೂ, ಶುಕ್ಲವರ್ಣದ ದೇಹವುಳ್ಳವಳೂ, ಎರಡು ಕೈಗಳಲ್ಲಿಯೂ ದರ್ಭೆಯನ್ನು ಹಿಡಿದಿರುವವಳೂ, ಕಮಂಡಲುವನ್ನು ಧರಿಸಿದವಳೂ ಸಾಧಕರಿಗೆ ಸಿದ್ಧಿಯನ್ನುಂಟುಮಾಡುವವಳೂ ಆದ ಕನಕಾ ಎಂಬ ಹೆಸರುಳ್ಳ ಎರಡನೆಯ ಅಗ್ನಿಜಿಹ್ವಾ ದೇವಿಯನ್ನು ನಮಸ್ಕರಿಸುತ್ತೇನೆ.

೪. ಚಂದ್ರನಂತೆ ಪ್ರಕಾಶಮಾನವಾದ ಕಾಂತಿಯುಳ್ಳವಳೂ, ಪಲ್ಲವಸದೃಶವಾದ ನಾಲ್ಕುಭುಜಗಳುಳ್ಳವಳೂ, ಎರಡುಕೈಗಳಲ್ಲಿ ಶಂಖಚಕ್ರಗಳನ್ನು ಧರಿಸಿದವಳೂ, ಮತ್ತೆರಡರಲ್ಲಿ ಅಭಯಮುದ್ರೆ ವರದಮುದ್ರೆಗಳನ್ನುಳ್ಳವಳೂ ಆದ ತೃತೀಯಾಗ್ನಿಜಿಹ್ವಾದೇವಿಯನ್ನು ನಮಸ್ಕರಿಸುತ್ತೇನೆ

೫. ಕಾಡಿಗೆಯ ರಾಶಿಯಂತೆ ಮೈಬಣ್ಣವುಳ್ಳವಳೂ, ಎಡಗೈಯಲ್ಲಿ ಚಿನ್ನದ ಕಲಶವನ್ನು ಧರಿಸಿದವಳೂ, ವರದಮುದ್ರಾಯುಕ್ತವಾಗಿ ಕೆಂಪಾದ ಬಲಗೈಯುಳ್ಳವಳೂ ಆದ ನಾಲ್ಕನೆಯ ಅಗ್ನಿಜಿಹ್ವಾದೇವಿಯನ್ನು ನಮಸ್ಕರಿಸುತ್ತೇನೆ.

೬. ಪದ್ಮಾಸನದಲ್ಲಿ ಕುಳಿತು ರೇಶ್ಮೆಯಬಟ್ಟೆಯನ್ನು ಧರಿಸಿಕೊಂಡು, ಪ್ರಭಾಮಂಡಲದಂತೆ ಕಾಂತಿಯುಳ್ಳವಳಾಗಿ ಎರಡು ಕೈಗಳಿಂದಲೂ ಬೊಗಸೆಯೊಡ್ಡಿಕೊಂಡಿರುವ ಐದನೆಯ ಅಗ್ನಿಜಿಹ್ವಾದೇವಿಯು ನನಗೆ ಪ್ರಸನ್ನೆಯಾಗಲಿ.

ಜಪಾಕುಸುಮಸಂಕಾಶಾ ಬಹುರೂಪಾ ಸಖೀ ಮಮ ।
ಶುಭದಾ ಸ್ಯಾದ್ಭುಜೈಃ ಶುಭ್ರಾ ಸಹಸ್ರಂ ದಧತೀ ಪರಾ ॥ ೭ ॥

ನೀಲೋತ್ಪಲನಿಭೇ ದೇವಿ ವಹ್ನಿವರ್ಣಪರಾಭವೇ ।
ಜಪಾಪುಷ್ಪಧರೇ ನಿತ್ಯಂ ಸತೀರೂಪೇ ಪ್ರಸೀದ ಮೇ ॥ ೮ ॥

ಮೂಲೇನ ವೀಕ್ಷಯೇತ್ಸ್ಥಾನಂ ಮಂತ್ರೇಣ ಖನನಂ ಮತಂ ।
ತ್ರಿಸೂತ್ರೀಕರಣಂ ಕುರ್ಯಾಚ್ಚತುಃಸೂತ್ರಂ ನಿಪಾತಯೇತ್ ॥ ೯ ॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ ದ್ವಿತೀಯಭಾಗೇ ಷೋಡಶೋಽಧ್ಯಾಯಃ



---

೭. ದಾಸವಾಳದಹೂವಿನಂತೆ ಕಾಂತಿಯುಳ್ಳವಳೂ, ಅನೇಕ ರೂಪವುಳ್ಳವಳೂ, ಶುಭ್ರವಾದ ಸಹಸ್ರಭುಜಗಳಿಂದ ಕೂಡಿದವಳೂ ಆದ ಆರನೇ ಅಗ್ನಿಜಿಹ್ವಾದೇವಿಯು ನನಗೆ ಸ್ನೇಹಪೂರ್ವಕವಾಗಿ ಮಂಗಳವನ್ನುಂಟುಮಾಡಲಿ.

೮. ಕನ್ನೈದಿಲೆಯಂತೆ ಕಾಂತಿಯುಳ್ಳವಳಾಗಿ ಅಗ್ನಿಯ ಕಾಂತಿಯನ್ನು ತಿರಸ್ಕರಿಸುವಂತಹ ಪ್ರಕಾಶವುಳ್ಳವಳೂ, ನಿತ್ಯವೂ ದಾಸವಾಳದ ಹೂವನ್ನು ಧರಿಸುವಳೂ, ಸತೀರೂಪಿಣಿಯೂ ಆದ ಏಳನೆಯ ಅಗ್ನಿಜಿಹ್ವಾ ದೇವಿಯೇ! ನನಗೆ ಪ್ರಸನ್ನೆಯಾಗು ಎಂದು ಪ್ರಾರ್ಥಿಸಬೇಕು.

೯. ಬಳಿಕ ಸ್ಥಂಡಿಲವನ್ನು ಪ್ರಣವಪೂರ್ವಕ ದರ್ಶನಮಾಡಬೇಕು. ಮತ್ತು ಯಜ್ಞೀಯವೃಕ್ಷದ ಸಮಿತ್ತಿನಿಂದ ಯಜ್ಞೀಯಮಂತ್ರಪೂರ್ವಕವಾಗಿ ಖನನಮಾಡಬೇಕು. ಸ್ಥಂಡಿಲದಲ್ಲಿ ದಾರಗಳಿಂದ ಮೂರು ರೇಖೆಗಳನ್ನು ಮಾಡಿ ಚತುರಸ್ರವನ್ನು ರಚಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಎರಡನೆಯಭಾಗದಲ್ಲಿ ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ದ್ವಿತೀಯಭಾಗೇ

## ಸಪ್ತದಶೋಽಧ್ಯಾಯಃ

॥ ಸೂತ ಉವಾಚ ॥

ಪ್ರತಿಷ್ಠಾಯಾಃ ಪೂರ್ವದಿನೇ ಕುರ್ಯಾದ್ದೇವಾಧಿವಾಸನಂ ।
ಧಾನ್ಯಪ್ರತಿಷ್ಠಾಂ ತಸ್ಯೈವ ಯೂಪಂ ಚಾಪಿ ಯಥಾವಿಧಿ ॥ ೧ ॥

ರಾತ್ರೌ ಮೂಲಾಗ್ರೇಚ ಘಟೇ ಸ್ಥಾಪಯೇದ್ಗಣನಾಯಕಂ ।
ಸಂಪೂಜ್ಯ ಚ ವಿಧಾನೇನ ದಿಗೀಶಾಂಶ್ಚ ತಥಾ ಗ್ರಹಾನ್ ॥ ೨ ॥

ಬ್ರಹ್ಮಾಣಂ ಚ ತಡಾಗೇಷು ವರುಣಂ ಶಾಂತಿಯಾಗಕೇ ।
ಸೋಮಂ ಚ ಮಂಡಲೇ ಸೂರ್ಯಂ ಪಾದೇ ವಿಷ್ಣುಂ ತಥೈವ ಚ ॥ ೩ ॥

---

## ಹದಿನೇಳನೆಯ ಅಧ್ಯಾಯ

೧. ಸೂತರು ಶೌನಕಾದಿಮುನಿಗಳಿಗೆ ಹೇಳುತ್ತಾರೆ—ಪ್ರತಿಮಾಪ್ರತಿಷ್ಠೆಗೆ ಹಿಂದಿನದಿನ ದೇವಮೂರ್ತಿಯನ್ನು ಅಧಿವಾಸ ಮಾಡಿಸಬೇಕು. ಧ್ಯಾನರಾಶಿಯನ್ನು ಪ್ರತಿಷ್ಠಿಸಿ ಅಲ್ಲಿ ವಿಧಿಪ್ರಕಾರ ಮೂರ್ತಿಯನ್ನೂ ಯೂಪಸ್ತಂಭವನ್ನೂ ಅಧಿವಾಸ ಮಾಡಬೇಕು.

೨. ಆ ರಾತ್ರಿ ಮೂಲದಅಗ್ರದಲ್ಲಿ ಕಲಶವನ್ನಿಟ್ಟು ಅದರ ಸಮೀಪದಲ್ಲಿ ಗಣಪತಿಯನ್ನೂ, ನವಗ್ರಹಗಳನ್ನೂ, ಇಂದ್ರಾದಿ ದಿಕ್ಪಾಲಕರನ್ನೂ, ಬ್ರಹ್ಮನನ್ನೂ ವಿಧಿವತ್ತಾಗಿ ಪೂಜಿಸಬೇಕು.

೩. ತಟಾಕಪ್ರತಿಷ್ಠೆಯ ಸಂದರ್ಭದಲ್ಲಿ ಮುಖ್ಯವಾಗಿ ವರುಣನನ್ನೂ, ಶಾಂತಿಹೋಮಸಂದರ್ಭದಲ್ಲಿ ಸೋಮನನ್ನೂ ಪೂಜಿಸಬೇಕು. ಸೂರ್ಯನನ್ನು ಮಂಡಲದಲ್ಲಿಯೂ, ವಿಷ್ಣುವನ್ನು ಪಾದದಲ್ಲಿಯೂ ಆವಾಹಿಸಬೇಕು.

ಶೈವೇ ಶೈವಂ ತಥಾ ಪ್ರೋಕ್ತಂ ಪ್ರಸಾಯಮಥ ವಾರುಣಂ ।
ಆರಾಮೇ ಚೈವ ಬ್ರಹ್ಮಾಣಂ ಪಾದ್ಯಾದ್ಯೈರಪಿ ಚಾರ್ಚಯೇತ್ ॥ ೪ ॥

ದ್ರುಪದಾದೀತಿ ಮಂತ್ರೇಣ ಸ್ನಾಪಯೇತ್ಪ್ರಥಮಂ ಬುಧಃ ॥
ಗಾಯತ್ರ್ಯಾ ಚ ತತಃ ಪಶ್ಚಾದ್ಗಂಧದ್ವಾರೇತಿ ತೈಲಕರ್ಮ ॥ ೫ ॥

ಸುನಾಭೇತಿಚ ಮಂತ್ರೇಣ ದ್ವಾಭ್ಯಾಮೇವ ವಿಶಿಷ್ಯತೆ ।
ಶ್ರೀಶ್ಚತೇಇತಿ ಕುಸುಮಂ ಫಲಿನೀತಿ ಚ ವೈ ಫಲಮ್ ॥ ೬ ॥

ಕಾಂಡಾದಿತಿ ಚ ಮಂತ್ರೇಣ ದದ್ಯಾದ್ದೂರ್ವಾಶತಂ ತತಃ ।
ಸಿಂದೋರಿವೇತಿ ಸಿಂದೂರಂ ವಿಶ್ವಾಮಿತಿ ಚ ಮಾರ್ಜನಮ್ ॥ ೭ ॥

ಸಮಿದ್ಧೇತ್ಯಂಜನಂ ದದ್ಯಾದ್ವಸ್ತ್ರಂ ಸುರಾಸುರಾಜಪರ್ ।
ಚಂದನಂ ಯಜ್ವಭಿರ್ಜಪ್ತ್ವಾ ಮಾನಸ್ತೋಕೇತಿ ಚಂದನಮ್ ॥ ೮ ॥

---

೫. ಶಿವಾಲಯ ಪ್ರತಿಷ್ಠೆಯಲ್ಲಿ ಮುಖ್ಯವಾಗಿ ಶಿವನನ್ನೂ, ಅರವಟ್ಟಿಗೆಯ ಪ್ರತಿಷ್ಠೆಯಲ್ಲಿ ವರುಣನನ್ನೂ, ಆರಾಮಪ್ರತಿಷ್ಠೆಯಲ್ಲಿ ಬ್ರಹ್ಮನನ್ನೂ ಆವಾಹಿಸಿ ಅರ್ಘ್ಯ ಪಾದ್ಯ ಮುಂತಾದುವುಗಳನ್ನು ಸಮರ್ಪಿಸಿ ಪೂಜಿಸಬೇಕು.

೫-೬. ವಿದ್ವಾಂಸನಾದವನು "ದ್ರುಪದಾದಿವ" ಎಂಬ ಮಂತ್ರಪೂರ್ವಕವಾಗಿ ಒಂದನೆಯಸಲ ಅಭಿಷೇಕಮಾಡಬೇಕು. ಅನಂತರ ಗಾಯತ್ರೀ ಮಂತ್ರದಿಂದ ಪುನಃ ಅಭಿಷೇಕವನ್ನು ಮಾಡಿ "ಗಂಧದ್ವಾರಾ" ಎಂಬ ಮಂತ್ರದಿಂದಲೂ "ಸುನಾಭಾ"ಎಂಬ ಮಂತ್ರದಿಂದಲೂ ದೇವಮೂರ್ತಿಗೆ ತೈಲವನ್ನು ಎರೆಯಬೇಕು.

೭. ಈ ಸಂದರ್ಭದಲ್ಲಿ ಈ ಎರಡು ಮಂತ್ರವನ್ನೂ ಹೇಳಬೇಕು. 'ಶ್ರೀಶ್ಚತೇ' ಎಂಬ ಮಂತ್ರದಿಂದ ಪುಷ್ಪವನ್ನೂ'ಯಾಃ ಫಲಿನೀಃ'ಎಂಬ ಮಂತ್ರದಿಂದ ಫಲವನ್ನೂ 'ಕಾಂಡಾತ್ಕಾಂಡಾ' ಎಂಬ ಮಂತ್ರಪೂರ್ವಕವಾಗಿ ನೂರುಗರಿಕೆ ಹುಲ್ಲನ್ನೂ ಸಮರ್ಪಿಸಬೇಕು.

೮. 'ಸಿಂಧೋರಿವ' ಎಂಬ ಮಂತ್ರದಿಂದ ಸಿಂಧೂರವನ್ನು ಸಮರ್ಪಿಸಬೇಕು. ಅನಂತರ 'ವಿಶ್ವಾನಿನೋ' ಎಂಬ ಮಂತ್ರದಿಂದ ಸುತ್ತಲೂ ಮಾರ್ಜನೆ ಮಾಡಬೇಕು. 'ಸಮಿದ್ಧ' ಎಂಬ ಮಂತ್ರದಿಂದ ಅಂಜನವನ್ನು ಸಮರ್ಪಿಸಬೇಕು. 'ಸುರಾಸುರಾ'

**ಯೂಪೇ ಚೈವ ವಿಶೇಷೋಽಯಮುತ್ತರಾಗ್ರಂ ಪ್ರವಿನ್ಯಸೇತ್ ।**
**ಅದ್ಯೈವ ತೇನ ಮಂತ್ರೇಣ ಸ್ಥಾಪಯೇದಥ ವಾರಿಣಾ ॥ ೯ ॥**

**ಗಾಯತ್ರ್ಯಾ ಪ್ರಥಮಂ ಚೈವ ಆಪೋಹಿಷ್ಠೇತಿ ವೈ ಜಪನ್ ।**
**ಶನ್ನೋದೇವೀತಿ ದ್ರುಪದಾಂ ಸ್ನಾಪಯೇತ್ತದನಂತರಮ್ ॥ ೧೦ ॥**

**ಅಭಿಮಂತ್ರ್ಯಾಥ ಬ್ರಹ್ಮೇತಿ ತ್ರಿರಾತ್ರಂ ಮಂತ್ರಮೀರಯನ್ ।**
**ಯೋಗಂಯೋಗದೃಢಂ ಜಪ್ತ್ವಾ ಪವಿತ್ರಂ ವಿನ್ಯಸೇತ್ತತಃ ॥ ೧೧ ॥**

**ತ್ವಂಗಂಧರ್ವೇತಿ ಮಂತ್ರೇಣ ತಥಾ ಸುಭಾಭ ಇತ್ಯಪಿ ।**
**ದ್ವಾಭ್ಯಾಂ ತೈಲಗಂಧಯುತಂ ಶ್ರೀಸೂಕ್ತೇನಾಪಿ ಪುಷ್ಪಕಮ್ ॥ ೧೨ ॥**

---

ಎಂಬ ಮಂತ್ರವನ್ನು ಯಾಜಕರೊಡನೆ ಜಪಿಸುತ್ತಾ ವಸ್ತ್ರವನ್ನು ಅರ್ಪಿಸಬೇಕು. ಹಾಗೆಯೇ 'ಮಾನಸ್ತೋಕೇ' ಎಂಬ ಮಂತ್ರವನ್ನು ಜಪಿಸುತ್ತಾ ಚಂದನವನ್ನು ಹಚ್ಚಬೇಕು.

೯. ಯೂಪವನ್ನು ನೆಡುವ ಸಂದರ್ಭದಲ್ಲಿ ಉತ್ತರಾಗ್ರವಾಗಿ ವಿನ್ಯಾಸಮಾಡಬೇಕು ಎಂಬುದು ವಿಶೇಷವಿಧಿ. ಹಾಗೆ ನಿಲ್ಲಿಸುವಾಗ ಹಿಂದೆ ಹೇಳಿದ ಮಂತ್ರಪೂರ್ವಕವಾಗಿ ತತ್ಕಾಲದಲ್ಲೇ ಯೂಪವನ್ನು ಜಲದಲ್ಲಿ ಸ್ಥಾಪಿಸಬೇಕು.

೧೦. ಮೊದಲು ಗಾಯತ್ರೀಮಂತ್ರ, ಆಮೇಲೆ 'ಆಪೋಹಿಷ್ಠಾ' ಎಂಬ ಮಂತ್ರ, ಅನಂತರ 'ಶನ್ನೋದೇವೀ' ಎಂಬ ಮಂತ್ರ, ಆಮೇಲೆ 'ದ್ರುಪದಾ' ಎಂಬ ಮಂತ್ರ, ಈ ಪ್ರಕಾರ ಮಂತ್ರಗಳನ್ನು ಜಪಿಸುತ್ತಾ ಪ್ರತಿಷ್ಠಾಪನಸ್ಥಾನವನ್ನು ಪ್ರೋಕ್ಷಿಸಬೇಕು.

೧೧. ಮೂರುದಿನಗಳವರೆಗೂ ಬ್ರಹ್ಮದೇವತಾಕವಾದ ಮಂತ್ರಗಳಿಂದ ಆ ಪ್ರದೇಶವನ್ನು ಅಭಿಮಂತ್ರಿಸಬೇಕು. 'ಯೋಗಂ ಯೋಗದೃಢಂ' ಎಂಬ ಮಂತ್ರವನ್ನು ಜಪಿಸಿ ಆ ಪ್ರದೇಶವು ಪವಿತ್ರವಾಗುವಂತೆ ಮಂಡಲವಿನ್ಯಾಸ ಮಾಡಬೇಕು.

೧೨. 'ತ್ವಂ ಗಂಧರ್ವ' ಎಂಬ ಮಂತ್ರವನ್ನೂ ಮತ್ತು 'ಸುಭಾಭಾ' ಎಂಬ ಮಂತ್ರವನ್ನೂ ಪಠಿಸುತ್ತಾ ಪ್ರತಿಮೆಗೆ ಗಂಧಯುಕ್ತವಾದ ತೈಲವನ್ನು ಲೇಪಿಸಬೇಕು. ಶ್ರೀಸೂಕ್ತಮಂತ್ರಪಠನಪೂರ್ವಕವಾಗಿ ಪುಷ್ಪವನ್ನು ಅರ್ಪಿಸಿ ಅಲಂಕರಿಸಬೇಕು.

ಧೂರಸೀತಿ ತಥಾ ಧೂಪಮಾಸ್ರಜ್ಯೋತಿರ್ಭಿರ್ದೀಪಕಮ್ ।
ಅನುಮೀಮಹತಾಚೇತಿ ದದ್ಯಾದ್ದೂರ್ವಾಕ್ಷತಂ ತತಃ ॥ ೧೩ ॥

ವಿಶ್ವಾಮೀತಿ ಚ ನಿಮ್ನ್ಯಂತಕಾಂಡಾದಿತಿ ತಥಾಕ್ಷತಮ್ ।
ಸಿಂಧೋರಿವೇತಿ ಸಿಂಧೂರಂ ಸಮಿದ್ಧೇತಿ ತಥಾಂಜನಮ್ ॥ ೧೪ ॥

ಪಾದೋऽಸ್ಯೇತ್ಯಥ ಭುಕ್ತಂ ಸ್ಯಾದ್ಯಾಃಫಲಿನೀತಿ ಪುನಃ ಫಲಮ್ ।
ರೂಪಂನೇತಿ ದಹೇದ್ಧೂಪಂ ನ ಸೋऽಚಿತಿ ನಿರಾಜನಮ್ ॥ ೧೫ ॥

ಯುವಾಸುವಾಸೇತಿ ವಸ್ತ್ರಂ ನಾಗಗಂಧೇತಿ ಚಂದನಮ್ ।
ತತೋ ಯಮಗೃಹಾದ್ಬಾಹ್ಯೇ ಮಂಡಪಾಂತರಮಾಶ್ರಿತಃ ॥ ೧೬ ॥

---

೧೩. 'ಧೂರಸಿ' ಎಂಬ ಮಂತ್ರದಿಂದ ಧೂಪವನ್ನು ಬೆಳಗಬೇಕು. 'ಆಸ್ರ ಜ್ಯೋತಿ' ಎಂಬ ಮಂತ್ರದಿಂದ ದೀಪವನ್ನು ಸಮರ್ಪಿಸಬೇಕು. ಅನಂತರ 'ಅನುಮೀ ಮಹತಾ' ಎಂಬ ಮಂತ್ರ ಪೂರ್ವಕವಾಗಿ ಅಕ್ಷತೆಸಮೇತ ಹುಲ್ಲುಗರಿಕೆಯನ್ನು ಪೂಜಿಸಬೇಕು.

೧೪. 'ವಿಶ್ವಾಮೀ'ಎಂಬ ಮಂತ್ರದಿಂದಲೂ ಮತ್ತು 'ನಿಮ್ನ್ಯಂತ ಕಾಂಡಾತ್' ಎಂಬ ಮಂತ್ರದಿಂದಲೂ ಹರಿದ್ರಾಕ್ಷತೆ ಯವಾಕ್ಷತೆಗಳನ್ನು ಪೂಜಿಸಬೇಕು. 'ಸಿಂಧೋರಿವ' ಎಂಬ ಮಂತ್ರದಿಂದ ಚಂದಿರವನ್ನು ಸಮರ್ಪಿಸಬೇಕು. 'ಸಮಿದ್ಧಾ' ಎಂಬ ಮಂತ್ರದಿಂದ ಕಾಡಿಗೆಯನ್ನು ಸಮರ್ಪಿಸಬೇಕು.

೧೫ 'ಪಾದೋಸ್ಯ' ಎಂಬ ಮಂತ್ರದಿಂದ ನೈವೇದ್ಯವಸ್ತುಗಳನ್ನೂ, 'ಯಾಃ ಫಲಿನೀಃ' ಎಂಬ ಮಂತ್ರದಿಂದ ನಾನಾವಿಧ ಫಲಗಳನ್ನೂ ಸಮರ್ಪಿಸಬೇಕು. 'ರೂಪಂನ' ಎಂಬ ಮಂತ್ರ ಪೂರ್ವಕವಾಗಿ ಧೂಪವನ್ನು ಬೆಳಗಬೇಕು. 'ನಸೋಚೀ' ಎಂಬ ಮಂತ್ರದಿಂದ ನೀರಾಜನಮಾಡಬೇಕು.

೧೬. 'ಯುವಾಸುವಾಸಾ' ಎಂಬ ಮಂತ್ರಪೂರ್ವಕವಾಗಿ ವಸ್ತ್ರವನ್ನು ಉಡಿಸಬೇಕು. 'ನಾಗಗಂಧಾ' ಎಂಬ ಮಂತ್ರದಿಂದ ಗಂಧವನ್ನು ಹಚ್ಚಬೇಕು. ಅನಂತರ ದಕ್ಷಿಣದಿಕ್ಕಿನಲ್ಲಿ ಹೊರಗೆ ಬೇರೆ ಮಂಡಪವನ್ನು ಏರ್ಪಡಿಸಬೇಕು.

**ಸುನಾತೀತಿ ವಚೋ ದದ್ಯಾತ್ತತಶ್ಚಾವಾಹಯೇತ್ಪ್ರಭುಮ್ ।
ತತ್ರಾಧಿವಾಸನಂ ಕುರ್ಯಾದ್ರಕ್ಷಯೇಚ್ಚ ಸುರಕ್ಷಿಭಿಃ ॥ ೧೭ ॥**

**ಆಚಾರ್ಯೋ ಯಜಮಾನಶ್ಚ ಋತ್ವಿಗ್ಭೋಜನಮಾಚರೇತ್ ।
ಅಕ್ಷಾರಲವಣಾನ್ಯಾಸೀ ದಧಿ ವಿಶ್ವಂ ತಿಲಾಂಸ್ತ್ಯಜೇತ್ ॥ ೧೮ ॥**

**ಅಧಾರಣಂ ಚಾಧಿವಾಸಂ ವಕ್ಷ್ಯೇ ತತ್ರಾನುಸಾರತಃ ।
ಸುನಾತೇತಿ ವಚೋ ದದ್ಯಾತ್ತೈಲಂ ಚೈವ ಶಿವೇ ತ್ರಿಭಿಃ ॥ ೧೯ ॥**

**ಪಂಚಭಿರ್ಬ್ರಾಹ್ಮಣೈಃ ಸಾರ್ಧಂ ಗಂಧರ್ವಾ ಇತಿ ವಿಸ್ಮರೇ ।
ದದ್ಯಾದ್ಗಂಧಂ ತೈಲಯುತಂ ಗಂಧದ್ವಾರೇತ್ಯೃಚಾ ಪುನಃ ॥ ೨೦ ॥**

**ಯಾಃಫಲನೀತಿಚ ಫಲಂ ಪೂಗತಾಲಾದಿವರ್ಜನವ್ ।
ಕೌಶಿಕೀರುತ್ತಮೋಸೀತಿ ದದ್ಯಾತ್ಖಡ್ಗಂ ಸುತೀಕ್ಷ್ಣಕಮ್ ॥ ೨೧ ॥**

---

೧೭. 'ಸುನಾತಿ' ಎಂಬ ಮಂತ್ರಪೂರ್ವಕವಾಗಿ ಆ ಮಂಟಪದಲ್ಲಿ ಮೂರ್ತಿಯನ್ನಿರಿಸಬೇಕು. ಅನಂತರ ಅಲ್ಲಿ ಯಥೋಕ್ತಕ್ರಮದಿಂದ ದೇವತಾ ಆವಾಹನೆ ಮಾಡಬೇಕು. ಬಳಿಕ ಮೂರ್ತಿಯನ್ನು ಅಧಿವಾಸಮಾಡಿಸಿ ಸುರಕ್ಷಿತವಾಗಿರುವಂತೆ ನೋಡಿಕೊಳ್ಳಬೇಕು.

೧೮. ಅನಂತರ ಆಚಾರ್ಯ, ಯಜಮಾನ, ಋತ್ವಿಕ್ಕುಗಳು ಎಲ್ಲರೂ ಭೋಜನ ಮಾಡಬೇಕು. ಆ ದಿನ ಆಹಾರದಲ್ಲಿ ಕಾರ, ಉಪ್ಪು, ಮೊಸರು, ವಿಶ್ವ (?) ಎಳ್ಳು, ಇವನ್ನು ಸೇವಿಸಬಾರದು.

೧೯. ಇನ್ನು ಸರ್ವಸಾಧಾರಣದ ಅಧಿವಾಸಕ್ರಮವನ್ನು ಹೇಳುತ್ತೇನೆ—ಶಿವ ಮೂರ್ತಿ (ಲಿಂಗ) ಅಧಿವಾಸಕಾರ್ಯದಲ್ಲಿ 'ಸುನಾತಾ' ಎಂಬ ಮಂತ್ರವನ್ನು ಮೂರುಸಾರಿ ಹೇಳಿ ಲಿಂಗಕ್ಕೆ ತೈಲವನ್ನು ಲೇಪನಮಾಡಬೇಕು.

೨೦—೨೧. ಅನಂತರ ಐದುಮಂದಿ ಬ್ರಾಹ್ಮಣರು 'ಗಂಧರ್ವಾ' ಎಂಬ ಮಂತ್ರವನ್ನು ಸ್ಮರಿಸುತ್ತಾ 'ಗಂಧದ್ವಾರಾಂ' ಎಂಬ ಮಂತ್ರದಿಂದ ತೈಲಯುಕ್ತವಾದ ಗಂಧವನ್ನು ಸಮರ್ಪಿಸಬೇಕು. 'ಯಾಃ ಫಲಿನೀ' ಎಂಬ ಮಂತ್ರದಿಂದ ಅಡಕೆ, ತಾಳೆ ಮುಂತಾದ ಫಲಗಳು ವಿನಾ ಇತರ ಸ್ವಾದುಫಲಗಳನ್ನು ನಿವೇದಿಸಬೇಕು. 'ಕೌಶಕೀ

**ರೂಪೇನ ವೇತಿಮಂತ್ರೇಣ ಮುದ್ಗರಂ ಚ ನಿವೇದಯೇತ್ ।**
**ಶ್ರೀಶ್ಚತೇ ಇತಿ ಕುಸುಮಂ ವಿಶ್ವಾನೀತಿ ಚ ಸಂಪಠನ್ ॥ ೨೨ ॥**

**ನಿರ್ಮಂಥನಂ ತತಃ ಕಾರ್ಯಮಿತಿ ಸಾಧಾರಣೋ ವಿಧಿಃ ।**
**ತತೋಧಿವಾಸಕಲ್ಪೇ ತು ಪ್ರದೇಶೇ ತು ಸಮಾಚರೇತ್ ॥ ೨೩ ॥**

**ವಿನಾಧಿವಾಸನಂ ವಿಪ್ರಾಃ ಪ್ರತಿಷ್ಠಾಂ ನ ಸಮಾಚರೇತ್ ।**
**ನ ತತ್ಫಲಮವಾಪ್ನೋ ವಿವಾಹೇ ಶರಣಂ ದಿಶೇತ್ ॥ ೨೪ ॥**

**ತತಃ ಪ್ರಯತ್ನಕೈಃ ಕಾರ್ಯಂ ಪೂರ್ವಾಹ್ಣೇ ರಾತ್ರಿಯೋಗತಃ ।**
**ನಿತ್ಯೇ ನೈಮಿತ್ತಿಕೇ ಕಾಮ್ಯೇ ಕಾರಯೇತ್ಕುಂಡಮಂಡಮಂಡಪಮ್ ॥ ೨೫ ॥**

---

ರುತ್ತಮೋಸಿ' ಎಂಬ ಮಂತ್ರಪೂರ್ವಕವಾಗಿ ತೀಕ್ಷ್ಣವಾದ ಖಡ್ಗವನ್ನೂ, 'ರೂಪೇನ' ಎಂಬ ಮಂತ್ರದಿಂದ ಮುದ್ಗರ ಎಂಬ ಆಯುಧವನ್ನೂ ಸಮೀಪದಲ್ಲಿಟ್ಟು ನಿವೇದಿಸಬೇಕು.

೨೨. 'ಶ್ರೀಶ್ಚತೇ' ಎಂಬ ಮಂತ್ರದಿಂದ ಪುಷ್ಪವನ್ನು ಸಮರ್ಪಿಸಿ 'ವಿಶ್ವಾನಿನೋ' ಎಂಬ ಮಂತ್ರವನ್ನು ಉಚ್ಚರಿಸುತ್ತಾ ಮೂರ್ತಿಯ ಅಂಗವನ್ನು ಚೆನ್ನಾಗಿ ಉಜ್ಜಬೇಕು.

೨೩. ಇದು ಸಾಧಾರಣ ಅಧಿವಾಸ ವಿಧಾನವಾಯಿತು. ಮೇಲೆ ಹೇಳಿದ ಈ ಆಧಿವಾಸಕಾರ್ಯವನ್ನು ಅದಕ್ಕಾಗಿ ಏರ್ಪಡಿಸಿದ ಪ್ರದೇಶದಲ್ಲಿಯೇ ನಡೆಯಿಸಬೇಕು. ಮತ್ತು ಉಕ್ತವಾದ ಕಲ್ಪದ ವಿಧಾನದಂತೆಯೇ ನಡೆಯಿಸಬೇಕು.

೨೪. ಅಧಿವಾಸಮಾಡದೆ ಬ್ರಾಹ್ಮಣರು ಯಾವ ಮೂರ್ತಿಪ್ರತಿಷ್ಠೆಯನ್ನೂ ಮಾಡಬಾರದು. ಒಂದುವೇಳೆ ಹಾಗೆ ಮಾಡಿದರೆ ಅದನ್ನು ವಿಧ್ಯುಕ್ತವಾಗಿ ಮಾಡಿದುದರಿಂದ ಎಷ್ಟು ಫಲವು ಲಭಿಸುತ್ತಿತ್ತೋ ಅಷ್ಟುಫಲವು ಲಭಿಸುವುದಿಲ್ಲ. ಕಲ್ಯಾಣೋತ್ಸವ, ಗೃಹಪ್ರವೇಶ ಇವುಗಳಲ್ಲಿ ಮುಂದೆ ಹೇಳುವ ಕ್ರಮದಂತ ನಡೆಯಿಸಬೇಕು.

೨೫-೨೭. ಈ ಕಾರ್ಯಗಳನ್ನು ರಾತ್ರಿಯ ಸಂಬಂಧವುಳ್ಳ ಪೂರ್ವಾಹ್ಣದಲ್ಲಿ (ಬೆಳಗಿನಜಾವ) ಪ್ರಯತ್ನಪಟ್ಟು ಪ್ರಾರಂಭಮಾಡಬೇಕು. ನಿತ್ಯಕರ್ಮ, ನೈಮಿತ್ತಿಕಕರ್ಮ, ಕಾಮ್ಯಕರ್ಮಗಳಿಗೆ ಯಥೋಕ್ತಕ್ರಮದಿಂದ ಅಗ್ನಿಕುಂಡ, ಮಂಟಪ ಇವನ್ನು ಪ್ರತ್ಯೇ

**ಸ್ಥಂಡಿಲೇಹಸ್ತಮಾತ್ರೇಣ ವಾಲುಕಾನಿರ್ಮಿತೇऽಪಿ ಚ ।**
**ತ್ರಯೋದಶಾಂಗುಲೇ ಹಸ್ತೇ ದ್ವಿಹಸ್ತೇ ಚಾಪಿ ವರ್ಧತೆ ॥ ೨೬ ॥**

**ಏಕೈಕಾಂಗುಲಕೋ ವಿಪ್ರಾಃ ಪೀಠೇ ನಾಸ್ತಿ ವಿಚಾರಣಾ ।**
**ನವಪಂಚಕಕುಂಡೇ ಚ ಲಕ್ಷಾದವಪಿ ಶಂಕಯಾ ॥ ೨೭ ॥**

**ತತೋ ದಶಾಂಗುಲೇ ಪಕ್ಷೇ ದಶಾಂಗಂ ಶೃಣುತ ದ್ವಿಜಾಃ ।**
**ಕಾಷ್ಠಂ ಪತ್ರಂ ಚ ಪುಷ್ಪಂ ಚ ನೋದಕಂ ಪಿಷ್ಟಕಂ ತಥಾ ॥ ೨೮ ॥**

**ಅನ್ನಂ ಚ ಪರಮಾನ್ನಂ ಚ ಹ್ಯವೇಕ್ಷ್ಯಂ ತಿಲಮೇವ ಚ ।**
**ಏತದ್ವೈ ಗೃಹಪಕ್ಷೇ ಚ ವಿಷ್ಣುಪಕ್ಷೇ ತಿಲಾದಿತಃ ॥ ೨೯ ॥**

**ಶೈವೇ ಯವಾದಿತಃ ಕಾರ್ಯಾ ಶಾಕ್ತೇ ಪುಷ್ಪಾದಿತೋ ಭವೇತ್ ।**
**ಸೂರ್ಯೇ ಪಕ್ಷೇ ಪಿಷ್ಟಕಾದಿ ಗೋಪಾಲೇ ಕೃಶರಾದಿತಃ ॥ ೩೦ ॥**

---

ಕವಾಗಿ ಮರಳಿನಿಂದ ರಚಿಸಿರಬೇಕು. ಇದರ ಅಳತೆ ಹದಿಮೂರಅಂಗುಲ, ಅಥವಾ ಒಂದುಮೊಳ ಮೀರಿದರೆ ಎರಡುಮೊಳ ಪರ್ಯಂತ ಇರಬಹುದು

೨೭. ಎಲೈ ಬ್ರಾಹ್ಮಣರೇ! ಲಕ್ಷಹೋಮ ಮೊದಲಾದುವುಗಳಲ್ಲಿ ಹದಿನಾಲ್ಕು ಅಂಗುಲ ಪರಿಮಿತಿಗಿಂತ ದೊಡ್ಡಕುಂಡದ ಅವಶ್ಯಕತೆಯಿದ್ದಲ್ಲಿ ಸ್ಥಂಡಿಲದಲ್ಲಿ ಈ ಒಂದು ಅಂಗುಲ ವ್ಯತ್ಯಾಸವು ಅಷ್ಟು ವಿಚಾರಣೀಯವಲ್ಲ.

೨೮. ಹತ್ತಂಗುಲ ಪರಿಮಿತಿಯ ಕುಂಡದಲ್ಲಿ ಹೋಮಮಾಡುವ ದ್ರವ್ಯಗಳು ಹತ್ತುಸಂಖ್ಯೆಯಾಗಿರಬೇಕೆಂದು ಹೇಳುತ್ತಾರೆ. ಓ ವಿಪ್ರರೇ! ಅದನ್ನು ಕೇಳಿ; ಸಮಿತ್ತು, ಪತ್ರ, ಹೂ, ಕಡುಬು, ಹಿಟ್ಟು, ಪುರೋಡಾಶ, ಅನ್ನ, ಪಾಯಸ, ತೃಣ ಧಾನ್ಯ, ಎಳ್ಳು, ಇವೆಲ್ಲವುಗಳ ಜೊತೆಗೂ ಆಜ್ಯ, ಎಂಬ ಈ ಹತ್ತುದ್ರವ್ಯಗಳೂ ದಶಾಂಗ ಹೋಮ ದ್ರವ್ಯಗಳೆನಿಸುವುವು ದೇವಮಂದಿರ ಪ್ರತಿಷ್ಠಾಪನ ಮಾಡುವ ಪಕ್ಷದಲ್ಲಿ ಈ ದಶಾಂಗ ಹೋಮದ್ರವ್ಯವನ್ನೇ ಉಪಯೋಗಿಸಿ ನಡೆಯಿಸಬೇಕು.

೩೦. ವಿಷ್ಣುದೇವಪ್ರತಿಷ್ಠೆ ಮಾಡುವಪಕ್ಷದಲ್ಲಿ ತಿಲವನ್ನೇ ಮೊದಲನೆಯದನ್ನಾಗಿಟ್ಟುಕೊಂಡು ದಶಾಂಗಹೋಮ ಮಾಡಬೇಕು. ಶಿವದೇವಪ್ರತಿಷ್ಠಾಪಕ್ಷದಲ್ಲಿ ಯವಪದಿಂದ ಮೊದಲು ಮಾಡಿಕೊಂಡು ದಶಾಂಗಹೋಮ ಮಾಡಬೇಕು. ಶಕ್ತಿ

**ಕೃಷ್ಣೇ ಚ ಕರವೀರಾದಿ ಶ್ರೀಫಲಾನಿ ಚ ತ್ರೈಪುರೇ ।**
**ಸಾರಸ್ವತೇ ಚ ಶ್ರೀವೃಕ್ಷೇ ಮೋಕ್ಷಕಾಮೇ ನಿಗದ್ಯತೆ ॥ ೩೦ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ ದ್ವಿತೀಯಭಾಗೇ ಸಪ್ತದಶೋಽಧ್ಯಾಯಃ**



---

ದೇವತಾಪ್ರತಿಷ್ಠಾಪಕ್ಷದಲ್ಲಿ ಪುಷ್ಪದಿಂದ ಮೊದಲು ಮಾಡಿಕೊಂಡು ದಶಾಂಗಹೋಮ ಮಾಡಬೇಕು. ಸೂರ್ಯದೇವತಾ ಪ್ರತಿಷ್ಠಾಪಕ್ಷದಲ್ಲಿ ಪಿಷ್ಟದಿಂದ ಮೊದಲು ಮಾಡಿಕೊಂಡು ದಶಾಂಗಹೋಮ ಮಾಡಬೇಕು.

೩೧. ಗೋಪಾಲಪ್ರತಿಷ್ಠಾಪಕ್ಷದಲ್ಲಿ ಎಳ್ಳುಹುಡಿಯನ್ನು ಮೊದಲು ಮಾಡಿಕೊಂಡು ದಶಾಂಗಹೋಮ ಮಾಡಬೇಕು. ಕೃಷ್ಣದೇವತಾ ಪ್ರತಿಷ್ಠಾಪಕ್ಷದಲ್ಲಿ ಕರವೀರಪುಷ್ಪವನ್ನು ಮೊದಲು ಮಾಡಿಕೊಂಡು ದಶಾಂಗಹೋಮ ಮಾಡಬೇಕು. ತ್ರಿಪುರಸುಂದರೀ (ಶಕ್ತಿ) ದೇವತಾ ಪ್ರತಿಷ್ಠಾ ಪಕ್ಷದಲ್ಲಿಯೂ, ಸರಸ್ವತೀದೇವತಾ ಪ್ರತಿಷ್ಠಾ ಪಕ್ಷದಲ್ಲಿಯೂ ಮತ್ತು ಮೋಕ್ಷದಾಯಕವಾದ ಬಿಲ್ವವೃಕ್ಷ ಪ್ರತಿಷ್ಠಾಪಕ್ಷದಲ್ಲಿಯೂ ಶ್ರೀಫಲ ತೆಂಗಿನಕಾಯನ್ನು ಮೊದಲು ಮಾಡಿಕೊಂಡು ಈ ದಶಾಂಗಹೋಮ ಮಾಡಬೇಕೆಂದು ಹೇಳಿದೆ.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ದ್ವಿತೀಯ ಭಾಗದಲ್ಲಿ ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ದ್ವಿತೀಯಭಾಗೇ

## ಅಷ್ಟಾದಶೋಽಧ್ಯಾಯಃ

---

॥ ಸೂತ ಉವಾಚ ॥

ಅಷ್ಟೌ ಹೋತಾರೋ ದ್ವಾರಪಾಲಾಸ್ತಥಾಷ್ಟೌ ।
ಅಷ್ಟೌ ಕಾರ್ಯಾ ಬ್ರಾಹ್ಮಣಾಯಾಜಕಾಶ್ಚ ॥
ಸರ್ವೇ ಶುದ್ಧಾ ಲಕ್ಷಿತಾ ಲಕ್ಷಣಾದ್ಯೈರೇಕಃ ।
ಕಾರ್ಯೋ ಜಾಪಕೋಽಸ್ಮಿನ್ ಮಹಾತ್ಮಾ ॥ ೧ ॥

ದಿವ್ಯೈರ್ಗಂಧೈರ್ಗಂಧಮಾಲ್ಯೈಃ ।
ಸುವರ್ಣೈರಸ್ತ್ರೈಲಂಕಾರ್ಯಂ ಬ್ರಾಹ್ಮಣಾಃ ಪಂಚವಿಂಶಾಃ ॥
ಆವಾಪ್ಯೈಸ್ತು ದ್ವಿಗುಣೈರ್ವೈ ಬಲೀಯೋ ।
ದಿವ್ಯೈರ್ವಸ್ತ್ರೈರರ್ಹಣಾದಕ್ಷಿಣಾಭಿಃ ॥ ೨ ॥

---

### ಹದಿನೆಂಟನೆಯ ಅಧ್ಯಾಯ

೧. ಸೂತರು ಹೇಳುತ್ತಾರೆ—ಎಂಟುಮಂದಿ ಬ್ರಾಹ್ಮಣರನ್ನು ಹೋತೃಗಳನ್ನಾಗಿಯೂ, ಇನ್ನೆಂಟುಮಂದಿ ವಿಪ್ರರನ್ನು ಯಾಜಕರನ್ನಾಗಿಯೂ ಏರ್ಪಡಿಸಿಕೊಳ್ಳಬೇಕು. ಹೀಗೆ ಗೊತ್ತುಮಾಡಲ್ಪಟ್ಟವರು ವೇದಾಧ್ಯಯನಸಂಪನ್ನರಾಗಿ ಆಯಾ ಸ್ಥಾನಕ್ಕೆ ತತ್ತಲ್ಲಕ್ಷಣಗಳಿಂದ ಯುಕ್ತರಾಗಿಯೂ ಪರಿಶುದ್ಧರಾಗಿಯೂ ಇರಬೇಕು. ಅವರಲ್ಲಿ ಒಬ್ಬ ಮಹಾತ್ಮನನ್ನು ಜಾಪಕನನ್ನಾಗಿ (ಬ್ರಹ್ಮನನ್ನಾಗಿ) ಗೊತ್ತುಮಾಡಿಕೊಳ್ಳಬೇಕು.

೨. ದಿವ್ಯವಾದ ಸುಗಂಧ, ಸುವಾಸನಾಯುತವಾದ ಪುಷ್ಪಮಾಲಿಕೆಗಳು, ಸುವರ್ಣಾನ್ವಿತದ ದಕ್ಷಿಣೆ ಮೊದಲಾದುವುಗಳನ್ನು ದ್ವಿಗುಣವೆನ್ನುವಂತೆ ಕೊಟ್ಟು, ಆ ಇಪ್ಪತ್ತೈದು ಜನರನ್ನೂ ಶ್ರೇಷ್ಠರಾದವರನ್ನೇ ಗೊತ್ತುಮಾಡಬೇಕು.

ನಾರ್ಹಯಿತ್ವಾ ಯಥೋಕ್ತೇನ ಕಶ್ಚಿತ್ಪಾತ್ರಂ ನಿವೇಶಯೇತ್ ।
ಅನರ್ಹಿತೇಷು ವಿಪ್ರೇಷು ನ ಸಂಮ್ಯಕ್ಫಲಮಾಪ್ನುಯಾತ್ ॥ ೩ ॥

ಪ್ರತಿಷ್ಠಾದಿಷು ಸರ್ವೇಷು ಸಮ್ಯಗ್ವಿಪ್ರಾನಥಾರ್ಹಯೇತ್ ।
ಕುಶದ್ವಿಜಂ ತು ಸರ್ವತ್ರ ಅರ್ಘ್ಯಂ ವಿಷ್ಟರಮಾತ್ರಕಮ್ ॥ ೪ ॥

ಪ್ರದದ್ಯಾರ್ಹಣಂ ಸಮ್ಯಕ್ಪಶ್ಚಾತ್ಪಾತ್ರಂ ನಿವೇದಯೇತ್ ।
ವಿನಾರ್ಹಣಂ ಕೃತೇ ತಸ್ಮಿನ್ನರಕೇ ಪರಿಪಚ್ಯತೆ ॥ ೫ ॥

ಪ್ರತ್ಯೇಕಂ ಬ್ರಾಹ್ಮಣಾ ಯಜ್ಞೇ ವೇದಮಂತ್ರೇಷು ಪಾರಗಾಃ ।
ಆಚಾರ್ಯೋ ಯಾದಿ ಕಾರ್ಯೇಷು ವರಯೇದ್ದಶ ಗೋವ್ರಜಾನ್ ॥ ೬ ॥

ವಿಶಿಷ್ಟಾನಾಮಭಾವೇಽಪಿ ಕುರ್ಯಾತ್ಕುಶಮಯಾನ್ ದ್ವಿಜಾನ್ ।
ಕುಶಪ್ರತಿಕೃತೌ ಚಾಪಿ ಸ್ವಗೋತ್ರಂ ಸ್ವಂ ದ್ವಿಜಂ ವಿನಾ ॥ ೭ ॥

---

೩. ಯೋಗ್ಯನಾದವನನ್ನು ಉಕ್ತವಾದಕ್ರಮದಲ್ಲಿ ಪೂಜಿಸದೆ ಅಧ್ಯಯನ ವಿಹೀನನಾದ ಅಪಾತ್ರನಾದ ವ್ಯಕ್ತಿಯನ್ನು ಯಜ್ಞಕಾರ್ಯದಲ್ಲಿ ಕರೆತಂದುಕೂರಿಸಿ ಪೂಜಿಸ ಬಾರದು. ಹಾಗೆ ಅಂಥ ವಿಪ್ರನನ್ನು ಪೂಜಿಸಿದರೆ ಮಾಡಿದ ಕಾರ್ಯವು ಸಫಲವಾಗು ವುದಿಲ್ಲ

೪. ಮೂರ್ತಿ ಪ್ರತಿಷ್ಠೆ ಮೊದಲಾದ ಎಲ್ಲಾ ಕಾರ್ಯಗಳಲ್ಲಿಯೂ ಬ್ರಾಹ್ಮಣ ರನ್ನು ಚೆನ್ನಾಗಿ ಪೂಜಿಸಬೇಕು. ಕೂರ್ಚಪವಿತ್ರದಲ್ಲಿ ಬ್ರಾಹ್ಮಣನನ್ನು ಆವಾಹನೆ ಮಾಡಿದಪಕ್ಷದಲ್ಲಿ ಆಗಲೂ ಆಸನ ಅರ್ಘ್ಯಗಳನ್ನು ಕೊಟ್ಟು ಚೆನ್ನಾಗಿ ಪೂಜಿಸಿ ಅನಂ ತರ ಆ ಪಾತ್ರದಲ್ಲಿ ಆಹಾರಾದಿಗಳನ್ನು ನಿವೇದನಮಾಡಬೇಕು.

೫. ಬ್ರಾಹ್ಮಣನನ್ನು ಚೆನ್ನಾಗಿ ಪೂಜಿಸದೆ ಆ ಕೆಲಸಮಾಡಿದರೆ ಅಂಥವನು ನಿಶ್ಚಯವಾಗಿಯೂ ನರಕದಲ್ಲಿ ಬೇಯಬೇಕಾಗುತ್ತದೆ.

೬. ವೇದಮಂತ್ರಪಾರಂಗತರಾದ ಹಲವು ಮಂದಿ ಬ್ರಾಹ್ಮಣರನ್ನು ಯಜ್ಞ ಕಾರ್ಯದಲ್ಲಿ ಆಚಾರ್ಯ, ಹೋತೃ, ಉದ್ಗಾತೃ ಇತ್ಯಾದಿ ಸ್ಥಾನಗಳಲ್ಲಿ ಪ್ರತ್ಯೇಕವಾಗಿ ನಿಯ ಮಿಸಿಕೊಂಡು ಅವರಿಗೆ ಹತ್ತುಗೋವುಗಳನ್ನು ದಕ್ಷಿಣೆಯಾಗಿ ಕೊಡಬೇಕು.

೭. ಇಂತಹ ಬ್ರಾಹ್ಮಣರು ದೊರೆಯದೆ ಹೋದರೆ ದರ್ಭೆಯಲ್ಲಿ ಕೂರ್ಚೆ ಯನ್ನು ಕಟ್ಟಿ ಅವುಗಳಲ್ಲಿ ಬ್ರಾಹ್ಮಣರನ್ನು ಆವಾಹಿಸಬೇಕು. ಈ ರೀತಿ ದರ್ಭೆಯ

**ನಕುರ್ಯಾಚ್ಚರಣೋದ್ದೇಶಂ ತಥಾ ಪ್ರವರಸಂಹತಿಮ್ ।**
**ಗೋತ್ರಾದಿಕೀರ್ತನಾಂತೇಷು ಸ್ವನಾಮೋದ್ದೇಶಮೀರಯನ್ ॥ ೮ ॥**

**ತುಲಾಪುರುಷದಾನೇ ಚ ತಥಾ ಚ ಹಾಟಕಾಚಲೇ ।**
**ಕನ್ಯಾದಾನೇ ತಥೋತ್ಸರ್ಗೇ ಕೀರ್ತಯೇತ್ಪ್ರವರಾದಿಕಮ್ ॥ ೯ ॥**

**ನ ಪಾತ್ರಂ ಪ್ರತಿಕೃತ್ಯರ್ಥಂ ನ ಚಾಲಂ ಸೋದರಂ ತಥಾ ।**
**ಮೃತಭಾರ್ಯೋ ಹ್ಯಭಾರ್ಯಶ್ಚ ಅಪುತ್ರೋ ಮೃತಪುತ್ರಕಃ ॥ ೧೦ ॥**

**ಶೂದ್ರಸಂಸ್ಕಾರಕಶ್ಚೈವ ಕೃಪಣೋ ಗಣಯಾಜಕಃ ।**
**ಪ್ರಾಯಶ್ಚಿತ್ತಗೃಹೀತಶ್ಚ ರಾಜಯಾಜಕಪೈಶುನೌ ॥ ೧೧ ॥**

---

ಪ್ರತಿಕೃತಿಯ ಸ್ಥಾನಕ್ಕೆ ಸಾಮಾನ್ಯರನ್ನು ಸ್ವೀಕಾರಮಾಡುವಾಗಲೂ ಸ್ವಗೋತ್ರದವರು ಮತ್ತು ಸ್ವಕೀಯರು ಇವರನ್ನು ಬಿಟ್ಟು ಬೇರೆ ಬ್ರಾಹ್ಮಣರನ್ನೇ ನಿಯಮಿಸಬೇಕು.

೮. ಆಗ ಅವರಿಗೆ ಪಾದವಂದನ ಮಾಡಬೇಕಾದುದಿಲ್ಲ. ಸತ್ಪಾತ್ರರಿಗೆ ಪ್ರವರ ಪೂರ್ವಕವಾಗಿ ಗೋತ್ರ ಮುಂತಾದ್ದನ್ನು ಹೇಳಿ, ಕೊನೆಯಲ್ಲಿ ತನ್ನ ಹೆಸರನ್ನು ಹೇಳಿ ಕೊಂಡು ನಮಸ್ಕಾರಮಾಡಬೇಕು.

೯. ತುಲಾಭಾರ ತೂಗಿಸಿ ದಾನಮಾಡುವಾಗಲೂ, ಸುವರ್ಣ ಮೇರುಪರ್ವತ ದಾನ, ಕನ್ಯಾದಾನ ಈ ಸಮಯಗಳಲ್ಲಿಯೂ, ಉತ್ಸರ್ಜನಕಾಲದಲ್ಲಿಯೂ ಪ್ರವರ ಗೋತ್ರ ನಾಮ ಮುಂತಾದುವುಗಳನ್ನು ಹೇಳಿಯೇ ನಮಸ್ಕಾರಮಾಡಬೇಕು.

೧೦. ಕೂರ್ಚ ಪ್ರತಿಕೃತಿಸ್ಥಾನಕ್ಕೆ ಅಪಾತ್ರನಾದವನನ್ನಾಗಲಿ, ಅಥವಾ ಸೋದರರನ್ನಾಗಲಿ ಗೊತ್ತುಮಾಡಿಕೊಂಡು ಯಜ್ಞನಿರ್ವಾಹ ಮಾಡಬಾರದು. ಪತ್ನಿ ವಿಹೀನನಾದವನು, ಮದುವೆಯೇ ಆಗದವನು, ಮಕ್ಕಳಿಲ್ಲದವನು, ಪುತ್ರನನ್ನು ಕಳೆದುಕೊಂಡವನು ಇಂಥಹವರನ್ನೂ ಯಜ್ಞಕ್ಕೆ ನಿಯೋಗಿಸಬಾರದು.

೧೧-೧೪. ಶೂದ್ರನಿಂದ ಸಂಸ್ಕಾರಪಡೆದವನು, ಜಿಪುಣನಾದವನು, ಬೊಂಬಿ ಯಗುಂಪಿನಲ್ಲಿ ಸೇರಿ ಕ್ರಮಬದ್ಧವಲ್ಲದ ಯಾಗಮಾಡುವವನು, ಒಂದುಬಾರಿ ಪ್ರಾಯ ಶ್ಚಿತ್ತಕ್ಕೊಳಗಾದವನು, ರಾಜನ ಕೈಯ್ಯಲ್ಲಿ ಯಜ್ಞಮಾಡಿಸಿದವನು, ರಾಕ್ಷಸಕೃತ್ಯವ ನ್ನಾಚರಿಸಿದವನು, ಶೂದ್ರನಮನೆಯಲ್ಲಿ ವಾಸಮಾಡುವವನು, ಶೂದ್ರನಿಗೆ ಪ್ರೇರಣೆ

**ಶೂದ್ರಗೇಹನಿವಾಸೀ ಚ ಶೂದ್ರಪ್ರೇರಕ ಏವ ಚ ।**
**ಸ್ವಲ್ಪಕಂಠೋ ವಾಮನಶ್ಚ ವೃಷಲೀಪತಿರೇವ ಚ ॥ ೧೨ ॥**

**ಬಂಧುದ್ವೇಷೀ ಗುರುದ್ವೇಷೀ ಭಾರ್ಯಾದ್ವೇಷೀ ತಥೈವ ಚ ।**
**ಹೀನಾಂಗಶ್ಚೈವ ವೃದ್ಧಾಂಗೋ ಭಗ್ನದಂತಶ್ಚ ದಾಂಭಿಕಃ ॥ ೧೩ ॥**

**ಪ್ರತಿಗ್ರಾಹೀ ಚ ಕುನಖಃ ಪಾರದಾರಿಕ ಏವ ಚ ।**
**ಶ್ವಿತ್ರೀ ಕುಷ್ಠೀ ಕುಲೋದ್ಭೂತೋ ನಿದ್ರಾಲುರ್ವ್ಯಸನಾರ್ಥಕಃ ॥ ೧೪ ॥**

**ಅದೀಕ್ಷಿತಃ ಕದರ್ಯಶ್ಚ ಚಂಡರೋಗೀ ಗಲದ್ವ್ರಣಃ ।**
**ಮಹಾವ್ರಣೀ ಚ ಉದರೀ ಯಜ್ಞಪಾತ್ರಂ ನ ಕಾರಯೇತ್ ॥ ೧೫ ॥**

**ವರಣಾಂತೇ ತು ಪಾತ್ರಾಣಾಂ ಪೂಜಾಮನ್ತ್ರಾಞ್ಶೃಣು ದ್ವಿಜ ।**
**ಪ್ರತಿಮಂತ್ರೇಣ ಗಂಧಾದ್ಯೈರರ್ಚಯೇನ್ಮನ್ತ್ರವಿತ್ತಮಃ ॥ ೧೬ ॥**

---

ಮಾಡುವವನು, ಕುಗ್ಗಿದ ಧ್ವನಿಯುಳ್ಳವನು, ಕುಳ್ಳಾಗಿರುವವನು, ಶೂದ್ರಸ್ತ್ರೀಯಲ್ಲಿ ಆಸಕ್ತನು, ಬಂಧುಗಳ ಸಂಗಡಲೆಲ್ಲಾ ದ್ವೇಷಕಟ್ಟಿಕೊಂಡಿರುವವನು, ಗುರುವನ್ನು ದ್ವೇಷಿಸುವವನು, ಹೆಂಡತಿಯಲ್ಲಿ ಸಾಮರಸ್ಯವಿಲ್ಲದವನು, ಅಂಗಹೀನ, ಗಳಿತವಾದ ಅವಯವಉಳ್ಳವನು, ಹಲ್ಲುಗಳು ಬಿದ್ದವನು, ಡಂಭಗಾರ, ದುರ್ದಾನ ಸ್ವೀಕಾರ ಮಾಡತಕ್ಕವನು, ಸಮನಾದ ಉಗುರುಗಳಿಲ್ಲದವನು, ಪರಸ್ತ್ರೀಯಲ್ಲಿ ಆಸಕ್ತನಾದವನು ತೊನ್ನು, ಕುಷ್ಠ ಈ ರೋಗಗಳಿಂದ ಪೀಡಿತರಾದವರ ವಂಶೀಕ, ಸರ್ವದಾ ನಿದ್ದೆ ಮಾಡುವ ಸೋಮಾರಿ, ಸಪ್ತವ್ಯಸನಗಳಲ್ಲಿ ಆಸಕ್ತನಾದವನು; ಇಂಥವರೂ ಯಜ್ಞಾರ್ಹರಲ್ಲ.

೧೫. ದೀಕ್ಷೆಯ ನಿಯಮವನ್ನು ತಿಳಿಯದವನು, ಮನಶ್ಶುದ್ಧಿಯಿಲ್ಲದವನು, ಭಯಂಕರವಾದ ರೋಗದಿಂದ ಪೀಡಿತನಾದವನು, ಕೀವುಸೋರುವ ವ್ರಣವುಳ್ಳವನು, ಮಹಾವ್ರಣಗಳ ಬಾಧೆಗೊಳಗಾದವನು, ಮಹೋದರ ವ್ಯಾಧಿಯುಕ್ತ ಇಂಥವರನ್ನು ಯಜ್ಞಕಾರ್ಯದಲ್ಲಿ ಎಂದಿಗೂ ನಿಯೋಜಿಸಬಾರದು.

೧೬. ಈ ರೀತಿ ಪರಿಶೀಲಿಸಿ ಸತ್ಪಾತ್ರರಾದ ವ್ಯಕ್ತಿಗಳನ್ನು ನಿಯಮಿಸಿಕೊಂಡ ಮೇಲೆ ಅವರಿಗೆ ಮಾಡಬೇಕಾದ ಪೂಜಾದಿಗಳನ್ನೂ, ಆಗ ಹೇಳಬೇಕಾದ ಮಂತ್ರಗಳನ್ನೂ ಹೇಳುತ್ತೇನೆ; ಮಂತ್ರಜ್ಞನಾದವನು ಅವರಿಗೆ ಅರ್ಪಿಸಬೇಕಾದ ಗಂಧಪುಷ್ಪಾದಿಗಳೆಲ್ಲವನ್ನೂ ಮಂತ್ರಪೂರ್ವಕವಾಗಿಯೇ ಸಮರ್ಪಿಸಬೇಕು.

ಬ್ರಹ್ಮಮೂರ್ತಿಸ್ತ್ವಮಾಚಾರ್ಯಃ ಸಂಸಾರಾತ್ಪಾಹಿ ಮಾಂ ವಿಭೋ ।
ತ್ವತ್ಪ್ರಸಾದಾದ್ಗುರೋ ಯಜ್ಞಂ ಪ್ರಾಪ್ತೋಽಸ್ಮಿ ಯನ್ಮಯೇಪ್ಸಿತಮ್ ॥ ೧೭ ॥

ಚಿರಂ ಮೇ ಶಾಶ್ವತೀ ಕೀರ್ತಿರ್ಯಾವಲ್ಲೋಕಾಶ್ಚರಾಚರಾಃ ।
ಪ್ರಸೀದ ತ್ವಂ ಮಹೇಶಾನ ಪ್ರತಿಷ್ಠಾಕರ್ಮಸಿದ್ಧಯೇ ॥ ೧೮ ॥

ತ್ವಮಾದಿಃ ಸರ್ವಭೂತಾನಾಂ ಸಂಸಾರಾರ್ಣವತಾರಕಃ ।
ಜ್ಞಾನಾಮೃತಪ್ರದಾಚಾರ್ಯೋ ಯಜುರ್ವೇದ ನಮೋಽಸ್ತು ತೇ ॥ ೧೯ ॥

ಬ್ರಹ್ಮಣೈವ ಸಮುದ್ಭೂತ ಪ್ರಕಾಶಿತದಿಗಂತರ ।
ಶುದ್ಧಜಾಂಬೂನದಪ್ರಖ್ಯ ಯಜುರ್ವೇದ ನಮೋಽಸ್ತು ತೇ ॥ ೨೦ ॥

ಪ್ರತಪ್ತಕನಕಾಭಾಸ ಭಾಸಿತದ್ಯುತಿಭೂತಲ ।
ಮಂತ್ರಪ್ರಖ್ಯಾನಸಂಸ್ಥಾನ ಯಜುರ್ವೇದ ನಮೋಽಸ್ತು ತೇ ॥ ೨೧ ॥

---

೧೭-೧೮. ಎಲೈ ಆಚಾರ್ಯನೇ! ನೀನು ಬ್ರಹ್ಮಸ್ವರೂಪನು, ನನ್ನನ್ನು ಭವ ಬಂಧನದಿಂದ ತಪ್ಪಿಸಿ ಕಾಪಾಡು, ಎಲೈ ಗುರುವೇ! ನಿನ್ನ ಅನುಗ್ರಹದಿಂದ ನಾನು ಇಷ್ಟಾರ್ಥಪ್ರದವಾದ ಯಜ್ಞಕರ್ಮವನ್ನು ಆಚರಿಸುತ್ತಿದ್ದೇನೆ. ಚರಾಚರಾತ್ಮಕವಾದ ಈ ಲೋಕವು ಇರುವ ಪರ್ಯಂತ ಬಹುಕಾಲ ನನ್ನ ಕೀರ್ತಿಯು ಶಾಶ್ವತವಾಗಿರಲಿ, ಮಹೇಶ್ವರಸ್ವರೂಪನೇ! ನೀನು ನನ್ನಲ್ಲಿ ಪ್ರಸನ್ನನಾಗಿ ಈ ಪ್ರತಿಷ್ಠಾಕಾರ್ಯವು ಸಿದ್ಧಿಯಾಗುವಂತೆ ಅನುಗ್ರಹಿಸು.

೧೯. ಎಲೈ ಯಜುರ್ವೇದಸ್ವರೂಪನೇ! ನೀನು ಸಮಸ್ತಭೂತಗಳಿಗೂ ಆದಿಯೆನಿಸಿ ಸಂಸಾರಸಮುದ್ರದಿಂದ ನನ್ನನ್ನು ಉದ್ಧಾರಮಾಡುವ ಸಾಮರ್ಥ್ಯವುಳ್ಳವನಾಗಿರುವೆ, ಅಮೃತಸಮಾನವಾದ ಜ್ಞಾನವನ್ನುಂಟುಮಾಡುವ ಆಚಾರ್ಯಸ್ವರೂಪನಾದ ನಿನಗೆ ನಮಸ್ಕಾರಮಾಡುವೆನು.

೨೦. ಬ್ರಹ್ಮನ ಮುಖೋದ್ಗತವಾದುದೂ, ದಿಗಂತವನ್ನೆಲ್ಲಾ ಪ್ರಕಾಶಗೊಳಿಸತಕ್ಕುದೂ, ಅಪರಂಜಿಯ ಚಿನ್ನದಂತೆ ಮಿರುಗುತ್ತಿರುವುದೂ ಆದ ಯಜುರ್ವೇದಸ್ವರೂಪನೇ ನಿನಗೆ ನಮಸ್ಕಾರ.

೨೧. ಪುಟಕ್ಕೆ ಹಾಕಿದ ಭಂಗಾರದಂತೆ ಕಾಂತಿವಿಶೇಷದಿಂದ ಕೂಡಿ ಭೂಮಂಡಲವನ್ನೆಲ್ಲಾ ಪ್ರಕಾಶಮಯವಾಗಿ ಮಾಡಿದುದೂ, ಮಂತ್ರಸಮೂಹಗಳ ಸ್ಥಿತಿಗೆ ಆಶ್ರಯವಾದುದೂ ಆದ ಯಜುರ್ವೇದಸ್ವರೂಪನೇ ನಿನಗೆ ನಮಸ್ಕಾರಮಾಡುವೆನು.

ಪ್ರಫುಲ್ಲಕನಕಾಭಾಂಗಭಾಸ್ವದ್ಭೂಸುರಭೂಷಿತ ।
ಪ್ರಕೀರ್ಣಮಂತ್ರಸಂಭಾರವಿಧಿಜ್ಞ ಪ್ರಣತೋಽಸ್ಮಿ ತೇ ॥ ೨೨ ॥

ಷಡಂಗವೇದವೇದಜ್ಞ ಋತ್ವಿಙ್ಮೋಕ್ಷಪ್ರದೋ ಭವ ।
ಪ್ರವಿಶ್ಯ ಮಂಡಲಂ ವಿಪ್ರಾಃ ಸ್ವಸ್ಥಾನೇ ಸ್ಥಾಪಯೇತ್ಕ್ರಮಾತ್ ॥ ೨೩ ॥

ವೇದ್ಯಾಃ ಪಶ್ಚಿಮಭಾಗೇ ತು ಆಚಾರ್ಯಂ ಸ್ಥಾಪಯೇದ್ಬುಧಃ ।
ಕುಂಡಸ್ಯಾಗ್ರೇ ತು ಬ್ರಹ್ಮಾಣಂ ಮಂಡಲಸ್ಯೈವ ಪಶ್ಚಿಮೇ ॥ ೨೪ ॥

ಹೋತಾರಂ ಸ್ಥಾಪಯೇತ್ತತ್ರ ವಿಧಿಜ್ಞಮಥ ಚೋತ್ತರೇ ।
ದ್ವೌ ದ್ವೌ ಕೃತ್ವಾ ಜ್ಞಾಪಕೌ ಚ ಖಡ್ಗಧಾರಕಮೇವ ಚ ॥ ೨೫ ॥

ದ್ವಾರಿದ್ವಾರಿ ಪ್ರಯತ್ನೇನ ದ್ವಾರಪಾಲಾನನುಕ್ರಮಾತ್ ।
ವಕ್ಷ್ಯಮಾಣೇನ ಮಂತ್ರೇಣ ಪ್ರತ್ಯೇಕಮಥ ಸ್ಥಾಪಯೇತ್ ॥ ೨೬ ॥

---

೨೨. ಒಪ್ಪಹಾಕಿದ ಚಿನ್ನದಂತೆ ಅವಯವವುಳ್ಳವನಾಗಿ ಬ್ರಹ್ಮತೇಜೋಯುಕ್ತನೆನಿಸಿ ತೇಜಸ್ವಿಗಳಾದ ಬ್ರಾಹ್ಮಣವೃಂದಕ್ಕೆ ಭೂಷಣನೆನಿಸಿದವನೇ ! ಸರ್ವತೋಮುಖವಾಗಿ ವ್ಯಾಪಿಸಿರುವ ಮಂತ್ರಸಮೂಹ, ಯಜ್ಞಸಾಮಗ್ರಿಗಳು, ಯಜ್ಞವಿಧಾನ ಇವುಗಳೆಲ್ಲವನ್ನೂ ತಿಳಿದ ಮಹಾನುಭಾವನೇ ! ನಿನಗೆ ನಮಸ್ಕರಿಸುತ್ತೇನೆ.

೨೩. ವೇದ, ವೇದಾಂಗಗಳು ಇವುಗಳೆಲ್ಲವನ್ನೂ ತಿಳಿದ ಮಹನೀಯನೇ! ಈ ಋತ್ವಿಜರಿಗೂ ಮೋಕ್ಷವು ಲಭಿಸುವಂತೆ ಮಾಡು, ಎಂದು ಪ್ರಾರ್ಥಿಸಿ, ಯಜ್ಞಾರ್ಥವಾಗಿ ರಚಿಸಿರುವ ಮಂಟಪವನ್ನು ಪ್ರವೇಶಿಸಿ ಆ ಋತ್ವಿಜಬ್ರಾಹ್ಮಣರನ್ನು ಕ್ರಮವರಿತು ಅವರವರ ಸ್ಥಾನಗಳಲ್ಲಿ ಕೂರಿಸಬೇಕು.

೨೪-೨೫. ವಿದ್ವಾಂಸನಾದವನು ಯಜ್ಞವೇದಿಯ ಪಶ್ಚಿಮಭಾಗದಲ್ಲಿ ಆಚಾರ್ಯನನ್ನು ಕೂರಿಸಬೇಕು. ಮಂಡಲದ ಪಶ್ಚಿಮಭಾಗದಲ್ಲಿ ಅಗ್ನಿಕುಂಡದ ಸಮೀಪದಲ್ಲಿ ಬ್ರಹ್ಮನನ್ನೂ ಬ್ರಹ್ಮನ ಸಮೀಪದಲ್ಲಿ ಹೋತೃವನ್ನೂ ಕೂರಿಸಬೇಕು. ಉತ್ತರದಿಕ್ಕಿನಲ್ಲಿ ಹೋತೃವಿನ ಸಹಾಯಕ್ಕೆ ಇಬ್ಬರುಜ್ಞಾಪಕರನ್ನು (ಪ್ರೇಕ್ಷಕರನ್ನು) ಕೂರಿಸಬೇಕು.

೨೬. ಖಡ್ಗಧಾರಿಗಳಾಗಿರತಕ್ಕ ದ್ವಾರಪಾಲಕರು ಇಬ್ಬರು ಇರಬೇಕು. ಈ ಇಬ್ಬರನ್ನು ಪ್ರತಿಯೊಂದು ಬಾಗಿಲಿನಲ್ಲಿಯೂ ಪ್ರಯತ್ನಪೂರ್ವಕವಾಗಿ ಮುಂದೆ ಹೇಳುವ ಪ್ರತ್ಯೇಕವಾದ ಮಂತ್ರಪೂರ್ವಕವಾಗಿ ಸ್ಥಾಪಿಸಬೇಕು.

ಪೂಜಯೇದ್ಗಂಧಪುಷ್ಪಾದ್ಯೈರ್ವಾಸಸೋ ಯುಗಲೇನ ತು ।
ಯಜ್ಞೇ ಸವಿತತೇ ಯೋಽಸೌ ಪೂಜ್ಯತೇ ಪುರುಷಃ ಸದಾ ॥ ೨೭ ॥

ನಾರಾಯಣಸ್ವರೂಪೇಣ ಯಜ್ಞಂ ಮೇ ಸಫಲಂ ಕುರು ।
ಯಜ್ಞೇಷು ಸಾಕ್ಷೀ ಸರ್ವೇಷು ಯಜುರ್ವೇದಾರ್ಥತತ್ತ್ವವಿತ್ ॥ ೨೮ ॥

ಋಗ್ವೇದಾರ್ಥಸ್ಯ ತತ್ತ್ವಜ್ಞ ಇಂದ್ರರೂಪ ನಮೋಽಸ್ತು ತೇ ।
ಮಖಶ್ರೇಷ್ಠೇಷು ಸರ್ವೇಷು ಯೇನ ಮಂತ್ರಾಃ ಸುವಿಸ್ತೃತಾಃ ॥ ೨೯ ॥

ಯಜುರ್ವೇದಾರ್ಥತತ್ತ್ವಜ್ಞ ಬ್ರಹ್ಮರೂಪ ನಮೋಽಸ್ತು ತೇ ।
ಮಖಶ್ರೇಷ್ಠೇಷು ಸರ್ವೇಷು ಏಷ ಏವ ವಿಧಿಃ ಸ್ಮೃತಃ ॥ ೩೦ ॥

ಮಾಂಗಲ್ಯಂ ಕರ್ಮಣಾಂ ನಿತ್ಯಂ ಸರ್ವಜ್ಞಂ ಜ್ಞಾನರೂಪಿಣಂ ।
ಸಿದ್ಧಯೇ ಮಮ ಯಜ್ಞಸ್ಯ ನಮಾಮಿ ಶಿವರೂಪಿಣಂ ॥ ೩೧ ॥

---

೨೭–೨೮. ಅವರಲ್ಲಿ ಪ್ರತಿಯೊಬ್ಬನಿಗೂ ಒಂದು ಜೊತೆ ವಸ್ತ್ರವನ್ನು ಕೊಟ್ಟು, ಗಂಧ ಹೂವು ಮುಂತಾದುವುಗಳಿಂದ ಪೂಜಿಸಿ "ಯಜುರ್ವೇದದ ಅರ್ಥತತ್ತ್ವವನ್ನು ತಿಳಿದವನೂ, ಶ್ರೇಷ್ಠವಾದ ಈ ಮಹಾಯಜ್ಞದಲ್ಲಿ ಯಜ್ಞಪುರುಷನೆನಿಸಿದವನೂ ಆದ ನೀನು ಸರ್ವಯಜ್ಞಗಳಲ್ಲಿಯೂ ಸಾಕ್ಷಿ ಎನಿಸಿಕೊಂಡು ಯಾವಾಗಲೂ ನಾರಾಯಣಸ್ವರೂಪದಿಂದ ಪೂಜಿತನಾಗುತ್ತಾ ನನ್ನ ಯಜ್ಞವನ್ನು ಸಫಲಗೊಳಿಸು."

೨೯. "ಶ್ರೇಷ್ಠವೆನಿಸಿದ ಯಜ್ಞಗಳಲ್ಲೆಲ್ಲಾ ತತ್ತ್ವವನ್ನು ವಿಸ್ತಾರವಾಗಿ ಹೇಳತಕ್ಕವನೂ, ಋಗ್ವೇದದ ಅರ್ಥತತ್ತ್ವ ಇವನ್ನು ತಿಳಿದವನೂ ಆದ ಇಂದ್ರಸ್ವರೂಪನೇ! ನಿನಗೆ ನಮಸ್ಕಾರ" ವೆಂದು ಹೇಳಬೇಕು.

೩೦. "ಯಜುರ್ವೇದದ ಅರ್ಥವನ್ನೂ ತತ್ತ್ವವನ್ನೂ ತಿಳಿದ ಬ್ರಹ್ಮಸ್ವರೂಪನೇ! ನಿನಗೆ ನಮಸ್ಕಾರ" ಎಂದು ಹೇಳಬೇಕು. ಶ್ರೇಷ್ಠವಾದ ಎಲ್ಲಾ ಯಜ್ಞಗಳಲ್ಲಿಯೂ ಇದೇ ವಿಧಿಯನ್ನು ಅನುಸರಿಸತಕ್ಕದ್ದೆಂದು ತಿಳಿಯಬೇಕು.

೩೧. "ಸರ್ವಜ್ಞನೂ, ಜ್ಞಾನಸ್ವರೂಪನೂ, ಶಾಶ್ವತನೂ, ಸರ್ವಕರ್ಮಗಳಿಗೂ ಮಂಗಳಸ್ವರೂಪನೂ, ಪರಮೇಶ್ವರನೂ ಆದ ಯಜ್ಞಪುರುಷನನ್ನು ನನ್ನ ಯಜ್ಞದ ಸಿದ್ಧಿಗಾಗಿ ನಮಸ್ಕರಿಸುತ್ತೇನೆ."

ಪಾಲಯ ತ್ವಂ ದಿಶಃ ಸರ್ವಾ ವಿದಿಶಶ್ಚ ತಥಾ ಇಮಂ ।
ದಿಕ್ಪಾಲರೂಪಿಣಂ ವಿಪ್ರಂ ಯಜ್ಞಸಿದ್ಧ್ಯೈ ನಮಾಮ್ಯಹಂ ॥ ೩೨ ॥

ನ ಸಂಕಲ್ಪಂ ಚರೇದ್ಯಾಗಂ ವ್ರತಂ ದೇವಾರ್ಚನಂ ತಥಾ ।
ಸಂಕಲ್ಪಮೂಲಃ ಕಾಮೋ ವೈ ಯಜ್ಞಾಃ ಸಂಕಲ್ಪಸಂಭವಾಃ ।
ಸಂಕಲ್ಪೇನ ವಿನಾ ವಿಪ್ರಾ ಯತ್ಕಿಂಚಿತ್ಕುರುತೇ ನರಃ ॥ ೩೩ ॥

ಫಲಂ ಚಾಲ್ಪಾಲ್ಪಕಂ ತಸ್ಯ ಧರ್ಮಸ್ಯಾರ್ಧಕ್ಷಯೋ ಭವೇತ್ ।
ತಸ್ಮಾತ್ಸರ್ವಪ್ರಯತ್ನೇನ ಯಾಗಂ ಸಂಕಲ್ಪಯೇತ್ಸುಧೀಃ ॥ ೩೪ ॥

ಕಾಮಾತ್ಪರೋ ನೈವಭವೇನ್ನಿಷ್ಕಾಮೋऽಪಿ ನ ಶೋಭನಃ ।
ತಸ್ಮಾತ್ಕಾಮಮಯಂ ಧರ್ಮಂ ವಿನಾಮೋಕ್ಷಂ ನ ಚಾಚರೇತ್ ॥ ೩೫ ॥

---

೩೨. "ಎಲೈ ಯಜ್ಞಪುರುಷಸ್ವರೂಪನಾದ ಪರಮಾತ್ಮನೇ! ನೀನು ಎಲ್ಲಾ ದಿಕ್ಕುಗಳನ್ನೂ ವಿದಿಕ್ಕುಗಳನ್ನೂ ಕಾಪಾಡು, ದಿಕ್ಪಾಲಸ್ವರೂಪನಾದ ಈ ವಿಪ್ರನನ್ನು ಯಜ್ಞಸಿದ್ಧಿಗಾಗಿ ನಾನು ನಮಸ್ಕರಿಸುವೆನು. ಎಂದು ಹೇಳಬೇಕು."

೩೩-೩೪. ಯಾಗ, ವ್ರತ, ದೇವತಾರ್ಚನೆ ಇವುಗಳನ್ನು ಸಂಕಲ್ಪಮಾಡದೆ ಎಂದೂ ಪ್ರಾರಂಭಿಸಬಾರದು. ಸಂಕಲ್ಪಮಾಡಿದರೆ ಅದನ್ನು ನೆರವೇರಿಸಲೇಬೇಕೆಂಬ ಅಪೇಕ್ಷೆಹುಟ್ಟುವುದು. ಯಜ್ಞವೂ ಸಂಕಲ್ಪದಿಂದಲೇ ಹುಟ್ಟುವುದು. ಸಂಕಲ್ಪಮಾಡದೆ ಮನುಷ್ಯನು ಯಾವ ಕೆಲಸಮಾಡಿದರೂ ಅದಕ್ಕೆ ಯಥೋಕ್ತವಾದ ಫಲವು ಲಭಿಸದೆ ಸ್ವಲ್ಪಫಲ ಮಾತ್ರ ದೊರೆಯುವುದು. ಸಂಕಲ್ಪಮಾಡದೆ ನಡೆಸಿದರೆ ತನಗೆ ಲಭಿಸ ಬೇಕಾಗಿದ್ದ ಧರ್ಮದಲ್ಲಿ ಅರ್ಧಭಾಗವು ಕ್ಷೀಣವಾಗಿ ಹೋಗುವುದು. ಆದುದರಿಂದ ಬುದ್ಧಿಶಾಲಿಯಾದವನು ಸರ್ವಪ್ರಯತ್ನದಿಂದ ಸಂಕಲ್ಪಪೂರ್ವಕವಾಗಿ ಯಾಗಮಾಡ ಬೇಕು.

೩೫-೩೬. ಸಂಕಲ್ಪಕಾಲದಲ್ಲಿ ಯಾವ ಫಲವನ್ನುದ್ದೇಶಿಸಿ ಹೇಳುವೆವೋ ಅದ ಕ್ಕಿಂತ ಬೇರೆಯಾದ ಫಲವಾಗುವುದೇ ಇಲ್ಲ. ನಿಷ್ಕಾಮಕರ್ಮದಿಂದ ಆಚರಿಸಿದರೇ ಹೊರತು ಕಾಮ್ಯಕರ್ಮದಿಂದ ಎಂದಿಗೂ ಮೋಕ್ಷವು ಲಭಿಸಲಾರದು. ಧರ್ಮವು ಕಾಮ್ಯಸಿದ್ಧಿಗಾಗಿ ಆಚರಿಸಲ್ಪಡುವುದು. ನಿಷ್ಕಾಮಕರ್ಮದಿಂದ ಮೋಕ್ಷ ಲಭಿಸುವು

**ಸಂಕಲ್ಪೇನ ವಿನಾ ಯಸ್ತು ಧರ್ಮಂ ಚರತಿ ಮಾನವಃ ।**
**ನ ತಸ್ಯ ಫಲಮಾಪ್ನೋತಿ ನಿತ್ಯನೈಮಿತ್ತಿಕಸ್ಯ ಚ　　　　॥ ೩೬ ॥**

**ನ ಕುರ್ಯಾತ್ಸ್ಥಾಪನೇ ಚೈವ ಕುರ್ಯಾದ್ವೈ ಮಂಡಲಾಂತರೇ ।**
**ಗೃಹೀತ್ವೌದುಂಬರಂ ಪಾತ್ರಂ ವಾರಿಪೂರ್ಣಂ ಗುಣಾನ್ವಿತಂ　　　　॥ ೩೭ ॥**

**ಜಲಾಶಯಾರಾಮಕೂಪಸಂಕಲ್ಪೇ ಪೂರ್ವದಿಙ್ಮುಖಃ ।**
**ಸಾಧಾರಣೇ ಚೋತ್ತರಾಸ್ಯೋ ಗೃಹಯಜ್ಞೇ ತು ಸಂಮುಖಃ　　　　॥ ೩೮ ॥**

**ಮಹಾವ್ರತೇ ಪ್ರತಿಷ್ಠಾಯಾಂ ಪಾತ್ರಂ ತಾಮ್ರಂ ಹಿರಣ್ಮಯಂ ।**
**ರಾಜತಾಶ್ಮಮಯಂ ಸಾಂಗಂ ಯದ್ಯಜ್ಞೇಷು ಪ್ರಶಸ್ಯತೆ　　　　॥ ೩೯ ॥**

---

ಡೆಂದು ತಿಳಿದರೂ ನಿಷ್ಕಾಮಕರ್ಮಮಾಡಲು ಪ್ರಯತ್ನಿಸದೆ ಕಾಮ್ಯಕರ್ಮದಲ್ಲೇ ಪ್ರಯತ್ನಿಸುವವನಿಗೂ, ಕಾಮ್ಯ ಮತ್ತು ನಿಷ್ಕಾಮ್ಯ ಕರ್ಮಗಳಲ್ಲಿ ಸಂಕಲ್ಪವಿಲ್ಲದೆ ಧರ್ಮಾಚರಣೆ ಮಾಡುವವನಿಗೂ ಫಲವು ಲಭಿಸುವುದಿಲ್ಲ.

೩೭ ನಿತ್ಯಕರ್ಮಾಚರಣೆಯಲ್ಲೂ, ನೈಮಿತ್ತಿಕಕರ್ಮದಲ್ಲೂ, ಮೂರ್ತಿಪ್ರತಿಷ್ಠಾಪನಕರ್ಮದಲ್ಲೂ, ಕಾಮ್ಯಫಲಾಕಾಂಕ್ಷೆಯ ಸಂಕಲ್ಪಮಾಡಬಾರದು. ಮಂಡಲಾಂತರವನ್ನು ಮಾಡುವುದಾದರೆ ಆಗ ಕಾಮ್ಯಫಲಾಕಾಂಕ್ಷೆಯ ಸಂಕಲ್ಪಮಾಡಬಹುದು ತತ್ಪೂರ್ವವಾಗಿ ಈ ಕಾರ್ಯದಲ್ಲಿ ಅತ್ತಿಯಮರದಿಂದ ಮಾಡಿದ ಪಾತ್ರೆಯೊಂದನ್ನು ತೆಗೆದುಕೊಂಡು ಅದರ ತುಂಬ ನೀರು ತುಂಬಿಡಬೇಕು.

೩೮. ಜಲಾಶಯಪ್ರತಿಷ್ಠೆ,ಆರಾಮಪ್ರತಿಷ್ಠೆ,ಕೂಪಪ್ರತಿಷ್ಠೆ ಇವನ್ನು ಮಾಡುವ ಸಂದರ್ಭದಲ್ಲಿ ಪೂರ್ವಾಭಿಮುಖವಾಗಿಕುಳಿತು ಸಂಕಲ್ಪಮಾಡಬೇಕು. ಮಿಕ್ಕ ಸಾಮಾನ್ಯ ಸಂದರ್ಭಗಳಲ್ಲಿ ಉತ್ತರಾಭಿಮುಖವಾಗಿಯೂ, ಗೃಹಪ್ರವೇಶದ ಸಂದರ್ಭದಲ್ಲಿ ಗೃಹಾಭಿಮುಖವಾಗಿಯೂ ಕುಳಿತು ಸಂಕಲ್ಪಮಾಡಬೇಕು.

೩೯. ಮಹಾವ್ರತಾಚರಣೆಯಲ್ಲಿಯೂ,ಪ್ರತಿಮಾಪ್ರತಿಷ್ಠೆಯಲ್ಲಿಯೂ ತಾಮ್ರದ ಪಾತ್ರೆ, ಚಿನ್ನದಪಾತ್ರೆ, ಬೆಳ್ಳಿಯಪಾತ್ರೆ, ಕಲ್ಲಿನಪಾತ್ರೆ ಇವುಗಳುಕಲಶಕ್ಕೆ ಅರ್ಹವಾದುವು ಯಾವ ಯಜ್ಞಕ್ಕೆ ಯಾವುದು ಶ್ರೇಷ್ಠವೋ ಅದನ್ನು ತಿಳಿದು ಅಂಗಸಹಿತವಾಗಿರುವಂತೆ ಸಿದ್ಧಮಾಡಬೇಕು.

ಯಜ್ಞೀಯಪಾತ್ರಪುಟಕಂ ಹಸ್ತಸ್ಥಾನೇ ಪ್ರಕೀರ್ತಿತಂ ।
ಐಶಾನ್ಯಾಂ ನಿಕ್ಷಿಪೇತ್ತೋಯಂ ಪ್ರತಿಷ್ಠಾಯಾಂ ಚ ಪೂರ್ವತಃ ॥ ೪೦ ॥

ಆಕಾಶೇ ನಿಕ್ಷಿಪೇದ್ಯಾಗೇ ವ್ರತೇ ಈಶೇಪಿ ನಿತ್ಯಕೇ ।
ಪಿತೃಮೇಧೇ ಚ ಗೋಯಾಗೇ ನರಮೇಧೇ ಚ ದಕ್ಷಿಣೇ ॥ ೪೧ ॥

ಶುಕ್ತಿಕಾಂಸ್ಯಾದಿಹಸ್ತೈಶ್ಚ ತಾಮ್ರರೌಪ್ಯಾದಿಭಿಸ್ತಥಾ ।
ಸಂಕಲ್ಪೋ ನೈವ ಕರ್ತವ್ಯೋ ಮೃನ್ಮಯೇ ಚ ಕದಾಚನ ॥ ೪೨ ॥

ಪ್ರಣವಂ ಪೂರ್ವಮುಚ್ಚಾರ್ಯ ಯಜೇದ್ಯಜ್ಞೇಶ್ವರಂ ಸ್ಮರೇತ್ ।
ಗಂಗಾ ಚಾದಿತ್ಯಚಂದ್ರೌ ಚ ದ್ಯೌರ್ಭೂಮೀ ರಾತ್ರಿವಾಸರೌ ॥ ೪೩ ॥

---

೪೦. ಹಸ್ತವನ್ನು ಉಪಯೋಗಿಸುವ ಸ್ಥಾನದಲ್ಲಿ ಯಜ್ಞಸಂಬಂಧವಾದ ಪುಟ್ಟ ಪಾತ್ರೆಯನ್ನು ಉಪಯೋಗಿಸಬೇಕು. ಪ್ರತಿಷ್ಠಾಪನಕಾರ್ಯದಲ್ಲಿ ಈಶಾನ್ಯದಿಕ್ಕಿಗೆ ಕಲಶ ಜಲವನ್ನು ಅರಿಷ್ಟ ನಿರಸನಾರ್ಥವಾಗಿ ಎರಚಬೇಕು.

೪೧. ಯಾಗಕರ್ಮದಲ್ಲಿಯೂ, ನಿತ್ಯಕರ್ಮದಲ್ಲಿಯೂ ಪೂರ್ವದಿಕ್ಕಿಗೆ (ಆಕಾಶದಕಡೆ) ಆ ಜಲವನ್ನು ಎರಚಬೇಕು. ಪಿತೃಯಜ್ಞ, ಗವಾಲಂಭಯಾಗ, ನರಮೇಧ ಯಜ್ಞ ಇವುಗಳಲ್ಲಿ ಆ ಜಲವನ್ನು ದಕ್ಷಿಣದಿಕ್ಕಿಗೆ ಎರಚಬೇಕು.

೪೨. ಹೀಗೆ ಎರಚುವುದಕ್ಕಾಗಿ ಕೈಯಲ್ಲಿ ಮುತ್ತಿನಚಿಪ್ಪನ್ನೋ ಅಥವಾ ಕಂಚು, ತಾಮ್ರ, ಬೆಳ್ಳಿ ಮೊದಲಾದ ಲೋಹಗಳ ಉದ್ಧರಣೆಯನ್ನೋ ಉಪಯೋಗಿಸಬೇಕು. ಮೃಣ್ಮಯಸಾಧನದಿಂದ ಪ್ರಕ್ಷೇಪಣೆಮಾಡುವುದಕ್ಕೆ ಯಾವಾಗಲೂ ಸಂಕಲ್ಪಮಾಡಬೇಕಾದ್ದಿಲ್ಲ.

೪೩. ಮೊದಲು ಓಂಕಾರಪೂರ್ವಕ ಮಂತ್ರವನ್ನು ಹೇಳಿ ಯಜ್ಞೇಶ್ವರನನ್ನು ಪೂಜಿಸಬೇಕು. ಗಂಗೆ, ಸೂರ್ಯ, ಚಂದ್ರ, ಆಕಾಶ, ಭೂಮಿ, ಹಗಲುರಾತ್ರಿಗಳು ಇವುಗಳನ್ನು ಸ್ಮರಣೆಮಾಡಬೇಕು.

**ಸೂರ್ಯಃ ಸೋಮೋ ಯಮಃ ಕಾಲೋ ಮಹಾಭೂತಾನಿ ಪಂಚ ಚ ।**
**ಏತೇ ಶುಭಾಶುಭಸ್ಯೇಹ ಕರ್ಮಣೋ ನವ ಸಾಕ್ಷಿಣಃ ॥ ೪೪ ॥**

**ಇತ್ಯುಚ್ಚಾರ್ಯ ನ್ಯಸೇದ್ಧರ್ಮಂ ಧ್ಯಾತ್ವಾ ಪುಷ್ಪಾಂಜಲಿಂ ಸೃಜೇತ್ ।**
**ಅಮೃತೀಕೃತ್ಯ ಪಾತ್ರೇ ಚಃಓಂತತ್ಸದಿತಿ ನಿರ್ದಿಶೇತ್ ॥ ೪೫ ॥**

**ಧರ್ಮಃ ಶುಭ್ರವಪುಃ ಸಿತಾಂಬರಧರಃ ಕಾರ್ಯೋರ್ಧ್ವದೇಶೇ ವೃಷೋ ।**
**ಹಸ್ತಾಭ್ಯಾಮುಭಯಂ ವರಂ ಚ ಸತತಂ ರೂಪಂ ಪರಂ ಯೋ ದಧತ್ ॥**
**ಸರ್ವಪ್ರಾಣಿಸುಖಾವಹಃ ಕೃತಧಿಯಾಂ ಮೋಕ್ಷೈಕಹೇತುಃ ಸದಾ ॥**
**ಸೋಽಯಂ ಪಾತು ಜಗಂತಿ ಚೈವ ಸತತಂ ಭೂಯಾತ್ಸತಾಂ ಭೂತಯೇ ॥ ೪೬ ॥**

**ಯಜ್ಞಸಂಬಂಧಿವಿಪ್ರಾಂಶ್ಚ ಏಕಾಹೇನೈವ ಯೋಜಯೇತ್ ।**
**ಹವಿರ್ದ್ರವ್ಯಾಣಿ ಯಾನಿ ಸ್ಯುರಷ್ಟಯಾಗಾಂತರೇಽಪಿ ಚ ॥ ೪೭ ॥**

---

೪೪. ಆದಿತ್ಯ, ಸೋಮ, ಯಮ, ಕಾಲ, ಪಂಚಮಹಾಭೂತಗಳು ಈ ಒಂಭತ್ತೂ ಮಾನವರ ಶುಭಾಶುಭಕರ್ಮಗಳೆರಡಕ್ಕೂ ಸಾಕ್ಷಿಗಳಾಗಿರಲಿ ಎಂಬದಾಗಿ ಹೇಳಿ ಅವುಗಳನ್ನು ಅಲ್ಲಿ ನ್ಯಾಸಮಾಡಬೇಕು.

೪೫. ಬಳಿಕ ಧರ್ಮದೇವತೆಯನ್ನು ಧ್ಯಾನಮಾಡಿ ಬೊಗಸೆಯಲ್ಲಿ ಹೂವನ್ನು ಅರ್ಪಿಸಬೇಕು. ಆ ಮೇಲೆ 'ಓಂ ತತ್ಸತ್' ಎಂಬದಾಗಿ ಹೇಳಿ ಪಾತ್ರೆಯಲ್ಲಿನ ನೀರಿನ ಕಡೆ ನಿರ್ದೇಶಮಾಡಿ ಅಮೃತೀಕರಣಮಾಡಬೇಕು.

೪೬. "ಶುಭ್ರವಾದ ದೇಹವುಳ್ಳವಳೂ, ಬಿಳಿಯವಸ್ತ್ರವನ್ನು ಧರಿಸಿರುವವಳೂ, ಮೇಲ್ಭಾಗದ ಶರೀರವು ವೃಷಭಾಕೃತಿಯಾಗಿರುವವಳೂ, ಅಭಯಹಸ್ತ ವರದಹಸ್ತಗಳನ್ನುಳ್ಳವಳೂ, ಉತ್ಕೃಷ್ಟವಾದ ರೂಪವನ್ನು ಧರಿಸಿರುವವಳೂ, ಸಮಸ್ತಪ್ರಾಣಿಗಳಿಗೂ ಸುಖವನ್ನುಂಟುಮಾಡತಕ್ಕವಳೂ, ಜ್ಞಾನಿಗಳಾದ ಧನ್ಯರಿಗೆ ಸದಾ ಮೋಕ್ಷವನ್ನು ಕರುಣಿಸತಕ್ಕವಳೂ ಆದ ಈ ಧರ್ಮದೇವತೆಯು ಜಗತ್ತಿನಲ್ಲಿ ಯಾವಾಗಲೂ ಸಜ್ಜನರಿಗೆ ಸಂಪತ್ತನ್ನು ಕೊಡುವವಳಾಗಲಿ" ಎಂದು ಪ್ರಾರ್ಥಿಸಬೇಕು.

೪೭. ಯಜ್ಞಕ್ಕೆ ಸಹಾಯಕರಾದ ಬ್ರಾಹ್ಮಣರನ್ನು ಒಂದೇದಿವಸದಲ್ಲಿ ಜೊತೆ ಮಾಡಿಕೊಳ್ಳಬೇಕು. ಹವಿಸ್ಸಿನ ದ್ರವ್ಯಗಳು ಯಾಗಕ್ಕೆ ಏನೇನು ಬೇಕೋ ಅವುಗಳನ್ನು ಒಟ್ಟುಗೂಡಿಸಿದ್ದುದನ್ನು ಎಂಟು ಯಾಗಗಳಿಗಾದರೂ ಉಪಯೋಗಿಸಬಹುದು.

**ಪುನಃಪುನರ್ನಿಯೋಜ್ಯಾನಿ ಬ್ರಾಹ್ಮಣಾ ಹವಿರಗ್ನಯಃ ॥ ೪೮ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮ ಪರ್ವಣಿ ದ್ವಿತೀಯ ಭಾಗೇಽಷ್ಟಾದಶೋಽಧ್ಯಾಯಃ**



---

೪೮. ಆದರೆ ಬ್ರಾಹ್ಮಣರು, ಹವಿಸ್ಸು, ಅಗ್ನಿ ಇವುಗಳನ್ನು ಮಾತ್ರ ಪ್ರತಿಯೊಂದು ಯಜ್ಞದಲ್ಲಿಯೂ ಪುನಃ ಪುನಃ ಹುಡುಕಿ ಹೊಂದಿಸಿಕೊಳ್ಳಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಎರಡನೆಯ ಭಾಗದಲ್ಲಿ ಹದಿನೆಂಟನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ದ್ವಿತೀಯಭಾಗೇ

## ಏಕೋನವಿಂಶೋಽಧ್ಯಾಯಃ

॥ ಸೂತ ಉವಾಚ ॥

ಮಾಘಾದಿ ಮಾಸೇಷ್ವಪಿ ಷಟ್ಸು ಕಾರ್ಯಾ ಯೋಗಪ್ರತಿಷ್ಠಾ ಋಷಿಭಿಃ ಪ್ರಣೀತಾ ।
ದೇವಾದಿಸಂಸ್ಥಾಪನಮಾಹುರತ್ರ ಯಾವನ್ನ ಸುಪ್ತೋ ಮಧುಸೂದನಶ್ಚ ॥ ೧ ॥

ವಾರೇ ಭೃಗೋರ್ದೇವಗುರೋರ್ಬುಧಸ್ಯ ಸೋಮಸ್ಯ ಸರ್ವಾಃ ಶುಭದಾ ಭವಂ ॥
ಲಗ್ನೇ ಶುಭಸ್ಥೇ ಶುಭವೀಕ್ಷಿತೇ ವಾ ಕಾರ್ಯಾ ಪ್ರತಿಷ್ಠಾ ಚ ಜಲಾಶಯಾನಾಂ ॥ ೨ ॥

---

### ಹತ್ತೊಂಭತ್ತನೆಯ ಅಧ್ಯಾಯ

೧. ಸೂತರು ಶೌನಕಾದಿಮುನಿಗಳಿಗೆ ಹೇಳುತ್ತಾರೆ—ಮಾಘಮಾಸ ಮೊದಲುಗೊಂಡು ಆರುತಿಂಗಳಲ್ಲಿ ಎಂದರೆ ವಿಷ್ಣುವು ಶಯನಮಾಡುವ ಪ್ರಥಮೈಕಾದಶೀ ಪರ್ಯಂತ ತಟಾಕಪ್ರತಿಷ್ಠೆ. ದೇವತಾಪ್ರತಿಷ್ಠೆ ಮುಂತಾದ ಕಾರ್ಯಗಳನ್ನು ಮಾಡಲು ಋಷಿಗಳು ಕಾಲವನ್ನು ನಿರ್ಣಯಿಸಿರುವರೆಂದು ಪ್ರಾಜ್ಞರು ಹೇಳುತ್ತಾರೆ.

೨. ಶುಕ್ರವಾರ ಗುರುವಾರ ಮತ್ತು ಬುಧವಾರ ಸೋಮವಾರಗಳು ಈ ಕಾರ್ಯಕ್ಕೂ ಇತರ ಎಲ್ಲಾ ಕಾರ್ಯಗಳಿಗೂ ಶುಭಕರಗಳಾಗಿವೆ. ಲಗ್ನದಲ್ಲಿ ಶುಭಗ್ರಹಗಳಿರುವಾಗಲೂ ಲಗ್ನಕ್ಕೆ ಶುಭಗ್ರಹಗಳ ವೀಕ್ಷಣೆಯಿರುವಾಗಲೂ ಸಹ ಜಲಾಶಯಪ್ರತಿಷ್ಠಾಕಾರ್ಯವನ್ನು ಮಾಡಬೇಕೆಂದು ಹೇಳಿದೆ.

**ಶುದ್ಧಾ ದ್ವಿತೀಯಾ ಚ ತಥಾ ತೃತೀಯಾ ತ್ರಯೋದಶೀ ಚಾಪಿ ತಥೈವ ವಿಪ್ರಾಃ ।**
**ತಥಾಪಿ ಸಪ್ತಮ್ಯಪಿ ಪೌರ್ಣಮಾಸೀ ದಶಮ್ಯಸೌ ಚಾಪ್ಯಥ ಪಂಚಮೀ ಚ ॥ ೩ ॥**

**ಪ್ರಾಣಪ್ರತಿಷ್ಠಾ ಚ ಜಲಾಶಯಾದೇರೇತಾಃ ಪ್ರಶಸ್ತಾಸ್ತಿಥಯೋ ಭವಂತಿ ॥**
**ಅಪ್ರಾಪ್ಯ ಚೈತಾನಿ ಶುಭಾನಿ ಯಾನಿ ಕಾರ್ಯಾ ಪ್ರತಿಷ್ಠಾ ವಿಷುವದ್ವಯೇ ಚ ॥ ೪ ॥**

**ಷಡಶೀತಿಲೋಕಾಪ್ಯಯನದ್ವಯೇನ ಯುಗಾದಿಕೇ ಪುಣ್ಯದಿನೇ ಶುಭೇ ಚ ॥**
**ಕಾರ್ಯಾ ತಡಾಗಾದಿಜಲಾಶಯಸ್ಯ ಪ್ರಾಚ್ಯಾಂ ಪ್ರತಿಷ್ಠಾ ಅಥ ಚೋತ್ತರೇ ವಾ ॥ ೫ ॥**

**ಸುಚಾರು ಈಷತ್ಪ್ರವಣೇ ಚ ದೇಶೇ ಸುವರ್ತುಲಃ ಷೋಡಶಹಸ್ತಮಂಡಪಃ ।**
**ದ್ವಾರೈಶ್ಚತುರ್ಭಿಃ ಪ್ರಥಿತೈರುಪೇತಶ್ಚತುರ್ಮುಖಶ್ಚಾಪಿ ಭವೇತ್ಸುರೇತಾಃ ॥ ೬ ॥**

---

೩. ಶುಕ್ಲಪಕ್ಷದಲ್ಲಿ ಬಿದಿಗೆ, ತದಿಗೆ, ತ್ರಯೋದಶೀ, ಸಪ್ತಮೀ, ಪೂರ್ಣಿಮಾ, ದಶಮೀ ಮತ್ತು ಪಂಚಮೀ ಈ ತಿಥಿಗಳು ಮೂರ್ತಿಪ್ರತಿಷ್ಠಾ, ಜಲಾಶಯಪ್ರತಿಷ್ಠಾ ಮುಂತಾದ್ದಕ್ಕೆ ಪ್ರಶಸ್ತವಾದುವುಗಳು.

೪-೫. ಇಂತಹ ಶುಭತಿಥಿಗಳೂ ಶುಭವಾರಗಳೂ ಯುಕ್ತವಾಗಿರುವ ಸಮಯವು ಒಂದುವೇಳೆ ಒದಗದೆಹೋದರೆ ವಿಷುವತ್ಪುಣ್ಯಕಾಲ, ಷಡಶೀತಿಪುಣ್ಯಕಾಲ, ಉತ್ತರಾಯಣಪುಣ್ಯಕಾಲ, ದಕ್ಷಿಣಾಯನಪುಣ್ಯಕಾಲ ಇವುಗಳಲ್ಲಿಯೂ ಯುಗಾದಿ ಮುಂತಾದ ಶುಭದಿನದಲ್ಲಿಯೂ, ತಟಾಕ ಮುಂತಾದುವುಗಳ ಪ್ರತಿಷ್ಠಾದಿಗಳನ್ನು ಮಾಡಬಹುದು. ಇವನ್ನು ಊರಿನ ಉತ್ತರದಿಕ್ಕಿನಲ್ಲಾಗಲಿ ಪೂರ್ವದಿಕ್ಕಿನಲ್ಲಾಗಲಿ ಮಾಡಬೇಕು.

೬. ಮನೋಹರವಾಗಿಯೂ, ಸ್ವಲ್ಪ ಇಳಿಜಾರಾಗಿಯೂ ಇರುವ ಸ್ಥಳದಲ್ಲಿ ಹದಿನಾರುಮೊಳ ವ್ಯಾಸವುಳ್ಳ ದುಂಡಾದ ಮಂಡಪವನ್ನು ರಚಿಸಬೇಕು. ಅದರ ನಾಲ್ಕುಕಡೆಗೂ ಮುಖವುಳ್ಳದ್ದಾಗಿರುವಂತೆ ಭವ್ಯವೂ ಪ್ರಸಿದ್ಧವೂ ಆದ ನಾಲ್ಕು ಬಾಗಿಲುಗಳುಳ್ಳದ್ದನ್ನಾಗಿ ಮಾಡಬೇಕು.

ಪೂರ್ವಾದಿ ದ್ವಾರೇಷು ಚತುಷ್ಟಯೇಷು ಪ್ಲಕ್ಷಾದಿಭಿಸ್ತೋರಣಕೈಃ ಸುರೇಶಃ ॥
ಪ್ಲಕ್ಷಸ್ತಥೋದುಂಬರಪಿಪ್ಪಲೌ ಚ ನ್ಯಗ್ರೋಧಕಂ ಚಾಪಿ ಯಥಾಕ್ರಮೇಣ
॥ ೭ ॥

ಊರ್ಧ್ವೇ ಚ ಹಸ್ತಾ ನಮಿತಾನಿ ಯಾನಿ ವಿಚಿತ್ರಮಾಲ್ಯಾಂಬರಭೂಷಿತಾನಿ ॥
ಭೂಮೌ ಯಥಾ ಪ್ರೀತಿ ಚ ಹಸ್ತಕಾನಿ ಭವಂತಿ ಚೈತಾನ್ಯಪಿ ತೋರಣಾನಿ
॥ ೮ ॥

ಸರ್ವತ್ರ ಯಾಗೇಽಪಿ ಹಿ ಮಂಡಪಸ್ಯ ಕಾರ್ಯಾ ಧ್ವಜಾ ದಿಕ್ಷುವಿದಿಕ್ಷು ಶುಭ್ರಾಃ ।
ದಿಕ್ಪಾಲವರ್ಣಾಭಪತಾಕಯುಕ್ತಾ ಮಧ್ಯೇ ಚ ವೈ ನೀಲಪತಾಕಯುಕ್ತಾಃ
॥ ೯ ॥

ಧ್ವಜಾಶ್ಚ ಯಸ್ಮಿನ್ ದಶಹಸ್ತಸಮ್ಮಿತಾಸ್ತಸ್ಮಿನ್ಪತಾಕಾ ಅಪಿ ಪಂಚಹಸ್ತಾ ।
ಅರತ್ನಿಮಾತ್ರಾ ಯದಿ ಮೂಲಭಾಗೇ ಪಂಚಾಂಗುಲಾಗ್ರೇ ವಿನಿಖಾದ್ಧ
ಗೂಢಾಃ ॥ ೧೦ ॥

---

೭. ಪೂರ್ವ, ಪಶ್ಚಿಮ, ದಕ್ಷಿಣ ಮತ್ತು ಉತ್ತರ ಈ ನಾಲ್ಕುಬಾಗಿಲುಗಳಲ್ಲಿ ಬಸರಿ, ಅತ್ತಿ, ಅರಳಿ, ಆಲ ಈ ಮರಗಳನ್ನು ಕ್ರಮವಾಗಿ ಹಾಕಬೇಕು.

೮. ಬಾಗಿಲಿನ ಮೇಲುಭಾಗದಲ್ಲಿ ಒಂದುಮೊಳ ಜೋಲುಬಿದ್ದಿರುವಂತೆ ವಿಚಿತ್ರವಾದ ಹೂಗಳಿಂದಲೂ ಬಟ್ಟೆಗಳಿಂದಲೂ ಶೃಂಗರಿಸಿದ ತೋರಣಗಳು ಇರಬೇಕು. ಮತ್ತು ನೆಲದಮೇಲೆ ಇಷ್ಟಾನುಸಾರವಾಗಿರುವಂತೆ ರಮ್ಯವಾದ ಹಸೆಗಳನ್ನು ರಚಿಸಬೇಕು.

೯. ಆ ಯಾಗಮಂಡಪದಲ್ಲಿ ದಿಕ್ಕುದಿಕ್ಕಿನಲ್ಲಿಯೂ, ವಿದಿಕ್ಕುಗಳಲ್ಲಿಯೂ, ಶುಭ್ರವಾದ ಧ್ವಜಗಳನ್ನೂ ದಿಕ್ಪಾಲಕರ ಮೈಬಣ್ಣದಂತಹ ಬಣ್ಣವುಳ್ಳ ದೊಡ್ಡಪತಾಕೆಗಳನ್ನೂ ಮಧ್ಯಭಾಗದಲ್ಲಿ ನೀಲವರ್ಣದ ಪತಾಕೆಯನ್ನೂ ರಚಿಸಬೇಕು.

೧೦. ಧ್ವಜಗಳು ಹತ್ತುಮೊಳ ಪ್ರಮಾಣವುಳ್ಳವೂ ಪತಾಕೆಗಳು ಐದುಮೊಳ ಪ್ರಮಾಣವುಳ್ಳವೂ ಆಗಿರಬೇಕು. ಸ್ತಂಭವು ಬುಡದಲ್ಲಿ ಒಂದು ಗುದ್ದುಮೊಳದಷ್ಟು ಹೂಳಲ್ಪಟ್ಟು ತುದಿಯಲ್ಲಿ ಐದುಅಂಗುಲದಷ್ಟು ಹೊರಗೆ ಕಾಣಿಸಿದಂತೆ ಕಟ್ಟಿರಬೇಕು.

ದ್ವಾರೇ ಚ ತಸ್ಮಿಂಶ್ಚ ನಿರೂಪಿತಾ ವಾ ರಂಭಾ ಸುಪುಷ್ಪಾ ಸುಖಶಾಡ್ವಲಾಶ್ಚ ।
ವಚಾಭಿವೃಕ್ಷೋತ್ತರಪಂಚಹಸ್ತಾಃ ಸಪಂಚಶಾಖಾ ಅಪಿ ತೋರಣಾನಿ ॥ ೧೧ ॥

ಮುಂಜೋದ್ಭವೈರ್ಬರ್ಹಿಃಸಮುದ್ಭವೈರ್ವಾಸುರಂಜಿತಶ್ಚಿತ್ರಿತಪದ್ಮಪಲ್ಲವೈಃ।
ಪುಷ್ಪದಯೋಃ ಸೂತ್ರಿತಂ ವೇಷ್ಟಯೇಚ್ಚ ತಥೇಕ್ಷುಕಾಂಡೈರಥ ಯಾಗ ಮಂಟಪಂ ॥ ೧೨ ॥

ವೇದಿಸ್ತಥಾ ಮಂಡಪಮಧ್ಯಭಾಗೇ ಕಾರ್ಯಾ ಚ ಕೋಣೇಸ್ಥಿತುಷಾದಿಹೀನಾ।
ಹಸ್ತೋಚ್ಛ್ರಿತಾ ರೇಖವತೀ ಸುರೇಖಾಪರಿಷ್ಕೃತಾ ಹಸ್ತಚತುಷ್ಟಯೇನ ॥ ೧೩ ॥

ವೇದ್ಯಾಂ ಪರಿತ್ಯಜ್ಯ ದಶಾಂಗುಲಾನಿ ಐಶಾನ್ಯತಸ್ತ್ರೀಣಿ ತಥಾ ಪರಾಣಿ ।

---

೧೧. ಪ್ರತಿಬಾಗಿಲಿಗೂ ಗೊನೆಹೊರಟ ಬಾಳೆಯಕಂದುಗಳನ್ನು ನಿಲ್ಲಿಸಿರಬೇಕು ಸುತ್ತಲೂ ಕಣ್ಣಿಗೆ ಸುಖಕರವಾಗುವಂತೆ ನೆಲವು ಹುಲ್ಲುಹಸಲೆಯಿಂದ ಕೂಡಿರಬೇಕು. ಐದುಮೊಳ ಎತ್ತರದಲ್ಲಿ ಮರದಮೇಲೆ ಐದು ಶಾಖೆಗಳುಳ್ಳ ತೋರಣಗಳನ್ನು ಕಟ್ಟಬೇಕು.

೧೨. ನೊಜೆಹುಲ್ಲುಗಳಿಂದಲೋ, ದರ್ಭೆಗಳಿಂದಲೋ ದೃಢವಾಗುವಂತೆ ಹೊಸೆದು, ಮನೋಹರವಾಗುವಂತೆ ಕಮಲ ಚಿಗುರು ಇವುಗಳನ್ನು ಸೇರಿಸಿ ನೂಲೆಯಾಗಿ ಕಟ್ಟಿದ ತೋರಣವನ್ನು ಎರಡು ಸುತ್ತು ಸುತ್ತಬೇಕು ಹಾಗೆಯೇ ಕಬ್ಬಿನ ಜಲ್ಲೆಗಳನ್ನು ಯಾಗಮಂಟಪದ ಸುತ್ತಲೂ ನಿಲ್ಲಿಸಿ ಕಟ್ಟಬೇಕು.

೧೩. ನೆಲದಲ್ಲಿ ಮೂಳೆ ಹೊಟ್ಟು ಇವೊಂದೂ ಇಲ್ಲದಂತೆ ಮಂಟಪದ ಮಧ್ಯಭಾಗದ ಭೂಮಿಯನ್ನು ಶೋಧನೆಮಾಡಿದ ಮೇಲೆ ಒಂದು ಮೊಳ ಎತ್ತರವುಳ್ಳದ್ದಾಗಿಯೂ ನಾಲ್ಕುಮೊಳ ಚತುರಸ್ರವುಳ್ಳದ್ದಾಗಿಯೂ ಇರುವಂತೆ ಸುರೇಖೆಗಳಿಂದ ಪರಿಷ್ಕರಿಸಲ್ಪಟ್ಟ ಒಂದು ಜಗಲಿ (ವೇದಿ) ಯನ್ನು ರಚಿಸಬೇಕು.

೧೪. ಈ ಜಗಲಿ (ವೇದಿ) ಯಲ್ಲಿ ತುದಿಯಿಂದ ಹತ್ತು ಅಂಗುಲದಷ್ಟು ಬಿಟ್ಟು ಈಶಾನ್ಯದಿಂದ ಮೂರುಕುಂಡಗಳನ್ನೋ ಅಥವಾ ಇನ್ನೂ ಹೆಚ್ಚಿಗೆ ಕುಂಡಗಳನ್ನೋ

ಕುಂಡಾಯ ದದ್ಯಾಚ್ಚತುರಸ್ರಮೇಕಮವಸ್ಥಿತಂ ತ್ರ್ಯಂಗುಲಮೇಖಲೋಜ್ಜ್ವಲಮ್ ॥ ೧೪ ॥

ಪ್ರಾಸಾದೇ ಚ ತಡಾಗೇ ಚ ಮಹಾರಾಮೇ ತಥೈವ ಚ ।
ಮಂಡಲಂ ಸರ್ವತೋಭದ್ರಂ ಪ್ರಯತ್ನೇನೈವ ಕಾರಯೇತ್ ॥ ೧೫ ॥

ಕುಂಡಂ ಚಾಪಿ ಪ್ರಕುರ್ವೀತ ಯಥಾಭ್ಯಂತರಮೇಖಲಮ್ ।
ಬಹಿರ್ಯೋನಿಗತಂ ಶ್ವೇತಂ ನಿಶ್ಚಿತ್ರಂ ಸಮಸೂತ್ರಕಂ ॥ ೧೬ ॥

ಕುಂಡಾನಿ ಕುರ್ಯಾನ್ನವ ಕುಂಡಪಕ್ಷೇ ವೇದ್ಯಾಸ್ತಥೋಚ್ಚೈರವಿದಿಕ್ಷು ಚೈವ ।
ಸರ್ವಾಣಿ ಸರ್ವತ್ರ ಚ ಮೇಖಲಾನಿ ಷಡಸ್ರಪಂಚಾಸ್ರ ಸಮೇಖಲಾನಿ ॥೧೭॥

ಅಷ್ಟಾಸ್ರಜಾನ್ಯಬ್ಜತ್ರಿಕೋಣಕಾನಿ ತಥಾರ್ಧಚಂದ್ರಂ ಚತುರಸ್ರಕಂ ಚ ।
ಕುಂಡಸ್ಯ ಪೂರ್ವೋತ್ತರದಿಗ್ವಿಭಾಗೇ ಸ್ಥಾಪ್ಯೋ ಘಟಶ್ಚಂದನಚಾರುಲಿಪ್ತಃ ॥ ೧೮ ॥

---

ರಚಿಸಬೇಕು. ಅಲ್ಲದೆ ಚತುರಸ್ರವಾದ ಒಂದು ಪ್ರತ್ಯೇಕ ಹೆಚ್ಚಿಗೆಯ ಕುಂಡವನ್ನೂ ರಚಿಸಿ ಮೂರಂಗುಲದ ಸುತ್ತುಗಟ್ಟೆ ಕಟ್ಟಿ ಅದನ್ನು ಶೋಭಿಸುವಂತೆ ಮಾಡಬೇಕು.

೧೫. ಪ್ರಾಸಾದ, ತಟಾಕ, ದೊಡ್ಡ ಆರಾಮ ಇವುಗಳನ್ನು ಪ್ರತಿಷ್ಠೆಮಾಡುವ ಕಾಲದಲ್ಲಿ ಪ್ರಯತ್ನಪಟ್ಟು ಸರ್ವತೋಭದ್ರಮಂಡಲವನ್ನು ರಚಿಸಬೇಕು.

೧೬. ಮೇಖಲೆಯ ಒಳಗಡೆ ಆಳವಾಗಿರುವಂತೆಯೂ, ಹೊರಗೆ ಸೂತ್ರಹಿಡಿದಂತೆ ನೇರವಾಗಿಯೂ, ಚಿತ್ರಾದಿಗಳಿಲ್ಲದೆಯೂ, ಬಿಳಿಯಬಣ್ಣವುಳ್ಳದಾಗಿಯೂ, ಯೋನಿಯು ಹೊರಗೆ ಇರುವಂತೆಯೂ ಕುಂಡವನ್ನು ರಚಿಸಬೇಕು.

೧೭. ಕುಂಡಗಳನ್ನು ನಿರ್ಮಿಸುವಪಕ್ಷದಲ್ಲಿ ಹೀಗೆ ಒಂಭತ್ತು ಕುಂಡಗಳನ್ನು ರಚಿಸಬೇಕು. ವೇದಿಗಳನ್ನು ರಚಿಸುವುದಾದರೆ ಎಲ್ಲಾ ಕಡೆಗಳಲ್ಲಿಯೂ, ಗಟ್ಟಿಯಾಗಿಯೂ, ಎತ್ತರವಾಗಿಯೂ ಇರುವಂತೆ ರಚಿಸಬೇಕು.

೧೮. ಕುಂಡಗಳ ಮೇಖಲೆಗಳು ಎಲ್ಲಕಡೆಯಲ್ಲೂ ಒಂದೇ ಸಮವಾಗಿರುವಂತೆ ರಚಿಸಬೇಕು. ಎಂದರೆ ಷಡ್ಭುಜಾಕೃತಿ ಕುಂಡ, ಪಂಚಭುಜಾಕೃತಿಕುಂಡ, ಅಷ್ಟಭುಜಕುಂಡ, ಅಬ್ಜಕುಂಡ, ತ್ರಿಕೋಣಕುಂಡ, ಅರ್ಧಚಂದ್ರಾಕೃತಿಕುಂಡ, ಚತು

**ಮಾಲ್ಯಾಂಬರಾಚ್ಛಾದಿತಪೂರ್ಣಪಾತ್ರಾಃ ಸವೃತ್ತಪತ್ರಶ್ಚ ಸುವರ್ಣಗರ್ಭಃ ॥ ೧೯ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ದ್ವಿತೀಯ ಭಾಗೇ ಏಕೋನವಿಂಶೋಽಧ್ಯಾಯಃ.**



---

ರಸ್ರಕುಂಡ ಇವು ಯಾವುದಕ್ಕೇ ಆದರೂ ಮೇಖಲೆಗಳು ಎಲ್ಲಕಡೆಯೂ ಎತ್ತರದಲ್ಲಿ ಒಂದೇಸಮನಾಗಿರಬೇಕು.

೧೯. ಕುಂಡಗಳ ಪೂರ್ವ ಅಥವಾ ಉತ್ತರದಿಕ್ಕಿನಲ್ಲಿ ಮನೋಹರವಾದ ಕಲಶವನ್ನು ಸ್ಥಾಪಿಸಿ ಆದಕ್ಕೆ ಗಂಧವನ್ನು ಲೇಪನಮಾಡಬೇಕು. ಆ ಕಲಶದಲ್ಲಿ ಜಲವನ್ನು ತುಂಬಿ ಅದರೊಳಗೆ ಸುವರ್ಣನಾಣ್ಯವನ್ನು ಹಾಕಬೇಕು. ಮತ್ತು ಪುಷ್ಪಮಾಲೆಗಳು, ವಸ್ತ್ರಗಳು, ಸುತ್ತಲೂ ಗುಂಡಗೆ ಹರಡಿರುವಂತೆ ಮಾವಿನ ಎಲೆ, ಇವುಗಳಿಂದ ಅಲಂಕರಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಎರಡನೆಯ ಭಾಗದಲ್ಲಿ ಹತ್ತೊಂಭತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮ ಪರ್ವಣಿ ದ್ವಿತೀಯಭಾಗೇ

## ವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಗತೋ ಯಾಗಗೃಹಾದನ್ಯನ್ಮಂಡಲಾಂತರಮಾಶ್ರಿತಃ ।
ಯಜಮಾನಸ್ತಥಾ ನಿತ್ಯಕರ್ಮ ಕೃತ್ವಾ ಯಥಾವಿಧಿ ॥ ೧ ॥

ಪಂಚ ದೇವಾನ್ನಮಸ್ಕೃತ್ಯ ತಥಾ ಯಜ್ಞೇಶ್ವರಂ ಹರಿಂ ।
ಸಂಕಲ್ಪಂ ಚ ತತಃ ಕೃತ್ವಾ ಬ್ರಾಹ್ಮಣಾನಾಮನುಜ್ಞಯಾ ॥ ೨ ॥

ಏತಸ್ಮಿನ್ಪುಣ್ಯದೇಶೇ ತು ಫಲಪ್ರಾಪ್ತ್ಯೈ ಚ ವೈ ಮಮ ।
ವೇದವ್ಯಾಸಾದಿಪ್ರಣೀತಂ ಯಥಾಶಾಸ್ತ್ರನಿದರ್ಶನಂ ॥ ೩ ॥

---

### ಇಪ್ಪತ್ತನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾರೆ—ಯಜಮಾನನು ಯಾಗಶಾಲಾ ಪ್ರದೇಶವನ್ನು ಬಿಟ್ಟು ಈಚೆಗೆ ಹೊರಟು ಬಂದು ಅನ್ಯಮಂಡಲವನ್ನು ಆಶ್ರಯಿಸಿ, ವಿಧಿ ಪ್ರಕಾರ ನಿತ್ಯಕರ್ಮವನ್ನು ಆಚರಿಸಬೇಕು.

೨ ಬಳಿಕ ಐದುದೇವತೆಗಳಿಗೂ, (ಪಂಚಭೂತಗಳಿಗೂ) ಹೋಮಾಗ್ನಿಗೂ, ವಿಷ್ಣುವಿಗೂ ನಮಸ್ಕಾರಮಾಡಬೇಕು.ಆ ಮೇಲೆ 'ನಮೋಮಹದ್ಭ್ಯಃ' ಎಂಬ ಮಂತ್ರ ಹೇಳಿ ಬ್ರಾಹ್ಮಣರ ಅನುಮತಿಯನ್ನು ಪಡೆಯಬೇಕು.

೩-೪. ಅನಂತರ 'ವೇದವ್ಯಾಸಪ್ರಣೀತಂ ಯಥಾಶಾಸ್ತ್ರ ನಿದರ್ಶನಂ ಸ್ವಶೋಷೋಕ್ತಂ ಏತಸ್ಮಿನ್ ಪುಣ್ಯದೇಶೇ ಪುಣ್ಯಾರಣ್ಯಾಭಿದಾಯಕಂ ಮಮ ಯಥೋಕ್ತ

ಯಥಾಯಥಾಸ್ವತಂತ್ರೋಕ್ತಂ ಪುಣ್ಯಾರಣ್ಯಾಭಿದಾಯಕಂ ।
ಜಲಾಶಯಪ್ರತಿಷ್ಠಾಂ ಚ ಕರಿಷ್ಯೇ ವಿಧಿವದ್ದ್ವಿಜಾಃ ॥ ೪ ॥

ಯಥಾಯಥಾ ಚ ಕಲ್ಪೋಕ್ತಂ ಯಥಾಕುಂಡಂ ವಿಧಾನತಃ ।
ಸಾಧಿವಾಸಂ ಯಥೈವೈಕಃ ಪುಣ್ಯಾರಣ್ಯವಿಧಾಯಕಃ ॥ ೫ ॥

ಜಲಾಶಯಪ್ರತಿಷ್ಠಾಂ ಚ ಕರಿಷ್ಯೆ ವಿಧಿವದ್ದ್ವಿಜಾಃ ।
ಸಂಕಲ್ಪಮೇವಂ ಕೃತ್ವಾ ತು ವೃದ್ಧಿಶ್ರಾದ್ಧಂ ಸಮಾಚರೇತ್ ॥ ೬ ॥

ಮಾತೃಯಾಗಂ ಪುರಸ್ಕೃತ್ಯ ವೃದ್ಧಿಶ್ರಾದ್ಧಂ ಸಮಾಪಯೇತ್ ॥ ೭ ॥

ಭೇರ್ಯಾದಿಘೋಷೇಣ ಸುಮಂಗಲೇನ ಪದ್ಮಂ ಲಿಖೇದತ್ರ ಸಷೋಡಶಾಕ್ಷರಂ ।
ಇಂದ್ರಾದಿದಿಕ್ಪಾಲವರಾಯುಧಾನಿ ಸಮುಲ್ಲಿಖೇದೇವ ದಿಶಿ ಸ್ಥಿತಾನಿ ॥ ೮ ॥

---

ಫಲಪ್ರಾಪ್ತ್ಯೈ ಚ ಜಲಾಶಯ ಪ್ರತಿಷ್ಠಾಂ ಕರಿಷ್ಯೆ" ಎಂಬದಾಗಿ ಸಂಕಲ್ಪಮಾಡಬೇಕು (ಅದರ ಅಭಿಪ್ರಾಯ)—"ವೇದವ್ಯಾಸರು ರಚಿಸಿರುವ ಶಾಸ್ತ್ರದಲ್ಲಿ ನಿರ್ದೇಶವಾಗಿರುವಂಥ ಫಲಪ್ರಾಪ್ತ್ಯರ್ಥವಾಗಿ ಪುಣ್ಯಾರಣ್ಯವೆಂಬ ಸ್ವತಂತ್ರವಾದ ಹೆಸರುಳ್ಳ ಈ ಪುಣ್ಯಕರವಾದ ಪ್ರದೇಶದಲ್ಲಿ, ಸ್ವಶಾಖೆಯಲ್ಲಿ ಉಕ್ತವಾದ ಪ್ರತಿಷ್ಠಾಕಲ್ಪದಲ್ಲಿ ಹೇಳಿರುವ ಪ್ರಕಾರ ವಿಧಿಪೂರ್ವಕವಾದ ವಿಧಾನದಿಂದ ಜಲಾಶಯ ಪ್ರತಿಷ್ಠೆಮಾಡುತ್ತೇನೆ.

೫. ಇದೊಂದೇ ಪುಣ್ಯಾರಣ್ಯವೆಂದು ವಿಧಾಯಕವಾಗುವಂತೆ ಕಲ್ಪೋಕ್ತ ಪ್ರಕಾರ ಅಧಿವಾಸ ವಿಧಾನಪೂರ್ವಕವಾಗಿಯೂ ವಿಧಿವತ್ತಾಗಿ ಕುಂಡವಿಧಾನವನ್ನು ಅನುಸರಿಸಿಯೂ ಈ ಜಲಾಶಯ ಪ್ರತಿಷ್ಠೆಮಾಡುತ್ತೇನೆ."

೬. ಈ ರೀತಿ ಸಂಕಲ್ಪಮಾಡಿ ಪುಣ್ಯಾಹವಾಚನವನ್ನೂ, ನಾಂದೀಪೂಜಾ ವೃದ್ಧಿಶ್ರಾದ್ಧಾದಿಗಳನ್ನೂ ಮಾಡಬೇಕು. ನಾಂದಿಯಲ್ಲಿ ಸಪ್ತದೇವಮಾತೃಗಳನ್ನೂ ಕುಲಮಾತೃಗಳನ್ನೂ ಪೂಜಿಸಿ, ವೃದ್ಧಿಶ್ರಾದ್ಧವನ್ನು ಮುಗಿಸಬೇಕು.

೮. ಆ ಮೇಲೆ ಮಂಗಳವಾದ್ಯಗಳು ಧ್ವನಿಗೈಯುತ್ತಿರಲು ಒಂದು ಪದ್ಮವನ್ನು ರಚಿಸಿ, ಅದರ ದಳಗಳಲ್ಲಿ ಯಥೋಕ್ತವಾದ ಹದಿನಾರು ಅಕ್ಷರಗಳನ್ನು ಬರೆಯಬೇಕು. ದಿಕ್ಕುಗಳಲ್ಲಿ ಇಂದ್ರನೇ ಮೊದಲಾದ ದಿಕ್ಪಾಲಕರನ್ನೂ ಅವರ ಆಯುಧಗಳನ್ನೂ ಬರೆಯಬೇಕು.

**ಬ್ರಹ್ಮೇಶಾನ್ವರಯೇತ್ಸರ್ವಾನಾಚಾರ್ಯಂ ತು ವಿಶೇಷತಃ ।**
**ಸ್ವರ್ಣಕುಂಡಲಯುಗ್ಮೇನ ತಥಾ ತಾಮ್ರಾದಿಭಾಜನೈಃ ॥ ೯ ॥**

**ನಾನಾರತ್ನೈಶ್ಚ ವಸ್ತ್ರೈಶ್ಚ ಆಚಾರ್ಯಂ ವರಯೇದ್ಬುಧಃ ।**
**ಹೇಮಾಲಂಕಾರಯುಗ್ಮೈಶ್ಚ ವಾಸೋಭಿರ್ವಿವಿಧೈರಪಿ ॥ ೧೦ ॥**

**ಯಥಾಮಾನಂ ಯಥಾಶಕ್ತಿ ದತ್ವಾಭಿವೃಣುಯಾದ್ಬುಧಃ ।**
**ರಚಿತಂ ಯಜಮಾನೇನ ಧ್ರುವಂ ಸ್ವಸ್ತ್ಯಸ್ತು ತೇ ಇತಿ ॥ ೧೧ ॥**

**ತತಃ ಸರ್ವೌಷಧೀಭಿಶ್ಚ ಯಜಮಾನಃ ಸಪತ್ನಿಕಃ ।**
**ಆಪೋಹಿಷ್ಠೇತಿಮಂತ್ರೇಣ ಸ್ನಾಪಯಾಮಾಸ ಸಪ್ರಜಾಃ ॥ ೧೨ ॥**

**ಯವಗೋಧೂಮನೀವಾರತಿಲಶ್ಯಾಮಾಕಶಾಲಯಃ ।**
**ಪ್ರಿಯಂಗುವ್ರೀಹಯಶ್ಚಾಷ್ಟೌ ಸರ್ವೌಷಧಿಗಣಃ ಸ್ಮೃತಃ ॥ ೧೩ ॥**

---

೯. ಬಳಿಕ ಬ್ರಹ್ಮತ್ವದವರನ್ನೂ, ಋತ್ವಿಜರನ್ನೂ ಗೊತ್ತುಮಾಡಬೇಕು. ವಿದ್ವಾಂಸನಾದ ಮಹಾತ್ಮನಿಗೆ ಚಿನ್ನದ ಕರ್ಣಕುಂಡಲಗಳೆರಡು, ತಾಮ್ರಪಾತ್ರೆಗಳು

೧೦. ಮತ್ತು ಬಹುವಿಧರತ್ನಗಳು, ವಸ್ತ್ರಗಳು ಇವುಗಳೆಲ್ಲವನ್ನೂ ಒದಗಿಸಿ ಕೊಟ್ಟು ಆಚಾರ್ಯನನ್ನಾಗಿ ಗೊತ್ತುಮಾಡಿಕೊಳ್ಳಬೇಕು. ಚಿನ್ನದ ಕುಂಡಲಗಳು ಮತ್ತು ವಸ್ತ್ರಗಳು ಇವುಗಳನ್ನೂ ಕೊಡಬೇಕು.

೧೧. ಹೀಗೆ ಕೊಡುವುದರಲ್ಲಿ ತನ್ನ ದ್ರವ್ಯಾನುಕೂಲವಿದ್ದಷ್ಟುಮಟ್ಟಿನಲ್ಲಿ ಅವರ ಗೌರವಕ್ಕೆ ಒಪ್ಪುವಹಾಗೇ ಇರುವುದನ್ನು ಕೊಡಬೇಕು. ಯಜಮಾನನು ಈ ರೀತಿ ನಿರ್ವಂಚನೆಯಾಗಿ ಆಚರಿಸಿದರೆ ಆಚಾರ್ಯನು ನಿನಗೆ ನಿಶ್ಚಯವಾಗಿಯೂ ಶುಭವುಂಟಾಗಲಿ ಎಂದು ಹರಸುತ್ತಾನೆ.

೧೨. ಅನಂತರ ಯಜಮಾನನು ಪತ್ನೀಪುತ್ರಸಮೇತನಾಗಿ 'ಆಪೋಹಿಷ್ಠಾ' ಎಂಬ ಮಂತ್ರಪೂರ್ವಕವಾಗಿ ಸಮಸ್ತ ಔಷಧಿಯುಕ್ತವಾದ ಜಲದಿಂದ ಮಂಗಳಸ್ನಾನ ಮಾಡಬೇಕು.

೧೩. ಯವ, ಗೋಧಿ, ತೃಣಧಾನ್ಯ, ಎಳ್ಳು, ಸಾವೆ, ನವಣೆ, ಬತ್ತ, ಹಾರಕ ಇವು ಎಂಟೂ ವ್ರೀಹಿಧಾನ್ಯಗಳೆಂದೂ, ಸರ್ವೌಷಧಿಗಳೆಂದೂ ತಿಳಿಯಬೇಕು.

ತತಃ ಶುಕ್ಲಾಂಬರಧರಃ ಶುಕ್ಲಮಾಲ್ಯಾನುಲೇಪನಃ ।
ಸರ್ವೌಷಧ್ಯುದಕಸ್ನಾತಃ ಸ್ನಾಪಿತೋ ವೇದಪುಂಗವೈಃ ॥ ೧೪ ॥

ಬ್ರಾಹ್ಮಣೈರಭ್ಯನುಜ್ಞಾತಃ ಪುರೋಹಿತಪುರಃಸರಃ ।
ನಾನಾಮಂಗಲಘೋಷೇಣ ಭೇರೀಪಟಹನಿಸ್ವನೈಃ ॥ ೧೫ ॥

ಯಜಮಾನಃ ಸಪತ್ನೀಕಃ ಪುತ್ರಪೌತ್ರಸಮನ್ವಿತಃ ।
ಪಶ್ಚಿಮಂ ದ್ವಾರಮಾಸಾದ್ಯ ಪ್ರವಿಶೇದ್ಯಾಗಮಂಡಪಂ ॥ ೧೬ ॥

ಚರಕೇ ಪೂಜಯೇದ್ವಿಘ್ನಂ ಗಂಗಾಂ ಚ ಯಮುನಾಂ ತಥಾ ।
ಪಾರ್ಶ್ವಯೋಶ್ಚಾರ್ಧತೋ ಲಕ್ಷ್ಮೀಂ ಪ್ರತಿಹಾರಮನುಕ್ರಮಾತ್ ॥ ೧೭ ॥

ವೇದಿಂ ಪ್ರದಕ್ಷಿಣೀಕೃತ್ಯ ನಮಸ್ಕುರ್ಯಾದ್ಯಥಾವಿಧಿ ।
ಉಪವಿಶ್ಯ ತತಸ್ತಸ್ಮಿನ್ ಬ್ರಾಹ್ಮಣಾನುಮತೇ ಸ್ಥಿತಃ ॥ ೧೮ ॥

---

೧೪. ಅನಂತರ ಯಜಮಾನನು ಬಿಳಿಯಬಟ್ಟೆಯನ್ನುಟ್ಟು ಬಿಳಿಯಪುಷ್ಪಗಳ ಮಾಲಿಕೆ, ಗಂಧ, ಇವನ್ನು ಧರಿಸಿ ಕುಳಿತಿರಲು ವೇದಾಧ್ಯಯನ ಸಂಪನ್ನರು ಅವನಿಗೆ ಸರ್ವೌಷಧಿಯುಕ್ತವಾದ ಉದಕದಿಂದ ಪ್ರೋಕ್ಷಣಸ್ನಾನ ಮಾಡಿಸಬೇಕು.

೧೫-೧೬. ಹೀಗೆ ಸ್ನಾನಮಾಡಿಸಲ್ಪಟ್ಟವನಾಗಿ ಬ್ರಾಹ್ಮಣರಿಂದ ಅನುಜ್ಞೆ ಪಡೆದು ಪುರೋಹಿತನನ್ನು ಮುಂದುಮಾಡಿಕೊಂಡು ಭೇರಿ, ತಮಟೆ, ಮುಂತಾದ ನಾನಾ ಮಂಗಳವಾದ್ಯಘೋಷದೊಡನೆ ಹೆಂಡತಿ, ಮಕ್ಕಳು, ಮೊಮ್ಮಕ್ಕಳು ಸಮೇತನಾಗಿ ಪಶ್ಚಿಮದಕಡೆಯ ಬಾಗಿಲಿನಿಂದ ಯಾಗಮಂಟಪವನ್ನು ಪ್ರವೇಶಮಾಡಬೇಕು.

೧೭. ಬಳಿಕ ಯಜ್ಞವೇದಿಯ ಬಳಿಗೆ ಬಂದು ವಾಸ್ತುಮಂಡಲದ ಚರಕಿಸ್ಥಾನದಲ್ಲಿ ವಿಘ್ನದೇವತೆಯನ್ನೂ, ಎರಡುಪಕ್ಕಗಳ ಅರ್ಧಭಾಗದಲ್ಲಿ ಗಂಗಾಯಮುನೆಯರನ್ನೂ, ಇನ್ನರ್ಧಭಾಗದಲ್ಲಿ ಲಕ್ಷ್ಮಿಯನ್ನೂ, ದ್ವಾರದಲ್ಲಿ ದ್ವಾರಪಾಲಕರನ್ನೂ ಅನುಕ್ರಮವಾಗಿ ಪೂಜಿಸಬೇಕು.

೧೮. ಬಳಿಕ ವಿಧಿಪ್ರಕಾರವಾಗಿ ಯಜ್ಞವೇದಿಯನ್ನು ಪ್ರದಕ್ಷಿಣೆಮಾಡಿ ನಮಸ್ಕಾರಮಾಡಬೇಕು. ಅನಂತರ ಬ್ರಾಹ್ಮಣರ ಅನುಜ್ಞೆಯನ್ನು ಪಡೆದು ಆ ಜಗಲಿಯನ್ನೇರಬೇಕು.

**ಸ್ವಸ್ತಿವಾಚ್ಯಂ ತತಃ ಕೃತ್ವಾ ಪಂಚದೇವಾನ್ಪ್ರಪೂಜಯೇತ್ ।**
**ಭೂತೋತ್ಸಾದಂ ತತಃ ಕೃತ್ವಾ ವಿಕಿರಾನ್ವಿಕಿರೇದ್ಭುವಿ ॥ ೧೯ ॥**

**ಅಪಕ್ರಾಮಂತು ಯೇ ಭೂತಾ ಯೇ ಚಾಸ್ಮಿನ್ವಿಘ್ನಕಾರಕಾಃ ।**
**ಯಸ್ಮಾನ್ನೋ ನಾಮ್ನಿ ವರ್ತ್ತಂತೆ ಯಜ್ಞಮಾತ್ರತಾಂ ಪ್ರವರ್ತಂ ॥ ೨೦ ॥**

**ಪೂಜಯೇದಾಸನಂ ಪಶ್ಚಾತ್ಸ್ವಕೀಯಂ ಪುಷ್ಪಚಂದನೈಃ ।**
**ನಮೋನಂತಾಸನಾಯೇತಿ ತಥಾ ಪದ್ಮಾಸನಾಯ ಚ ॥ ೨೧ ॥**

**ವಿಮಲಾಸನಾಯ ಚ ನಮೋ ನಮಃ ಸಾರಾಸನಾಯ ಚ ।**
**ಯೋಗಾಸನಾಯ ಚ ನಮಃ ಪೃಥಿವ್ಯೈ ನಮ ಇತ್ಯಪಿ ॥ ೨೨ ॥**

**ತತೋ ಭೂಮಿತಲೇ ವಾಮಹಸ್ತಂ ದತ್ವಾ ಪಠೇನ್ನರಃ ।**
**ಪೃಥ್ವೀ ತ್ವಯಾ ಧೃತಾ ಲೋಕಾ ದೇವಿ ತ್ವಂ ವಿಷ್ಣುನಾ ಧೃತಾ ॥ ೨೩ ॥**

---

೧೯. ಬಳಿಕ ಸ್ವಸ್ತಿವಾಚನ ಮಾಡಿ ಪಂಚದೇವತೆಗಳನ್ನು ಪೂಜಿಸಬೇಕು. ಆ ಮೇಲೆ ಭೂತಗಳ ಉತ್ಸಾರಣಾರ್ಥವಾಗಿ ಬಲಿಸಮರ್ಪಣೆಗಾಗಿ ನೆಲದಮೇಲೆ ವಿಕಿರಾನ್ನವನ್ನು ಹಾಕಬೇಕು.

೨೦. ಬಳಿಕ ಯಜಮಾನನು " ಓ ಭೂತಗಳೇ! ಈ ಯಜ್ಞದಲ್ಲಿ ವಿಘ್ನವನ್ನುಂಟುಮಾಡುವ ನೀವು ದೂರ ತೊಲಗಿರಿ. ಯಜ್ಞವೆಂಬಕರ್ಮವನ್ನು ಮಾಡಲು ತೊಡಗಿರುವಾಗ ನೀವುಗಳು ಹೆಸರುಮಾತ್ರಕ್ಕೂ ಇಲ್ಲಿರಕೂಡದು " ಎಂದು ಅರ್ಥವುಳ್ಳ ಈ ಮಂತ್ರವನ್ನು ಹೇಳಬೇಕು.

೨೧-೨೨. ಬಳಿಕ ಓಂ ಅನಂತಾಸನಾಯನಮಃ ಪದ್ಮಾಸಯನಮಃ ವಿಮಲಾಸನಾಯನಮಃ ಸಾರಾಸನಾಯನಮಃ, ಯೋಗಾಸನಾಯನಮಃ, ಪೃಥಿವ್ಯೈನಮಃ, ಎಂಬದಾಗಿ ಹೇಳಿ ತಾನು ಕುಳಿತುಕೊಳ್ಳುವ ಆಸನವನ್ನು ಹೂವು, ಗಂಧ ಮುಂತಾದುವುಗಳಿಂದ ಪೂಜಿಸಬೇಕು.

೨೩. ಅನಂತರ ಭೂಮಿಯಮೇಲೆ ಎಡಗೈಯನ್ನು ಊರಿಕೊಂಡು ಈ ಮುಂದೆ ಹೇಳುವ ಅರ್ಥವುಳ್ಳ ಮಂತ್ರವನ್ನು ಉಚ್ಚರಿಸಬೇಕು. 'ಎಲೌ ಭೂಮಿದೇವಿಯೇ! ನೀನು ಲೋಕಗಳೆಲ್ಲವನ್ನೂ ಧರಿಸಿದ್ದೀಯೆ. ವಿಷ್ಣುವು ನಿನ್ನನ್ನು ಧರಿಸಿದ್ದಾನೆ.'

ತ್ವಂ ಚ ಧಾರಯ ಮಾಂ ನಿತ್ಯಂ ಪವಿತ್ರಮಾಸನಂ ಕುರು ।
ಸೂರ್ಯಾಯಾರ್ಘ್ಯಂ ತತೋ ದತ್ತ್ವಾ ಗುರುಂ ನತ್ತ್ವಾ ಕೃತಾಂಜಲಿಃ ॥೨೪॥

ದೇವಂ ಹೃತ್ಪದ್ಮಕೇ ನೀತ್ವಾ ಪ್ರಾಣಾಯಾಮತ್ರಯಂ ಚರೇತ್ ।
ತತೋಽರ್ಚಯೇದ್ವಿಘ್ನರಾಜಮೈಶಾನ್ಯಾಂ ಚ ಘಟೋಪರಿ ॥ ೨೫ ॥

ಗಂಧಪುಷ್ಪೈಸ್ತಥಾ ವಸ್ತ್ರೈರ್ನೈವೇದ್ಯೈರ್ವಿವಿಧೈರಪಿ ।
ಗಣಾನಾಂತ್ವೇತಿ ಮಂತ್ರೇಣ ಬ್ರಹ್ಮಾಣಂ ತದನಂತರಂ ॥ ೨೬ ॥

ಆಬ್ರಹ್ಮನ್ನಿತಿ ಋಚಾ ತದ್ವಿಷ್ಣೋರಿತಿ ಸಂಸ್ಮರೇತ್ ।
ವಾಸುದೇವಂ ತತಃ ಪಶ್ಚಾತ್ ಬಲಿಭಿರ್ಗಂಧಚಂದನೈಃ ॥ ೨೭ ॥

ತತೋ ದೇವಶರೀರಂ ತು ನವಮಾಸಾದ್ಯತ್ರಿಂಶತಂ ।
ವೇದ್ಯಾಶ್ಚ ಪರಿತಃ ಸರ್ವಾನ್ಸ್ವೇಸ್ವೇ ಸ್ಥಾನೇ ಯಥಾಕ್ರಮಂ ॥ ೨೮ ॥

---

೨೪. ಇಂಥ ನೀನು ನನ್ನನ್ನು ನಿತ್ಯವೂ ಧರಿಸು ಮತ್ತು ಈ ಪೀಠವನ್ನು ಪರಿಶುದ್ಧಮಾಡು" ಎಂದು ಪ್ರಾರ್ಥಿಸಬೇಕು. ಅನಂತರ ಸೂರ್ಯನಿಗೆ ಅರ್ಘ್ಯವನ್ನು ಸಮರ್ಪಿಸಿ ಅಂಜಲಿಬದ್ಧನಾಗಿ ಗುರುವಿಗೆ ನಮಸ್ಕಾರಮಾಡಬೇಕು

೨೫. ತನ್ನ ಹೃದಯಕಮಲದಲ್ಲಿ ದೇವಮೂರ್ತಿಯನ್ನು ಸ್ಥಾಪಿಸಿಕೊಂಡು ಧ್ಯಾನಿಸುತ್ತಾ ಮೂರಾವೃತ್ತಿ ಪ್ರಾಣಾಯಾಮ ಮಾಡಬೇಕು. ಅನಂತರ ಈಶಾನ್ಯ ಮೂಲೆಯಲ್ಲಿಟ್ಟಿರುವ ಕಲಶದಲ್ಲಿ

೨೬. 'ಓಂ ಗಣಾನಾಂ ತ್ವಾ' ಎಂಬ ಮಂತ್ರಪೂರ್ವಕವಾಗಿ ವಿಘ್ನೇಶ್ವರನನ್ನು ಆವಾಹನಮಾಡಬೇಕು. ಅನಂತರ ಗಂಧ, ಪುಷ್ಪ, ವಸ್ತ್ರ, ಧೂಪ, ವಿವಿಧವಾದ ನೈವೇದ್ಯ ಇವುಗಳಿಂದ ಪೂಜಿಸಬೇಕು.

೨೭. ಆಮೇಲೆ 'ಆಬ್ರಹ್ಮನ್' ಎಂಬ ಮಂತ್ರದಿಂದ ಬ್ರಹ್ಮನನ್ನೂ 'ತದ್ವಿಷ್ಣೋಃ' ಎಂಬ ಮಂತ್ರದಿಂದ ವಾಸುದೇವನನ್ನೂ ಸ್ಮರಣೆಮಾಡುತ್ತಾ ಗಂಧ, ಪುಷ್ಪ, ನೈವೇದ್ಯ ಮೊದಲಾದುವುಗಳನ್ನು ಸಮರ್ಪಿಸಬೇಕು.

೨೮. ಅನಂತರ ವಾಸ್ತುಮಂಡಲವೇದಿಯ ಸುತ್ತಲೂ ಮೂವತ್ತೊಂಭತ್ತು ದೇವತೆಗಳನ್ನೂ ಅವರವರಿಗೆ ಕ್ಲುಪ್ತವಾದ ಸ್ಥಾನಗಳಲ್ಲಿ ಕ್ರಮಪ್ರಕಾರವಾಗಿ ಸ್ಥಾಪಿಸಬೇಕು.

**ತತೋ ರಾಜಾಧಿರಾಜೇನ ಭೂತಶುದ್ಧಿಂ ಸಮಾಚರೇತ್ ।**
**ತತೋಽಬುದ್ಬುದಮಧ್ಯೇ ತು ಶ್ವೇತಪದ್ಮಾಸನಸ್ಥಿತಂ ॥ ೨೯ ॥**

**ಶುದ್ಧಸ್ಫಟಿಕಸಂಕಾಶಂ ಶಂಖಕುಂದೇಂದುಸಪ್ರಭಂ ।**
**ಕಿರೀಟಕುಂಡಲಯುತಂ ಸಿತಂ ಪಂಕಜಧಾರಿಣಂ ॥ ೩೦ ॥**

**ಶುಕ್ಲಮಾಲ್ಯಾಂಬರಂ ಶುಕ್ಲಂ ಶುಕ್ಲಗಂಧಾನುಲೇಪನಂ ।**
**ಅಹಿತುಂಡಾಸನಸ್ಥಂ ಚ ಪಾಶಹಸ್ತಂ ಮಹಾಬಲಂ ॥ ೩೧ ॥**

**ಸ್ತೂಯಮಾನಂ ಸುರಗಣೈಃ ಸಿದ್ಧಗಂಧರ್ವಸೇವಿತಂ ।**
**ಸುಚಾರುವದನಂ ದೇವಂ ಪದ್ಮಮಾಲೋಪಶೋಭಿತಂ ॥ ೩೨ ॥**

**ರಾಜೀವಲೋಚನಂ ನಿತ್ಯಂ ನಾಗಲೋಕೋಪಶೋಭಿತಂ ।**
**ಮಕರಗ್ರಾಹಕೂರ್ಮಾದ್ಯೈರ್ನಾನಾಜಲಚರೈರ್ವೃತಂ ॥ ೩೩ ॥**

---

೨೯. ಅನಂತರ 'ರಾಜಾಧಿರಾಜಾಯ' ಎಂಬ ಮಂತ್ರದಿಂದ ಭೂತಶುದ್ಧಿಯನ್ನು ಮಾಡಬೇಕು. ನೀರ್ಗುಳ್ಳೆಗಳ ಮಧ್ಯದಲ್ಲಿ ಬಿಳಿದಾವರೆಯ ಮೇಲೆ ಕುಳಿತಿರುವವನೂ,

೩೦. ನಿರ್ಮಲವಾದ ಸ್ಫಟಿಕದಂತೆ ಕಾಂತಿಯುಕ್ತನೂ, ಶಂಖ, ಚಂದ್ರ, ಮಲ್ಲಿಯುಹೂ ಇವುಗಳಂತೆ ಬೆಳ್ಳಗೆ ಪ್ರಕಾಶಿಸುವವನೂ, ಕಿರೀಟ, ಕುಂಡಲ ಇವುಗಳಿಂದ ಕೂಡಿದವನೂ, ಕೈಯಲ್ಲಿ ಬಿಳಿದಾವರೆಯನ್ನು ಹಿಡಿದವನೂ

೩೧. ಬಿಳಿಯುವಸ್ತ್ರವನ್ನೂ, ಬಿಳಿಯ ಪುಷ್ಪಮಾಲೆಯನ್ನೂ ಧರಿಸಿ ಬಿಳಿಯ ಗಂಧವನ್ನು ತೊಡೆದುಕೊಂಡಿರುವವನೂ, ಸರ್ಪದ ಹೆಡೆಯ ಆಕಾರದ ಆಸನದಲ್ಲಿ ಮಂಡಿಸಿರುವವನೂ, ಕೈಯಲ್ಲಿ ಪಾಶವನ್ನು ಧರಿಸಿರುವವನೂ, ಮಹಾಬಲಶಾಲಿಯೂ,

೩೨-೩೩. ಮತ್ತು ದೇವತಾಸಮೂಹದಿಂದ ಸ್ತುತಿಮಾಡಲ್ಪಡುವವನೂ, ಸಿದ್ಧರು, ಗಂಧರ್ವರು ಇವರುಗಳಿಂದ ಸೇವೆಮಾಡಿಸಿಕೊಳ್ಳುವವನೂ, ಸುಂದರವಾದ ಮುಖವುಳ್ಳವನೂ, ಕಮಲಪುಷ್ಪಮಾಲಿಕೆಗಳನ್ನು ಧರಿಸಿ ಶೋಭಿಸುವವನೂ, ಕಮಲದಂತೆ ಕಣ್ಣುಳ್ಳವನೂ, ನಿತ್ಯಸ್ವರೂಪನೂ, ನಾಗಲೋಕದಲ್ಲಿ ಶೋಭಿಸತಕ್ಕವನೂ, ಮೊಸಳೆ, ಆಮೆ ಮುಂತಾದ ಜಲಜಂತುಗಳಿಂದ ಸುತ್ತುವರಿಯಲ್ಪಟ್ಟಿರುವವನೂ,

ಜಲಾಶಯಗತಂ ದೇವಂ ಚಿಂತಯೇಜ್ಜಲಶಾಯಿನಂ ।
ತತೋ ನ್ಯಾಸಂ ಪ್ರಕುರ್ವೀತ ಪಚಾಂಗತ್ವಾವಶೋಭಿತಂ ॥ ೩೪ ॥

ಅರ್ಘ್ಯಪಾತ್ರಂ ತತಃ ಕೃತ್ವಾ ತ್ರಿಭಾಗಜಲಪೂರಿತಂ ।
ಅಷ್ಟಧಾ ಮೂಲಮಂತ್ರಂ ಚ ಜಪ್ತ್ವಾ ತೇನೋದಕೇನ ಚ ॥ ೩೫ ॥

ಆಸನಂ ಯಾಗವಸ್ತೂನಿ ಪ್ರೋಕ್ಷಯೇತ್ತೇನ ವಾರಿಣಾ ।
ಅರುಣಾಯವಿದ್ಮಹೇ ತವೋಘ್ನಾಯ ಚ ಧೀಮಹೀ ॥ ೩೬ ॥

ತನ್ನೋಽರುಣಃ ಪ್ರಚೋದಯಾದಿತಿ ಸ್ನಾನಂ ಸಮಾಚರೇತ್ ।
ತತೋ ಗಣೇಶಮೈಶಾನ್ಯಾಮಾಗ್ನೇಯ್ಯಾಂ ಗುರುಪಾದುಕಾಂ ॥ ೩೭ ॥

ಧರ್ಮಾಧರ್ಮಾದಿಕಾನ್ಸರ್ವಾನ್ಸತ್ವಾದೀನಥ ಚಾರ್ಚಯೇತ್ ।
ಸೂರ್ಯಸೋಮಜ್ವಲಾದೀನಾಂ ಮಂಡಲಾನಿ ಯಥಾಕ್ರಮಂ ॥ ೩೮ ॥

೩೪. ಜಲಾಶಯದಲ್ಲಿ ನೆಲಸಿದವನೂ, ಸಮುದ್ರಜಲದಲ್ಲಿ ಶಯನಮಾಡಿರುವವನೂ ಆದ ವಾಸುದೇವನನ್ನು ಧ್ಯಾನಿಸಬೇಕು.

೩೫. ಬಳಿಕ ಪಂಚಪ್ರಕಾರವಾದ ಅಂಗದ್ರವ್ಯಗಳನ್ನು ಶೋಭಿಸುವಂತೆ ನ್ಯಾಸ ಮಾಡಬೇಕು. ಅನಂತರ ಅರ್ಘ್ಯಪಾತ್ರೆಯಲ್ಲಿ ಮೂರುಪಾಲಿನಷ್ಟು ನೀರನ್ನು ತುಂಬಿ ಎಂಟುಆವೃತ್ತಿ ಮೂಲಮಂತ್ರವನ್ನು ಜಪಮಾಡಿ ಅಭಿಮಂತ್ರಿಸಬೇಕು.

೩೬-೩೭. ಬಳಿಕ ಆ ಜಲದಿಂದ ಆಸನವನ್ನೂ ಯಾಗದ ಉಪಕರಣಗಳನ್ನೂ ಪ್ರೋಕ್ಷಣೆಮಾಡಬೇಕು. "ಅರುಣಾಯ ವಿದ್ಮಹೇ ತವೋಘ್ನಾಯ ಚ ಧೀಮಹಿ । ತನ್ನೋ ಅರುಣಃ ಪ್ರಚೋದಯಾತ್" ಎಂಬ ಅರುಣಗಾಯತ್ರೀ ಮಂತ್ರಪೂರ್ವಕವಾಗಿ ತಾನೂ ಪ್ರೋಕ್ಷಮಾಡಿಕೊಳ್ಳಬೇಕು.

೩೮. ಅನಂತರ ಈಶಾನ್ಯದಲ್ಲಿ ಗಣಪತಿಯನ್ನೂ, ಆಗ್ನೇಯದಲ್ಲಿ ಗುರುಪಾದುಕೆಯನ್ನೂ, ಪೀಠಮೂಲದಲ್ಲಿ ಧರ್ಮ, ಅಧರ್ಮ, ಸತ್ವ, ರಜಸ್, ತಮಸ್ ಮೊದಲಾದುವುಗಳನ್ನೂ, ಸೂರ್ಯಮಂಡಲ, ಸೋಮಮಂಡಲ, ವಹ್ನಿಮಂಡಲಗಳನ್ನೂ ಆ ಮಂಡಲಗಳ ಅಧಿಪರನ್ನೂ ಕ್ರಮವಾಗಿ ಪೂಜಿಸಬೇಕು.

**ಮಧ್ಯೇ ಶಕ್ತಿಂ ಚ ಕ್ಷೀರೋದಮನಂತಂ ಪೃಥಿವೀಂ ತಥಾ ।**
**ಕೂರ್ಮಂ ಚಾಧಾರಶಕ್ತಿಂ ಚ ಸುಮೇರುಂ ಮಂದರಂ ತಥಾ　　॥ ೩೯ ॥**

**ಪಂಚತತ್ತ್ವಂ ಸಮಭ್ಯರ್ಚ್ಯ ಸಾಂಗೋಪಾಂಗಮನಂತರಂ ।**
**ತತಃ ಶ್ವೇತಂ ಚ ಕುಸುಮಂ ಸಾಕ್ಷತಂ ಯೋಗಮಾಯಯಾ　　॥ ೪೦ ॥**

**ಗೃಹೀತ್ವಾ ಪೂರ್ವವದ್ದೇಶೇ ಸ್ಥಾಪಯೇತ್ಕಲಶೋಪರಿ ।**
**ಆವಾಹನಂ ತತಃ ಕೃತ್ವಾ ಮಂತ್ರೇಣಾನೇನ ಮಂತ್ರವಿತ್　　॥ ೪೧ ॥**

**ಏಹ್ಯೇಹಿ ಭಗವನ್ವರುಣ ಏಷ ಯಜ್ಞಃ ಪ್ರವರ್ತತೆ ।**
**ಯಜ್ಞಭಾಗಂ ಗೃಹಾಣೇದಂ ತ್ವಾಮೇವಾವಾಹಯಾಮ್ಯಹಂ　　॥ ೪೨ ॥**

**ಏವಮಾವಾಹ್ಯ ಲೋಕೇಶಮಷ್ಟೌಮುದ್ರಾಃ ಪ್ರದರ್ಶಯೇತ್ ।**
**ಗಾಯತ್ರ್ಯಾ ಸ್ಥಾಪಯಿತ್ವಾ ತು ದದ್ಯಾತ್ಪಾದ್ಯಾದಿಕತ್ರಯಂ　　॥ ೪೩ ॥**

---

೩೯. ಪೀಠಮಧ್ಯಭಾಗದಲ್ಲಿ ಶಕ್ತಿ, ಕ್ಷೀರಸಮುದ್ರ, ಅನಂತ, ಪೃಥಿವೀ, ಆದಿ ಕೂರ್ಮ, ಆಧಾರಶಕ್ತಿ, ಸುಮೇರು, ಮಂದರ ಇವುಗಳನ್ನೂ

೪೦. ಮತ್ತು ಪಂಚತತ್ವಗಳನ್ನೂ ಅವುಗಳ ಅಂಗದೇವತೆ ಉಪಾಂಗದೇವತೆಗಳ ಸಹಿತವಾಗಿ ಪೂಜಿಸಬೇಕು. ಅನಂತರ ಬಿಳಿಯಹೂವನ್ನೂ ಅಕ್ಷತೆಯನ್ನೂ ತೆಗೆದುಕೊಂಡು ಯೋಗಮಾಯಾಮುದ್ರೆಯಿಂದ ಹಿಡಿದುಕೊಂಡು

೪೧. ಹಿಂದೆ ಹೇಳಿದ ಕಲಶದಲ್ಲಿಯೇ ವರುಣನನ್ನೂ ಆವಾಹನೆಮಾಡಿ ಸ್ಥಾಪಿಸಬೇಕು. ಮಂತ್ರಜ್ಞನು 'ಎಲೈ ಭಗವಂತನಾದ ವರುಣನೇ ಇಲ್ಲಿ ಬಾ

೪೨. ಈ ಯಜ್ಞವು ನಡೆಯುವಾಗ ಯಜ್ಞಭಾಗವನ್ನು ಪರಿಗ್ರಹಿಸು. ನಾನು ನಿನ್ನನ್ನು ಆವಾಹನೆ ಮಾಡಿರುವೆನು. ಬಾ ! ಎಂಬ ಅರ್ಥವುಳ್ಳ ಮಂತ್ರವನ್ನುಚ್ಚರಿಸಬೇಕು.

೪೩. ಲೋಕಪಾಲಕನಾದ ವರುಣನನ್ನು ಈ ಮಂತ್ರವತ್ತಾಗಿ ಆವಾಹನ ಮಾಡಿ ಎಂಟುವಿಧವಾದ ಮುದ್ರೆಗಳನ್ನು ಪ್ರದರ್ಶಿಸಬೇಕು. ಗಾಯತ್ರೀ ಮಂತ್ರ ಪೂರ್ವಕವಾಗಿ ಅರ್ಘ್ಯ ಪಾದ್ಯ ಆಚಮನೀಯಗಳನ್ನು ಸಮರ್ಪಿಸಿ ಬಳಿಕ ಸ್ನಾನ(ಅಭಿಷೇಕ) ಮಾಡಿಸಬೇಕು.

ಪುಷ್ಪಾಂಜಲಿಂ ತತೋ ದತ್ವಾ ಮೂಲಮಂತ್ರೇಣ ದೇಶಿಕಃ ।
ಪೂರ್ವಾದಿಪತ್ರಮೂಲೇಷು ಧರ್ಮಾದೀನ್ಪೂಜಯೇದ್ಬುಧಃ ॥ ೪೪ ॥

ಸತ್ವಾದ್ಯಾಃ ಪೂಜಯೇತ್ತತ್ರ ತೇಷಾಮೇವ ವರಾಂಗನಾಃ ।
ಜ್ಞಾನಂ ಧರ್ಮಂ ಚ ಸೋಮಂ ಚ ರಜಃ ಸತ್ವಂ ತಮಸ್ತಥಾ ॥ ೪೫ ॥

ಪೂರ್ವಾದಿಪತ್ರಮಧ್ಯೇ ತು ಗ್ರಹಾನಷ್ಟೌ ಪ್ರಪೂಜಯೇತ್ ।
ಪತ್ರಾಗ್ರೇ ಲೋಕಪಾಲಾನಾಮಗ್ನ್ಯಾದೀನಾಯುಧಾಂಸ್ತಥಾ ॥ ೪೬ ॥

ಕರ್ಣಿಕಾದಕ್ಷಿಣೇ ಸೂರ್ಯಂ ವಾಮೇ ಚಾಪಿ ಶಚೀಪತಿಂ ।
ಪೂರ್ವಪತ್ರೇ ತು ಬ್ರಹ್ಮಾಣಂ ಪೂಜಯೇತ್ಸಿತಪಂಕಜೈಃ ॥ ೪೭ ॥

ನೈಋರ್ತ್ಯೇ ವರುಣಂ ಚಾಥ ಮಧ್ಯೇಽನಂತಂ ಪ್ರಪೂಜಯೇತ್ ।
ಪೀಠಮಂತ್ರೇಷು ಪೂರ್ವಾದಿ ಬ್ರಹ್ಮಾಣಂ ಚ ಶಿವಂ ತಥಾ ॥ ೪೮ ॥

---

೪೪. ವಸ್ತ್ರಗಂಧಾದಿ ಇತರ ಪೂಜಾಸಂಭಾರಗಳಿಂದ ಪೂಜಿಸಿ ಅನಂತರ ಆಚಾರ್ಯನು ಮೂಲಮಂತ್ರೋಚ್ಚಾರಣಪೂರ್ವಕವಾಗಿ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು.

೪೫. ವಿದ್ವಾಂಸನಾದವನು ಪೂರ್ವ ಮೊದಲಾದ ದಿಕ್ಕುಗಳಿಗೆ ಪ್ರಸರಿಸಿರುವ ಅಷ್ಟದಳಗಳ ಮೂಲಭಾಗದಲ್ಲಿ ಧರ್ಮ ಮುಂತಾದುವನ್ನು ಆವಾಹಿಸಿ ಪೂಜಿಸಬೇಕು ಸತ್ವ, ರಜಸ್, ತಮಸ್ ಮೊದಲಾದುವುಗಳನ್ನೂ, ಅವುಗಳ ಅಧಿದೇವತೆಗಳನ್ನೂ, ಅವರುಗಳ ಪತ್ನಿಯರನ್ನೂ ಅಲ್ಲಿಯೇ ಪೂಜೆಮಾಡಬೇಕು.

೪೬. ಪೂರ್ವ ಮೊದಲಾದ ದಿಕ್ಕುಗಳಿಗೆ ಪ್ರಸರಿಸಿರುವ ಅಷ್ಟದಳಗಳ ಮಧ್ಯಭಾಗದಲ್ಲಿ ಜ್ಞಾನವನ್ನೂ, ಧರ್ಮವನ್ನೂ, ಸೋಮನನ್ನೂ, ಎಂಟು ಗ್ರಹಗಳನ್ನೂ ಪೂಜಿಸಬೇಕು. ಅಷ್ಟದಳಗಳ ತುದಿಯಲ್ಲಿ ಅಗ್ನಿ ಮೊದಲಾದ ಲೋಕಪಾಲಕರನ್ನೂ ಅವರ ಆಯುಧಗಳನ್ನೂ ಆವಾಹಿಸಬೇಕು.

೪೭. ಆ ಅಷ್ಟದಳಪದ್ಮದ ಕರ್ಣಿಕೆಯ ಬಲಭಾಗದಲ್ಲಿ ಸೂರ್ಯನನ್ನೂ, ಎಡಗಡೆ ಇಂದ್ರನನ್ನೂ, ಪೂರ್ವದಿಕ್ಕಿನ ಪತ್ರದಲ್ಲಿ ಬ್ರಹ್ಮನನ್ನೂ ಆವಾಹಿಸಬೇಕು.

೪೮-೪೯. ಹಾಗೆಯೇ ನೈಋತ್ಯದಲ್ಲಿ ವರುಣನನ್ನೂ, ಮಧ್ಯಭಾಗದಲ್ಲಿ ಅನಂತನನ್ನೂ ಆವಾಹಿಸಿ ಎಲ್ಲರನ್ನೂ ಬಿಳಿಯಕಮಲಗಳಿಂದ ಪೂಜಿಸಬೇಕು. ಪೀಠ

**ವಿಷ್ಣುಂ ಚಾಪಿ ಗಣೇಶಂ ಚ ಪೃಥಿವೀಂ ಗಂಧಚಂದನೈಃ ।**
**ಜಪೇನ್ಮಂತ್ರಂ ಸಾಷ್ಟಶತಂ ಸಹಸ್ರಂ ವಿಜಪೇದ್ಬುಧಃ ॥ ೪೯ ॥**

**ಜಾನುಭ್ಯಾಮವನೀಂ ಗತ್ವಾ ವಿಜಯಾಖ್ಯಸ್ತವಂ ಪಠೇತ್ ।**
**ಈಶಾದಿಪೀಠತೋಣೇಷು ಕಮಲಾಮಂಬಿಕಾಂ ತಥಾ ॥ ೫೦ ॥**

**ನೈರ್ಋತ್ಯಾಂ ವಿಶ್ವಕರ್ಮಾಣಂ ವಾಯವ್ಯೇ ತು ಸರಸ್ವತೀಂ ।**
**ಪೂರ್ವಾದಿದ್ವಾರದೇಶೇ ತು ಮರುತಂ ಚಾವಹಾದಿಕಂ ॥ ೫೧ ॥**

**ಆವಹಂ ಪ್ರವಹಂ ಚೈವ ತಥೈವೋದ್ವಹಸಂವಹೌ ।**
**ವಿನ್ಯಸೇತ್ ಪಶ್ಚಿಮೇ ದ್ವಾರಿ ನಿವಹಂ ಚ ಪರೀವಹಂ ॥ ೫೨ ॥**

**ವಿನ್ಯಸೇದುತ್ತರದ್ವಾರಿ ಮರುತಂ ಚ ಪರಾವಹಮ್ ।**
**ಆಗ್ನೇಯಾದಿಷು ಕೋಣೇಷು ಬಹಿಷ್ಪೀಠಂ ತತೋ ಯಜೇತ್ ॥ ೫೩ ॥**

---

ಪೂಜಾಂಗವಾದ ಮಂತ್ರಗಳಿಂದ ಪೂರ್ವ ಮೊದಲಾದ ನಾಲ್ಕುದಿಕ್ಕುಗಳಲ್ಲಿ ಬ್ರಹ್ಮ, ಶಿವ, ವಿಷ್ಣು, ಗಣೇಶ ಇವರನ್ನೂ, ಮಧ್ಯೆ ಪೃಥ್ವಿಯನ್ನೂ ಆವಾಹಿಸಿ ಗಂಧ ಪುಷ್ಪ, ಧೂಪ ಇವುಗಳಿಂದ ಪೂಜಿಸಬೇಕು.

೫೦. ಜ್ಞಾನಿಯಾದವನು ಮಂಡಿಗಳನ್ನು ನೆಲಕ್ಕೆ ಊರಿ ಕುಳಿತು 'ವಿಜಯ ಸ್ತವ' ಎಂಬ ಹೆಸರಿನ ಸ್ತೋತ್ರಮಂತ್ರವನ್ನು ನೂರೆಂಟುಸಾರಿಯೋ, ಸಾಧ್ಯವಾದರೆ ಸಾವಿರಸಾರಿಯೋ ಜಪಿಸಬೇಕು. ಪೀಠದ ಈಶಾನ್ಯ, ಆಗ್ನೇಯ ಈ ಮೂಲೆಗಳಲ್ಲಿ ಕಮಲೆ, ಅಂಬಿಕೆ ಇವರನ್ನೂ,

೫೧. ನೈಋತ್ಯಕೋಣದಲ್ಲಿ ವಿಶ್ವಕರ್ಮನನ್ನೂ, ವಾಯವ್ಯದಿಕ್ಕಿನಲ್ಲಿ ಸರಸ್ವತಿಯನ್ನೂ ಆವಾಹನೆಮಾಡಬೇಕು. ಪೂರ್ವ ಮೊದಲಾದ ದಿಕ್ಕುಗಳ ದ್ವಾರದಲ್ಲಿ ಆವಹ ಮುಂತಾದ ಸಪ್ತಮರುತ್ತುಗಳನ್ನು ಪೂಜಿಸಬೇಕು

೫೨-೫೩. ಎಂದರೆ ಪೂರ್ವದ್ವಾರದಲ್ಲಿ ಆವಹ, ಪ್ರವಹ ಎಂಬ ಎರಡು ಮರುತ್ತುಗಳನ್ನೂ, ದಕ್ಷಿಣದ್ವಾರದಲ್ಲಿ ಉದ್ವಹ, ಸಂವಹ ಎಂಬ ಎರಡು ಮರುತ್ತುಗಳನ್ನೂ ಪಶ್ಚಿಮದ್ವಾರದಲ್ಲಿ ನಿವಹ, ಪರೀವಹ ಎಂಬೆರಡು ಮರುತ್ತುಗಳನ್ನೂ ಉತ್ತರ ದ್ವಾರದಲ್ಲಿ ಪರಾವಹಮರುತ್ತನ್ನೂ ಪೂಜಿಸಬೇಕು.

**ಪಿಶಾಚಾನ್ ರಾಕ್ಷಸಾನ್ ಭೂತಾನ್ ವೇತಾಲಾಂಶ್ಚ ತಥಾ ಕ್ರಮಾತ್ ।**
**ಕ್ಷೋಭಕಃ ಕಾಮರೂಪಶ್ಚ ಸೌಭದ್ರೋ ಮರುತಸ್ತಥಾ ॥ ೫೪ ॥**

**ಗೋಮುಖೋ ನಂದಭದ್ರಶ್ಚ ದ್ವಿಜಿಹ್ವೋ ಮಲಿನಸ್ತಥಾ ।**
**ಹಸ್ತಿಕರ್ಣೋ ವಿಶಾಲಾಖ್ಯಃ ಸಪ್ತ ರಕ್ಷೋಗಣಾಃ ಸ್ಮೃತಾಃ ॥ ೫೫ ॥**

**ಭೂಮಿದೋ ವರದಶ್ಚೈವ ಜಯಂತಃ ಕ್ಷೋಭಕಸ್ತಥಾ ।**
**ವಿವಸ್ವಂತಃ ಸುದಂತಶ್ಚ ಏತೇ ಭೂತಗಣಾಃ ಸ್ಮೃತಾಃ ॥ ೫೬ ॥**

**ಅಂಗದೋ ನೀಲಕರ್ಣೋಽಸೌ ವಸಂತೋ ಯಾವಕಸ್ತಥಾ ।**
**ಘೋರರೂಪಾ ಮಹಾಕಾಯಾ ವೇತಲಾಶ್ಚ ಪ್ರಕೀರ್ತಿತಾಃ ॥ ೫೭ ॥**

**ಗಂಧಪುಷ್ಪಾಕ್ಷತಾದ್ಯೈಶ್ಚ ಸರ್ವೇ ದೇವಾ ಗ್ರಹಾದಯಃ ।**
**ಧ್ಯಾನವರ್ಣಾನುರೂಪೇಣ ಪೂಜನೀಯಾಃ ಪ್ರಯತ್ನತಃ ॥ ೫೮ ॥**

---

೫೪. ಪೀಠದ ಹೊರಗೆ ಆಗ್ನೇಯಾದಿ ಕೋಣಗಳಲ್ಲಿ ಪಿಶಾಚಗಣ, ರಾಕ್ಷಸ ಗಣ, ಭೂತಗಣ, ಬೇತಾಲ ಗಣಗಳನ್ನೂ ಕ್ರಮವಾಗಿ ಪೂಜಿಸಬೇಕು. ಕ್ಷೋಭಕ, ಕಾಮರೂಪ, ಸೌಭದ್ರ, ಮರುತ ಮುಂತಾದುವು ಪಿಶಾಚ ಗಣಗಳೆನಿಸಿವೆ.

೫೫. ಗೋಮುಖ, ನಂದ, ಭದ್ರ, ದ್ವಿಜಿಹ್ವ, ಮಲಿನ, ಹಸ್ತಿಕರ್ಣ, ವಿಶಾಲ ಎಂಬ ಇವು ಏಳು ರಕ್ಷೋಗಣಗಳೆಂದು ತಿಳಿಯಬೇಕು.

೫೬. ಭೂಮಿದ, ವರದ, ಜಯಂತ, ಕ್ಷೋಭಕ, ವಿವಸ್ವಂತ, ಸುದಂತ ಇವು ಭೂತಗಣಗಳೆಂದು ತಿಳಿಯಬೇಕು

೫೭. ಅಂಗದ, ನೀಲಕರ್ಣ, ವಸಂತ, ಯಾವಕ, ಘೋರರೂಪ, ಮಹಾ ಕಾಯ ಇವು ಬೇತಾಳಗಣಗಳೆಂದು ತಿಳಿಯಬೇಕು.

೫೮. ಗ್ರಹಗಳನ್ನೂ ಸಮಸ್ತವಾದ ದೇವಾದಿಗಣಗಳನ್ನೂ ಅವರವರ ವರ್ಣಾದಿಗಳಿಗೆ ಅನುರೂಪವಾಗಿ ಧ್ಯಾನಿಸಿ ಗಂಧ, ಪುಷ್ಪ, ಅಕ್ಷತೆ ಮುಂತಾದ ಉಪಕರಣಗಳಿಂದ ಪ್ರಯತ್ನಪೂರ್ವಕವಾಗಿ ಪೂಜಿಸಬೇಕು.

ಧ್ಯಾಯೇದಾದಿತ್ಯಮಾರಕ್ತಂ ರಕ್ತಪದ್ಮಾಸನಸ್ಥಿತಮ್ ।
ರಕ್ತಾಂಬರಧರಂ ರಕ್ತಂ ರಕ್ತಮಾಲ್ಯಾನುಲೇಪನಮ್ ॥ ೫೯ ॥

ಯವವಿದ್ರುಮಸಂಕಾಶಂ ಸಿಂಧೂರಾರುಣಸಪ್ರಭಂ ।
ಆಕೃಷ್ಣೇನೇತಿ ಮಂತ್ರೇಣ ಸ್ಥಾಪಯೇತ್ಕಲಶೋಪರಿ ॥ ೬೦ ॥

ಇಹಾಗಚ್ಛೇತಿ ಚಾವಾಹ್ಯ ಪಾದ್ಯಾರ್ಘ್ಯೈರ್ಶ್ಚ ಪೃಥಗ್ವಿಧೈಃ ।
ಗಂಧಪುಷ್ಪಾದಿಭಿರ್ಭಕ್ತ್ಯಾ ಪೂಜಯೇತ್ತಂ ಯಥಾವಿಧಿ ॥ ೬೧ ॥

ಬಲಿಂ ಚ ಲೋಹಿತಂ ದದ್ಯಾತ್ ಪಾಯಸಂ ದಧಿ ಖಂಡಕಂ ।
ಘೃತಲಿಪ್ತಂ ಚ ಶಾಲ್ಯನ್ನಂ ಪತಾಕಾಂ ರಕ್ತವರ್ಣಿಕಾಂ ॥ ೬೨ ॥

ಶ್ವೇತಾಂಬರಧರಂ ಶ್ವೇತಂ ಶುಕ್ಲಗಂಧಾನುಲೇಪನಮ್ ।
ದ್ವಿಭುಜಂ ವರದಂ ದೇವಂ ಗದಾಹಸ್ತಂ ಮಹಾಬಲಮ್ ॥ ೬೩ ॥

---

೫೯. ಸೂರ್ಯದೇವನು ಕೆಂಪುಬಣ್ಣವುಳ್ಳವನೂ, ಕೆಂಪುತಾವರೆಯಲ್ಲಿ ಕುಳಿತಿರುವವನೂ, ಕೆಂಪುವಸ್ತ್ರ, ಕೆಂಪುಪುಷ್ಪ, ಕೆಂಪುಗಂಧ ಇವನ್ನು ಧರಿಸಿರುವವನೂ,

೬೦. ಮತ್ತು ಯವಧಾನ್ಯ ಹವಳ ಇವುಗಳಂತೆ ಕಾಂತಿಯುಳ್ಳವನೂ, ಚಂದ್ರದ ಬಣ್ಣದಂತೆ ಎಳಗೆಂಪು ಪ್ರಭೆಯುಳ್ಳವನೂ ಆಗಿರುವನೆಂದು ಧ್ಯಾನಮಾಡಿ ಅನಂತರ 'ಆಕೃಷ್ಣೇನರಜಸಾ' ಎಂಬ ಮಂತ್ರವನ್ನು ಹೇಳಿ ಆ ಕಲಶದಲ್ಲೇ ಆವಾಹನಮಾಡಬೇಕು.

೬೧. ಓ ಸ್ವಾಮಿಾ ! ಈ ಕಲಶದಲ್ಲಿ ಬಂದು ನೆಲಸು ಎಂದು ಹೇಳಿ ಅರ್ಘ್ಯ, ಪಾದ್ಯ ಮೊದಲಾದುವುಗಳನ್ನು ಪ್ರತ್ಯೇಕವಾಗಿ ಸಮರ್ಪಿಸಿ ಗಂಧ, ಅಕ್ಷತೆ, ಪುಷ್ಪ, ಮೊದಲಾದ ಪರಿಕರಗಳಿಂದ ಭಕ್ತಿಪೂರ್ವಕವಾಗಿ ವಿಧಿಪ್ರಕಾರ ಪೂಜಿಸಬೇಕು.

೬೨. ಬಳಿಕ ಕೆಂಪುಬಣ್ಣದ ಅನ್ನ, ಪಾಯಸ, ಮೊಸರಗರಣೆ ಮತ್ತು ತುಪ್ಪ ಹಾಕಿ ಕಲಸಿದ ಶಾಲ್ಯನ್ನ ಇವುಗಳಿಂದ ಸಿದ್ಧಪಡಿಸಿದ ಬಲಿಯನ್ನು ಕೆಂಪುಬಣ್ಣದ ಬಟ್ಟೆಯ ಪತಾಕಾಸಮೇತವಾಗಿ ಅರ್ಪಿಸಬೇಕು.

೬೩. ಚಂದ್ರನನ್ನು ಬಿಳಿಯವಸ್ತ್ರವನ್ನು ಧರಿಸಿದವನೂ, ಬಿಳಿಯಬಣ್ಣದ ದೇಹಕಾಂತಿಯುಳ್ಳವನೂ, ಬಿಳಿಯಗಂಧವನ್ನು ತೊಡೆದುಕೊಂಡು ಇರುವವನೂ,

ನಾನಾಭರಣಸಂಪನ್ನಂ ಸಿದ್ಧಗಂಧರ್ವಸೇವಿತಮ್ ।
ಶುಕ್ಲಪದ್ಮಾಸನಸ್ಥಂ ಚ ಶಶಾಂಕಂ ಶ್ವೇತಭೂಷಣಮ್ ॥ ೬೪ ॥

ಇಮಂದೇವಾ ಇತಿ ಮಂತ್ರೇಣ ಸ್ಥಾಪಯೇತ್ಪೂರ್ವದಿಗ್ದಲೇ ।
ಸಿತವಸ್ತ್ರೈಶ್ಚ ಪುಷ್ಪೈಶ್ಚ ಶುಕ್ಲಮಾಲ್ಯಾನುಲೇಪನೈಃ ॥ ೬೫ ॥

ಪಾಯಸೈಃ ಶ್ವೇತಬಲಿಭಿರ್ದಧಿಭಕ್ತಂ ನಿವೇದಯೇತ್ ।
ಧೂಪೈಃ ಶ್ವೇತಪತಾಕಾಭಿರ್ನೈವೇದ್ಯೈರ್ವಿವಿಧೈರಪಿ ॥ ೬೬ ॥

ರಕ್ತಮಾಲ್ಯಾಂಬರಂ ದೇವಂ ರಕ್ತಾಭರಣಭೂಷಿತಂ ।
ಸುಚಾರುನಯನಂ ರಕ್ತಂ ರಕ್ತಪದ್ಮಾಸನಸ್ಥಿತಂ ॥ ೬೭ ॥

---

ಎರಡು ಭುಜಗಳುಳ್ಳವನೂ, ವರವನ್ನು ಕೊಡತಕ್ಕವನೂ, ಗದೆಯನ್ನು ಕೈಯಲ್ಲಿ ಹಿಡಿದಿರುವವನೂ, ಮಹಾಬಲಶಾಲಿಯೂ

೬೪. ಮತ್ತು ಬೆಳ್ಳಗೆ ಥಳಥಳಿಸುವ ಅನೇಕ ಆಭರಣಗಳಿಂದ ಕೂಡಿದವನೂ, ಸಿದ್ಧರು ಗಂಧರ್ವರುಗಳಿಂದ ಸೇವೆಮಾಡಿಸಿಕೊಳ್ಳತಕ್ಕವನೂ, ಬಿಳಿದಾವರೆಯಮೇಲೆ ಕುಳಿತುಕೊಂಡಿರುವವನೂ ಆಗಿದಾನೆಂದು ಧ್ಯಾನಿಸಬೇಕು.

೬೫. ಬಳಿಕ 'ಇಮಂ ದೇವಾ' ಎಂಬ ಮಂತ್ರವನ್ನು ಹೇಳಿ ಪೂರ್ವದಿಕ್ಕಿನ ಎಸಳಿನಲ್ಲಿ ಚಂದ್ರನನ್ನು ಸ್ಥಾಪನೆಮಾಡಿ ಬಿಳಿಯಬಣ್ಣದ ವಸ್ತ್ರಗಳು, ಬಿಳಿಯಹೂವುಗಳು, ಬಿಳಿಯಹೂವಿನ ಮಾಲಿಕೆಗಳು, ಬಿಳಿಯಗಂಧ ಮೊದಲಾದುವುಗಳಿಂದ ಪೂಜಿಸಬೇಕು.

೬೬. ಅನಂತರ ಮೊಸರನ್ನವನ್ನೂ, ಪಾಯಸವನ್ನೂ, ನೈವೇದ್ಯಮಾಡಿ ಬಿಳಿಯಬಿನ್ನ, ವಿವಿಧವಾದ ನಿವೇದನವಸ್ತುಗಳು, ಧೂಪ, ಬಿಳಿಯಬಣ್ಣದ ಬಟ್ಟೆಯ ಪತಾಕೆ ಇವನ್ನು ಬಲಿಸಮರ್ಪಣೆ ಮಾಡಬೇಕು.

೬೭. ಕೆಂಪುಹೂಮಾಲೆಗಳು, ಕೆಂಪುಬಣ್ಣದವಸ್ತ್ರಗಳು ಇವುಗಳನ್ನು ಧರಿಸಿದವನೂ, ಕೆಂಪುಬಣ್ಣದ ಒಡವೆಗಳಿಂದ ಶೃಂಗರಿಸಿಕೊಂಡವನೂ, ಕೆಂಪಾಗಿ ಸುಂದರವಾಗಿರುವ ಕಣ್ಣುಳ್ಳವನೂ, ಕೆಂಪುತಾವರೆಹೂವಿನ ಮೇಲೆ ಕುಳಿತಿರುವವನೂ

**ಕಿರೀಟಕುಂಡಲಧರಂ ಮೇಷಕಂಠಂ ಚತುರ್ಭುಜಂ ।**
**ವರದಂ ಯಜ್ಞನಾಶಂ ಚ ಶೂಲಶಕ್ತಿಗಧಾಧರಮ್ ॥ ೬೮ ॥**

**ಸರ್ವಕಾಮಪ್ರದಂ ದೇವಂ ಸಿದ್ಧಗಂಧರ್ವಸೇವಿತಮ್ ।**
**ಚಿಂತಯೇತ್ಪರಯಾ ಭಕ್ತ್ಯಾ ಮಂಗಲಂ ಧರಣೀಸುತಮ್ ॥ ೬೯ ॥**

**ಅಗ್ನಿಮೀಳೇತಿ ಮಂತ್ರೇಣ ಸ್ಥಾಪಯೇದಗ್ನಿದಿಗ್ದಲೇ ।**
**ಪೂಜಯೇದ್ರಕ್ತಪುಷ್ಪೈಶ್ಚ ರಕ್ತಮಾಲ್ಯಾನುಲೇಪನೈಃ ॥ ೭೦ ॥**

**ಧೂಪೈ ರಕ್ತಪತಾಕಾಭಿರ್ಗುಡಭಕ್ತನಿವೇದನೈಃ ।**
**ಅತಸೀಪುಷ್ಪಸಂಕಾಶಂ ಕರ್ಣಿಕಾರಸಮಪ್ರಭಂ ॥ ೭೧ ॥**

---

೬೮. ತಲೆಯಲ್ಲಿ ಕಿರೀಟ, ಕಿವಿಯಲ್ಲಿ ಕುಂಡಲ, ಇವನ್ನು ಧರಿಸಿರುವವನೂ, ಮೇಷವನ್ನು ಏರಿರುವವನೂ, ನಾಲ್ಕುಭುಜಗಳುಳ್ಳವನೂ, ವರವನ್ನು ಕೊಡಬಲ್ಲವನೂ, ಬೇಕೆಂದರೆ ಯಜ್ಞವನ್ನು ನಾಶಮಾಡಿಬಿಡುವವನೂ, ಶೂಲ ಶಕ್ತ್ಯಾಯುಧ, ಗದೆ ಇವುಗಳನ್ನು ಧರಿಸಿರುವವನೂ,

೬೯. ಸಮಸ್ತ ಇಷ್ಟಾರ್ಥಗಳನ್ನು ಕೊಡತಕ್ಕವನೂ, ಸಿದ್ಧರಿಂದಲೂ ಗಂಧರ್ವರಿಂದಲೂ ಸೇವೆಮಾಡಿಸಿಕೊಳ್ಳತಕ್ಕವನೂ, ಭೂಮಿಪುತ್ರನೂ ಆದ ಅಂಗಾರಕನನ್ನು ಪರಮಭಕ್ತಿಯಿಂದ ಧ್ಯಾನಿಸಬೇಕು.

೭೦. ಅನಂತರ 'ಅಗ್ನಿಮೀಳೆ' ಎಂಬ ಮಂತ್ರಪೂರ್ವಕವಾಗಿ ಕುಜನನ್ನು ಆಗ್ನೇಯದಿಕ್ಕಿನ ಎಸಳಿನಲ್ಲಿ ಆವಾಹನಮಾಡಿ; ಕೆಂಪುಹೂವುಗಳು, ಕೆಂಪುಹೂಮಾಲಿಕೆಗಳು, ಕೆಂಪುಗಂಧ ಇವುಗಳಿಂದ ಪೂಜಿಸಿ ಧೂಪವನ್ನು ಬೆಳಗಿ ಗುಡಾನ್ನವನ್ನು ನಿವೇದನಮಾಡಬೇಕು.

೭೧. ಬಳಿಕ ಕೆಂಪುಬಣ್ಣದ ಬಟ್ಟೆಯ ಪತಾಕಾಸಮೇತ ಗುಡಾನ್ನವನ್ನು ಬಲಿ ಸಮರ್ಪಣೆಮಾಡಬೇಕು. ಅಗಸೆಯ ಹೂವಿನ ಬಣ್ಣದಂತೆ ಕಾಂತಿಯುಳ್ಳವನೂ, ಕರ್ಣಿಕಾರಪುಷ್ಪದಂತೆ ಪ್ರಕಾಶಮಾನನೂ,

ರೌಹಿಣೇಯಂ ಮಹಾಕಾಯಂ ನೀಲನೀರಜಲೋಚನಂ ।
ಪ್ರಶಾಂತವದನಂ ದೇವಂ ಪೀತವಸ್ತ್ರಂ ಚತುರ್ಭುಜಂ ॥ ೭೨ ॥

ಖಡ್ಗಚರ್ಮಧರಂ ತದ್ವದ್ಗದಾಪರಶುಧಾರಿಣಂ ।
ಪದ್ಮಾಸನಗತಂ ದೇವಂ ಪೀತಪದ್ಮಾಸನಸ್ಥಿತಂ ॥ ೭೩ ॥

ನಾನಾಭರಣಸಂಪೂರ್ಣಂ ಮೃಗೇಂದ್ರವರದಾಹನಂ ।
ಉದ್ಬುಧ್ಯಸ್ವೇತಿ ಮಂತ್ರೇಣ ಯಾಮ್ಯಾಂ ತು ಸ್ಥಾಪಯೇದ್ಬುಧಂ ॥ ೭೪ ॥

ಪೂಜಯೇದ್ಗಂಧಪುಷ್ಪಾದ್ಯೈಃ ಪೀತಗಂಧಾನುಲೇಪನೈಃ ।
ವಸ್ತ್ರೈಃ ಪೀತಪತಾಕಾಭಿರ್ಬಲಿಭಿಃ ಕೃಶರಾನ್ವಿತೈಃ ॥ ೭೫ ॥

ಪೀತವರ್ಣಂ ಗುರುಂ ಧ್ಯಾಯೇತ್ಪೀತಪದ್ಮಾಸನಸ್ಥಿತಂ ।
ಪೀತಾಭರಣಸಂಪನ್ನಂ ಪೀತವಸ್ತ್ರಂ ಚತುರ್ಭುಜಂ ॥ ೭೬ ॥

---

೭೨. ಚಂದ್ರಪತ್ನಿಯಾದ ರೋಹಿಣಿಯ ಮಗನೂ, ದೊಡ್ಡದಾದ ದೇಹವುಳ್ಳವನೂ, ಹಳದಿಯಬಣ್ಣದ ವಸ್ತ್ರವನ್ನು ಧರಿಸಿರುವವನೂ, ನಾಲ್ಕು ಭುಜಗಳಿಂದ ಯುಕ್ತನೂ ಆಗಿ

೭೩. ಅವುಗಳಲ್ಲಿ ಕತ್ತಿ, ಗುರಾಣಿ, ಗದೆ, ಪರಶು, ಇವುಗಳನ್ನು ಧರಿಸಿರುವವನೂ, ಹೊಂಬಣ್ಣದ ತಾವರೆಹೂವಿನ ಮೇಲೆ ಪದ್ಮಾಸನ ಹಾಕಿ ಕುಳಿತಿರುವವನೂ,

೭೪ ಮೈತುಂಬ ಅನೇಕ ಒಡವೆಗಳನ್ನು ಧರಿಸಿರುವವನೂ, ಶ್ರೇಷ್ಠವಾದ ಸಿಂಹವನ್ನು ವಾಹನವಾಗಿ ಉಳ್ಳವನೂ, ಆಗಿರುವನೆಂದು ಬುಧನನ್ನು ಧ್ಯಾನಿಸಬೇಕು. ಬಳಿಕ ದಕ್ಷಿಣದಿಕ್ಕಿನ ಎಸಳಿನಲ್ಲಿ 'ಉದ್ಬುಧ್ಯಸ್ವಾಗ್ನೇ' ಎಂಬ ಮಂತ್ರಪೂರ್ವಕವಾಗಿ ಆವಾಹನಮಾಡಬೇಕು.

೭೫. ಅನಂತರ ಶ್ರೀಗಂಧದ ಲೇಪನದಿಂದಲೂ, ಪುಷ್ಪಮಾಲೆಗಳಿಂಗಲೂ, ಹಳದಿಯ ವಸ್ತ್ರಗಳಿಂದಲೂ ಪೂಜಿಸಿ, ಎಳ್ಳುಹುಡಿ ಮಿಶ್ರವಾದ ಅನ್ನವನ್ನು ಹಳದೀ ಬಣ್ಣದ ಬಟ್ಟೆಯ ಪತಾಕೆಯ ಸಮೇತ ಬಲಿಸಮರ್ಪಣ ಮಾಡಬೇಕು.

೭೬–೭೭. ಬೃಹಸ್ಪತಿಯು ಹಳದಿಯಬಣ್ಣದ ದೇಹವುಳ್ಳವನಾಗಿ ಹೊಂಬಣ್ಣದ ಕಮಲದಮೇಲೆ ಕುಳಿತುಕೊಂಡು ಹೊಂಬಣ್ಣದ ಆಭರಣಗಳಿಂದ ಕೂಡಿದವನೂ,

**ವರದಂ ದಂಡಹಸ್ತಂ ಚ ಸಾಕ್ಷಸೂತ್ರಕಮಂಡಲುಂ ।**
**ಪೂಜ್ಯಮಾನಂ ಸುಗಂಧರ್ವೈಃ ಸೇಂದ್ರೈರ್ದೇವಗಣೈರಪಿ　　　　॥ ೭೭ ॥**

**ಬೃಹಸ್ಪತಯ ಇತಿ ಮಂತ್ರೇಣ ನೈಋತ್ಯಾಂ ದಿಶಿ ಸಂಸ್ಥಿತಂ ।**
**ಪೀತಚಂದನಗಂಧೈಶ್ಚ ಪೀತವಸ್ತ್ರಾದಿಭೂಷಣೈಃ　　　　॥ ೭೮ ॥**

**ಧೂಪೈಃ ಪೀತಪತಾಕಾಭಿಃ ಪೀತೋದಕನಿವೇದನೈಃ ।**
**ಪೂಜಯೇತ್ಪರಯಾ ಭಕ್ತ್ಯಾ ಪುರಂದರಪುರೋಹಿತಂ　　　　॥ ೭೯ ॥**

**ಧ್ಯಾಯೇಚ್ಛುಕ್ರಂ ಭೃಗುಸುತಂ ಶ್ವೇತಪದ್ಮಾಸನಸ್ಥಿತಂ ।**
**ಚತುರ್ಭುಜಂ ಮಹಾಕಾಯಂ ವರದಂ ದಂಡಧಾರಿಣಂ　　　　॥ ೮೦ ॥**

**ಮಹಾಬಾಹುಂ ವಿಶಾಲಾಕ್ಷಂ ಸಾಕ್ಷಸೂತ್ರಕಮಂಡಲುಂ ।**
**ಸ್ತೂಯಮಾನಂ ಮುನಿಶ್ರೇಷ್ಠೈಃ ಸೇವಿತಂ ದೈತ್ಯಪುಂಗವೈಃ　　　　॥ ೮೧ ॥**

---

ಹಳದಿಯವಸ್ತ್ರವನ್ನು ಧರಿಸಿರುವವನು, ನಾಲ್ಕು ಭುಜಗಳುಳ್ಳವನಾಗಿ ಅವುಗಳಲ್ಲಿ ಮೂರರಲ್ಲಿ ಕ್ರಮವಾಗಿ ದಂಡ, ಕಮಂಡಲ, ಜಪಸರ ಇವನ್ನು ಧರಿಸಿಯು ಮತ್ತೊಂದು ವರದಹಸ್ತವುಳ್ಳವನೂ ಆಗಿ, ಇಂದ್ರಾದಿ ದೇವತೆಗಳಿಂದಲೂ, ಗಂಧರ್ವರಿಂದಲೂ ಪೂಜೆ ಮಾಡಿಸಿಕೊಳ್ಳುವವನೂ ಆಗಿರುವನೆಂದು ಧ್ಯಾನಿಸಬೇಕು.

೭೮-೭೯. ಬಳಿಕ 'ಬೃಹಸ್ಪತೇ' ಎಂಬ ಮಂತ್ರದಿಂದ ನೈಋತ್ಯದಿಕ್ಕಿನ ಎಸಳಿನಲ್ಲಿ ಆವಾಹನಮಾಡಬೇಕು. ಹಳದಿಯಗಂಧ, ಹಳದಿಯವಸ್ತ್ರ, ಆಭರಣಗಳು, ಧೂಪ ಇವುಗಳಿಂದ ಅರ್ಚಿಸಿ ಹಳದಿಯಬಣ್ಣದ ಅನ್ನವನ್ನು ನಿವೇದನಮಾಡಬೇಕು. ದೇವೇಂದ್ರನ ಪುರೋಹಿತನೆನಿಸಿದ ಆ ಮಹಾತ್ಮನನ್ನು ಅತ್ಯಂತ ಭಕ್ತಿಯಿಂದ ಪೂಜಿಸಿ ಹಳದಿಬಣ್ಣದ ಪತಾಕೆ, ಧೂಪ, ಇವುಗಳ ಸಮೇತ ಹಳದಿಬಣ್ಣದ ಅನ್ನವನ್ನು ಬಲಿ ಸಮರ್ಪಣೆ ಮಾಡಬೇಕು.

೮೦-೮೩. ಭೃಗುಪುತ್ರನಾದ ಶುಕ್ರನನ್ನು ಬಿಳಿಯ ಕಮಲದಮೇಲೆ ಕುಳಿತಿರುವವನೂ, ನಾಲ್ಕುಭುಜಗಳು, ಮಹತ್ತಾದ ತೋಳುಗಳು, ವಿಶಾಲವಾದ ಕನ್ನೈದಿಲೆಬಣ್ಣದ ಕಣ್ಣುಗಳು, ದೊಡ್ಡದಾದ ದೇಹ ಇವುಳುಳ್ಳವನೂ, ಒಂದು ವರದಹಸ್ತವೂ ಮಿಕ್ಕಕೈಗಳಲ್ಲಿ ದಂಡ, ಕಮಂಡಲು, ಜಪಸರ ಇವನ್ನು ಧರಿಸಿರುವವನೂ, ಋಷಿಶ್ರೇಷ್ಠರಿಂದ ಹೊಗಳಿಸಿಕೊಳ್ಳತಕ್ಕವನೂ, ರಾಕ್ಷಸೇಂದ್ರರಿಂದ ಪೂಜೆಮಾಡಿಸಿಕೊಳ್ಳುವ

ಸಿಂಹಾಸನಗತಂ ದೇವಂ ನೀಲೇಂದೀವರಲೋಚನಂ ।
ವಿಲಸತ್ಪುಂಡರೀಕಸ್ಯ ಮಾಲಾಭಿರುಪಶೋಭಿತಂ ॥ ೮೨ ॥

ನಾನಾದೈತ್ಯೇಂದ್ರಪುತ್ರಾಂಶ್ಚ ಪಾಠಯಂತಂ ಮುಹುರ್ಮುಹುಃ ।
ನಾನಾಶಸ್ತ್ರಾಸ್ತ್ರಚತುರಂ ನಾನಾಶಾಸ್ತ್ರವಿಶಾರದಂ ॥ ೮೩ ॥

ಏವಂ ಧ್ಯಾತ್ವಾ ಭೃಗುಶ್ರೇಷ್ಠಂ ಜಪನ್ನನ್ನಾತ್ಪರಿಸ್ರುತಂ ।
ಮನಸಾ ಭಕ್ತಿಯುಕ್ತೇನ ಸ್ಥಾಪಯೇತ್ಪಶ್ಚಿಮೇ ದಲೇ ॥ ೮೪ ॥

ಸಿತಚಂದನವಸ್ತ್ರೈಶ್ಚ ಧೂಪಮಾಲ್ಯಾನುಲೇಪನೈಃ ।
ಧೂಪೈಃಶ್ವೇತಪತಾಕಾಭಿಃ ಸಕ್ತುಭಿಃ ಕ್ಷೀರಸಂಯುತೈಃ ॥ ೮೫ ॥

ಪೂಜಯೇತ್ಪರಯಾ ಭಕ್ತ್ಯಾ ಪುಂಡರೀಕಾಕ್ಷತೈರಪಿ ।
ಧ್ಯಾಯೇತ್ಸೌರಿಂ ಚತುರ್ಬಾಹುಂ ಶೂಲಹಸ್ತಂ ವರಪ್ರದಂ ॥ ೮೬ ॥

---

ವನೂ, ಕದಾಚಿತ್ ಸಿಂಹಾಸನವನ್ನೇರಿರುವವನೂ, ಬಿಳಿದಾವರೆಯ ಹೂಮಾಲೆಗಳಿಂದ ಅಲಂಕರಿಸಿಕೊಂಡು ಶೋಭಿಸುವವನೂ, ಅನೇಕ ರಾಕ್ಷಸಚಕ್ರವರ್ತಿಗಳ ಮಕ್ಕಳಿಗೆ ಮತ್ತೆ ಮತ್ತೆ ವಿದ್ಯಾಭ್ಯಾಸಮಾಡಿಸತಕ್ಕವನೂ, ಅನೇಕ ಬಗೆಯಾದ ಆಯುಧ ಪ್ರಯೋಗ ಮಂತ್ರಾಸ್ತ್ರಪ್ರಯೋಗ ಮಾಡುವುದರಲ್ಲಿ ನಿಪುಣನೂ, ಅನೇಕ ಶಾಸ್ತ್ರಗಳಲ್ಲಿ ಪಾರಂಗತನೂ ಆದವನೆಂದು ಧ್ಯಾನಿಸಬೇಕು.

೮೪. ಭೃಂಗುವಂಶಶ್ರೇಷ್ಠನಾದ ಅವನನ್ನು ಈ ರೀತಿ ಧ್ಯಾನಮಾಡಿ ಬಳಿಕ 'ಅನ್ನಾತ್ಪರಿಸ್ರುತಃ' ಎಂಬ ಮಂತ್ರವನ್ನು ಉಚ್ಚರಿಸುತ್ತಾ ಪಶ್ಚಿಮದಿಕ್ಕಿನ ಎಸಳಿನಲ್ಲಿ ಭಕ್ತಿಪೂರ್ವಕವಾಗಿ ಆವಾಹನೆಮಾಡಬೇಕು.

೮೫. ಅನಂತರ ಬಿಳಿಯಗಂಧ, ಬಿಳಿಯವಸ್ತ್ರ, ಹೂಮಾಲೆಗಳು, ಅನುಲೇಪನಗಳು, ಬಿಳಿದಾವರೆ ಅಕ್ಷತೆ ಈ ಪೂಜಾದ್ರವ್ಯಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಿ ಹಾಲುಮಿಶ್ರವಾದ ಹಿಟ್ಟನ್ನು ಬಿಳಿಯ ಪತಾಕೆಗಳ ಸಮೇತ ಬಲಿಸಮರ್ಪಣಮಾಡಬೇಕು.

೮೬. ಶನೈಶ್ಚರನನ್ನು ನಾಲ್ಕು ಬಾಹುಗಳುಳ್ಳವನೂ, ಆ ಕೈಗಳಲ್ಲಿ ಕ್ರಮವಾಗಿ ಶೂಲ ದಿವ್ಯವಾದ ಧನುಸ್ಸು ಬಾಣ ಇವುಗಳನ್ನು ಹಿಡಿದಿರುವವನೂ, ಒಂದು ವರದ ಹಸ್ತವುಳ್ಳವನೂ,

ಇಂದ್ರನೀಲನಿಭಂ ಶ್ಯಾಮಂ ದಿವ್ಯಬಾಣಧನುರ್ಧರಂ ।
ಇಂದೀವರಾಸನಸ್ಥಂ ಚ ಸರೋಜವರಸಪ್ರಭಂ　　　॥ ೮೭ ॥

ನೀಲಾಂಬರಧರಂ ನೀಲಪದ್ಮಮಾಲೋಪಶೋಭಿತಂ ।
ಘೋರರೂಪಂ ಮಹಾಕಾಯಂ ಛಾಯಾಹೃದಯನಂದನಂ　　　॥ ೮೮ ॥

ಶನ್ನೋದೇವೀತಿಮಂತ್ರೇಣ ವಾಯವ್ಯಾಂ ದಿಶಿ ವಿನ್ಯಸೇತ್ ।
ಕೃಷ್ಣಚಂದನವಸ್ತ್ರೈಶ್ಚ ಕೃಷ್ಣಮಾಲ್ಯಾನುಲೇಪನೈಃ　　　॥ ೮೯ ॥

ಧೂಪೈರ್ನೀಲಪತಾಕಾಭಿರ್ಬಲಿಭಿರ್ಮಾಷಮಿಶ್ರಿತೈಃ ।
ಧೂಮ್ರವರ್ಣಂ ಸದಾ ಕೇತುಂ ಗದಾಹಸ್ತಂ ವರಪ್ರದಂ　　　॥ ೯೦ ॥

ದ್ವಿಭುಜಂ ಭೀಮಕಾಯಂ ಚ ಧೂಮ್ರಾಕ್ಷಂ ಧೂಮ್ರವಾಸಸಂ ।
ಕೇತುಂ ಕೃಣ್ವನ್ನಿತಿ ಮಂತ್ರೇಣ ಐಶಾನ್ಯಾಂ ಸ್ಥಾಪಯೇದ್ದಿಶಿ　　　॥ ೯೧ ॥

---

೮೭. ಇಂದ್ರನೀಲರತ್ನಕ್ಕೆ ಸಮಾನವಾದ ಶ್ಯಾಮವರ್ಣವುಳ್ಳವನೂ, ಕಮಲವೆಂಬ ಪೀಠದಲ್ಲಿ ಕುಳಿತಿರುವವನೂ, ಶ್ರೇಷ್ಠವಾದ ಕಮಲದಂತೆ ಕಾಂತಿಯುಕ್ತನೂ,

೮೮. ನೀಲವರ್ಣದ ವಸ್ತ್ರವನ್ನು ಧರಿಸಿರತಕ್ಕವನೂ, ಕನ್ನೈದಿಲೆಯಮಾಲೆಯಿಂದ ಶೋಭಿಸತಕ್ಕವನೂ, ಭಯಂಕರವಾದ ರೂಪವೂ, ದೊಡ್ಡಶರೀರವೂ ಉಳ್ಳವನೂ, ಛಾಯಾದೇವಿಯ ಮನಸ್ಸಿಗೆ ಆನಂದವನ್ನುಂಟುಮಾಡತಕ್ಕ ಪ್ರಿಯಪುತ್ರನೂ ಆದವನೆಂದು ಧ್ಯಾನಿಸಬೇಕು.

೮೯. ಬಳಿಕ ವಾಯವ್ಯದಿಕ್ಕಿನ ಎಸಳಿನಲ್ಲಿ 'ಶಂನೋದೇವೀ' ಎಂಬ ಮಂತ್ರದಿಂದ ಶನಿಯನ್ನು ಆವಾಹಿಸಬೇಕು. ಕಪ್ಪುಬಣ್ಣದವಸ್ತ್ರ, ಕೃಷ್ಣಚಂದನಗಂಧ, ನೀಲವರ್ಣದ ಪುಷ್ಪಗಳು

೯೦. ಧೂಪ ಮೊದಲಾದುವುಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಿ ,ಉದ್ದಿನ ಹುಡಿಮಿಶ್ರವಾದ ಅನ್ನವನ್ನು ನೀಲವರ್ಣದ ಪತಾಕೆಯ ಸಮೇತ ಬಲಿಸಮರ್ಪಣೆ ಮಾಡಬೇಕು.

೯೧. ಕೇತುವನ್ನು ಸರ್ವದಾ ಧೂಮ್ರ (ಬೂದು) ವರ್ಣವಾಗಿರುವವನೂ, ಒಂದು ಕೈಯಲ್ಲಿ ಗದೆ, ಒಂದುವರದ ಹಸ್ತವುಳ್ಳ ಎರಡುಭುಜಗಳುಳ್ಳವನೂ, ಭಯಂಕರವಾದ ದೇಹವುಳ್ಳವನೂ, ಧೂಮ್ರವರ್ಣದ ವಸ್ತ್ರವನ್ನು ಧರಿಸಿರುವವನೂ ಆದವ

**ಧೂಮ್ರವರ್ಣೈಶ್ಚ ಮಾಲ್ಯೈಶ್ಚ ಧೂಮ್ರಗಂಧಾನುಲೇಪನೈಃ ।**
**ಧೂಮ್ರಧೂಮ್ರಪತಾಕಾಭಿರ್ಬಲಿಭಿರ್ಮಾಷಮಿಶ್ರಿತೈಃ ॥ ೯೨ ॥**

**ಪೂಜಯೇತ್ಪರಯಾ ಭಕ್ತ್ಯಾ ಕೇತುಂ ಸರ್ವಾರ್ಥಸಿದ್ಧಿದಂ ।**
**ಲೋಕಪಾಲಾನಹಂ ವಕ್ಷ್ಯೇ ಸರ್ವಸಿದ್ಧಿಪ್ರದಾಯಕಾನ್ ॥ ೯೩ ॥**

**ಯೇಷು ಪೂಜಿತಮಾತ್ರೇಷು ನಾಲಭ್ಯಂ ವಿದ್ಯತೇ ಕ್ವಚಿತ್ ।**
**ದೇವರಾಜಂ ತತೋ ಧ್ಯಾಯೇತ್ಪುಷ್ಪಬಾಣಚಯಪ್ರಭಂ ॥**
**ದ್ವಿಭುಜಂ ಪೀತಸಂಕಾಶಂ ನೀಲೇಂದೀವರಲೋಚನಂ ॥ ೯೪ ॥**

**ರಕ್ತೋತ್ಪಲಧರಂ ತದ್ವತ್ಪೀತವಾಸಃ ಸಮನ್ವಿತಂ ।**
**ಚಾಮರಾಸಕ್ತಹಸ್ತೈಶ್ಚ ಕನ್ಯಾರತ್ನೈಶ್ಚ ಶೋಭಿತಂ ॥ ೯೫ ॥**

---

ನೆಂದು ಧ್ಯಾನಿಸಿ ಈಶಾನ್ಯದಿಕ್ಕಿನ ಎಸಳಿನಲ್ಲಿ 'ಕೇತುಂಕೃಣ್ವನ್' ಎಂಬ ಮಂತ್ರಪೂರ್ವಕವಾಗಿ ಆವಾಹನೆಮಾಡಬೇಕು.

೯೨. ಸರ್ವಇಷ್ಟಾರ್ಥಗಳೂ ಸಿದ್ಧಿಸುವಂತೆ ಮಾಡಬಲ್ಲ ಕೇತುವನ್ನು ಧೂಮ್ರವರ್ಣದ ಹೂವುಗಳು ಧೂಮ್ರವರ್ಣದ ಗಂಧ ಮೊದಲಾದ ವಸ್ತುಗಳಿಂದ ಭಕ್ತಿಯುತನಾಗಿ ಪೂಜಿಸಿ ಉದ್ದಿನಹುಡಿ ಮಿಶ್ರವಾದ ಅನ್ನವನ್ನು ಧೂಮ್ರವರ್ಣದ ಪತಾಕೆಗಳ ಸಮೇತ ಬಲಿಸಮರ್ಪಣೆಮಾಡಬೇಕು.

೯೩. ಇನ್ನು ಸಮಸ್ತ ಇಷ್ಟಾರ್ಥಸಿದ್ಧಿಯನ್ನು ಉಂಟುಮಾಡತಕ್ಕ ಲೋಕಪಾಲಕರ ಸ್ವರೂಪಾದಿಗಳನ್ನು ಹೇಳುತ್ತೇನೆ. ಅವರನ್ನು ಪೂಜೆಮಾಡಿದರೆ ಲಭಿಸುವುದಕ್ಕೆ ಅಸಾಧ್ಯವಾದುದು ಯಾವುದೂ ಇಲ್ಲ.

೯೪-೯೫. ಇಂದ್ರನನ್ನು ಪೂಜಿಸುವಾಗ ಅನೇಕ ಮನ್ಮಥರ ಕಾಂತಿಯನ್ನು ಸೇರಿಸಿದಷ್ಟು ಕಾಂತಿಯುಕ್ತನೂ, ಎರಡುಭುಜಗಳುಳ್ಳವನೂ. ಹೊಂಬಣ್ಣವುಳ್ಳವನೂ, ಕನ್ನೈದಿಲೆಯಂತೆ ಕಣ್ಣುಳ್ಳವನೂ, ಕೆಂದಾವರೆಗಳನ್ನು ಧರಿಸಿರುವವನೂ, ಹಳದಿಯ ಬಣ್ಣದ ವಸ್ತ್ರದಿಂದ ಕೂಡಿದವನೂ, ಚಾಮರಗಳನ್ನು ಹಿಡಿದು ಬೀಸುವ ಶ್ರೇಷ್ಠರಾದ ಕನ್ಯೆಯರಿಂದ ಕೂಡಿ ಪ್ರಕಾಶಿಸುವವನೂ,

ಇಂದ್ರಾಣೀಂ ಚಿಂತಯೇದ್ವಾಮೇ ಉತ್ಪಲದ್ವಯಧಾರಿಣೀಂ ।
ಏವಂ ಸಂಪೂಜ್ಯಯೇದ್ಭಕ್ತ್ಯಾ ಸುರರಾಜಂ ಜಗತ್ಪ್ರಭುಂ ॥
ತ್ರಾತಾರಇತಿಮಂತ್ರೇಣ ಸ್ಥಾಪಯೇ ತ್ಕರ್ಣಿಕೋತ್ತರೇ ॥ ೯೬ ॥

ಪೂಜಯೇತ್ಪರಯಾ ಭಕ್ತ್ಯಾ ಧೂಪಗಂಧಾನುಲೈಪನೈಃ ।
ನಾನಾವಿಧೋಪಹಾರೈಶ್ಚ ಪತಾಕಾಭಿರ್ಧ್ವಜೈರಪಿ ॥ ೯೭ ॥

ಬಲಿಂ ಕ್ಷೀರಾನ್ವಿತಂ ದದ್ಯಾನ್ಮೋದಕಂ ಸಿತಶರ್ಕರಾಂ ।
ಉತ್ತಪ್ತಸ್ವರ್ಣಸಂಕಾಶಂ ವೀತಿಹೋತ್ರಂ ಚತುರ್ಭುಜಂ ॥ ೯೮ ॥

ಅರ್ಧಚಂದ್ರಸಮಸ್ಥಂ ಚ ಅಜವಾಹನಮುತ್ತಮಂ ।
ಜ್ವಾಲಾವಿತಾನಸಂರಕ್ತಂ ಮೂರ್ಧ್ನಿ ಸಪ್ತಶಿಖಾನ್ವಿತಂ ॥ ೯೯ ॥

---

೯೬. ಮತ್ತು ಎಡಭಾಗದಲ್ಲಿ ಎರಡು ಉತ್ಪಲಪುಷ್ಪಗಳನ್ನು ಧರಿಸಿದ ಶಚೀದೇವಿಯುಕ್ತನಾಗಿ ಶೋಭಿಸುವವನೂ,ಆದವನೆಂದು ಧ್ಯಾನಮಾಡಬೇಕು. ದೇವತೆಗಳ ರಾಜನೂ ಜಗತ್ತಿಗೆ ಪ್ರಭುವೂ ಆದ ದೇವೇಂದ್ರನನ್ನು ಅಷ್ಟದಳಪದ್ಮದ ಕರ್ಣಿಕೆಯ ಉತ್ತರಭಾಗದಲ್ಲಿ

೯೭. 'ತ್ರಾತಾರಮಿಂದ್ರ' ಎಂಬ ಮಂತ್ರವನ್ನು ಉಚ್ಚರಿಸುತ್ತಾ ಆವಾಹನೆ ಮಾಡಬೇಕು. ಅನಂತರ ಪರಮಭಕ್ತಿಯಿಂದ ಧೂಪ, ಅನುಲೇಪನಗಂಧಗಳನ್ನು ಸಮರ್ಪಿಸಿ ನಾನಾವಿಧವಾದ ವಸ್ತುಗಳನ್ನು ನಿವೇದನಮಾಡಬೇಕು.

೯೮. ಬಳಿಕ ಮೋದಕ, ಬಿಳಿಯಸಕ್ಕರೆ, ಹಾಲು ಇವುಗಳನ್ನು ಧ್ವಜಪತಾಕೆಗಳ ಸಮೇತ ಬಲಿಸಮರ್ಪಣೆಮಾಡಬೇಕು.

೯೯. ಅಗ್ನಿಯನ್ನು ಪೂಜಿಸುವಾಗ ಪುಟಹಾಕಿದ ಚಿನ್ನದಂತೆ ಪ್ರಕಾಶವಾಗಿ ಹೊಳೆಯುವವನೂ, ನಾಲ್ಕುಭುಜಗಳುಳ್ಳವನೂ, ಅರ್ಧಚಂದ್ರನಿಗೆ ಸಮಾನವಾಗಿರುವವನೂ, ಶ್ರೇಷ್ಠವಾದ ಮೇಷವನ್ನು ಟಗರುವಾಹನವಾಗಿ ಉಳ್ಳವನೂ, ಕೆಂಪುಜ್ವಾಲೆಗಳೆಂಬ ಚಪ್ಪರದಿಂದ ಕೂಡಿ ಅವರ ನೆತ್ತಿಯಲ್ಲಿ ಏಳುಶಿಖೆ (ಜಿಹ್ವೆ) ಗಳುಳ್ಳವನೂ,

ವರದಂ ವಿಭಯಂ ಮಾಲಾಂ ದಕ್ಷೇ ಸೂತ್ರಂ ಕಮಂಡಲುಂ ।
ತ್ರಿನೇತ್ರರಕ್ತನಯನಂ ಜಟಾಮುಕುಟಮಂಡಿತಂ ॥ ೧೦೦ ॥

ನಾನಾಭರಣಸಂಪನ್ನಂ ಸಿದ್ಧಗಂಧರ್ವಸೇವಿತಂ ।
ಅಗ್ನಿಜಿಹ್ವೇತಿ ಮಂತ್ರೇಣ ಸ್ಥಾಪಯೇದಗ್ನಿದಿಗ್ದಲೇ ॥ ೧೦೧ ॥

ಪೂಜಯೇದ್ರಕ್ತಪುಷ್ಪೈಶ್ಚ ರಕ್ತಮಾಲ್ಯಾನುಲೇಪನೈಃ ।
ಧೂಪೈ ರಕ್ತಪತಾಕಾಭಿರ್ಬಲಿಭಿಃ ಪಾಯಸೈರಪಿ ॥ ೧೦೨ ॥

ನೀಲಾಂಜನಚಯಪ್ರಖ್ಯಂ ನೀಲಸಿಂಹಾಸನಸ್ಥಿತಂ ।
ಮಹಾಮಹಿಷಮಾರೂಢಂ ದಂಡಪಾಶಧರಂ ವಿಭುಂ ॥ ೧೦೩ ॥

ಕರಾಲವದನಂ ಭೀಮಂ ಜ್ವಾಲಾಘೂರ್ಣಿತಲೋಚನಂ ।
ಘೋರದಂಷ್ಟ್ರಾಕರಾಲೈಶ್ಚ ಕಿಂಕರಾಣಾಂ ಗಣೈರ್ವೃತಂ ॥ ೧೦೪ ॥

---

೧೦೦. ಮತ್ತು ವರದ, ಅಭಯ ಎಂಬಿವೆರಡು ಮುದ್ರೆಗಳಿಂದಲೂ ಕಮಂಡಲು, ಜಪಸರ ಇವುಗಳಿಂದಲೂ ಕೂಡಿದ ಹಸ್ತಗಳು ಉಳ್ಳವನೂ, ಕೆಂಪಾದ ಮೂರುಕಣ್ಣುಗಳುಳ್ಳವನೂ, ಜಟೆಗಳು, ಕಿರೀಟ ಇವುಗಳಿಂದ ಅಲಂಕೃತನೂ, ಬಗೆ ಬಗೆಯಾದ ಒಡವೆಗಳಿಂದ ಕೂಡಿದವನೂ,

೧೦೧. ಸಿದ್ಧರಿಂದಲೂ, ಗಂಧರ್ವರಿಂದಲೂ ಸೇವೆಮಾಡಿಸಿಕೊಳ್ಳತಕ್ಕವನೂ, ಆಗಿರುವನೆಂದು ಧ್ಯಾನಿಸಿ, ಆ ಪದ್ಮದ ಆಗ್ನೇಯಮೂಲೆಯ ಎಸಳಿನಲ್ಲಿ 'ಯೇ ಅಗ್ನಿ ಜಿಹ್ವಾ' ಎಂಬ ಮಂತ್ರಪೂರ್ವಕವಾಗಿ ಆವಾಹನಮಾಡಬೇಕು.

೧೦೨. ಕೆಂಪು ಹೂಮಾಲಿಕೆಗಳು, ಕೆಂಪುಗಂಧ, ಧೂಪ ಇವುಗಳಿಂದ ಅಗ್ನಿ ದೇವವನ್ನು ಪೂಜಿಸಿ, ಪಾಯಸವನ್ನು ಕೆಂಪುಪತಾಕೆಗಳ ಸಮೇತ ಬಲಿಸಮರ್ಪಣೆ ಮಾಡಬೇಕು.

೧೦೩. ಯಮನನ್ನು ಪೂಜಿಸುವಾಗ ನೀಲಪರ್ವತದ ಸಮೂಹದಂತೆ ಕಾಂತಿ ಯುಕ್ತನೂ, ನೀಲವರ್ಣದ ಸಿಂಹಾಸನದಲ್ಲಿ ಕುಳಿತಿರುವವನೂ, ದೊಡ್ಡ ಕೋಣವನ್ನು ವಾಹನವಾಗಿ ಉಳ್ಳವನೂ, ದಂಡಾಯುಧ ಪಾಶ ಇವುಗಳನ್ನು ಧರಿಸಿರುವವನೂ

೧೦೪. ಭಯಂಕರವಾದ ಕಪ್ಪುಮುಖವುಳ್ಳವನೂ, ಕಿಡಿಯುಗುಳುತ್ತಾ ಇರುವ ಬಿರುಗಣ್ಣುಳ್ಳವನೂ, ನೋಡುವವರಿಗೆ ಭಯವನ್ನು ಹುಟ್ಟಿಸುವ ಕೋರೆಹಲ್ಲು

**ಅಚ್ಛೀಯಮಸ ಇತಿಮಂತ್ರೇಣ ಸ್ಥಾಪಯೇದ್ದ್ಯಮದಿಗ್ದಲೇ ।**
**ಪೂಜಯೇತ್ಪರಯಾ ಭಕ್ತ್ಯಾ ಧರ್ಮರಾಜಂ ಜಗದ್ಗುರುಂ ॥**
**ರಾಕ್ಷಸೇಂದ್ರಂ ಮಹಾಕಾಯಂ ಕೃಷ್ಣವರ್ಣಂ ದ್ವಿಬಾಹುಕಂ ॥ ೧೦೫ ॥**

**ನಾನಾಭರಣಸಂಪನ್ನಂ ಖಡ್ಗಹಸ್ತಂ ಮಹಾಬಲಂ ।**
**ವರಮುಕ್ತಾವಿಮಾನಸ್ಥಂ ಘೋರರೂಪಂ ಖಲೇಶ್ವರಂ ॥ ೧೦೬ ॥**

**ಏಷ ತ ಇತಿ ಮಂತ್ರೇಣ ನೈಋತ್ಯಾಂ ಸ್ಥಾಪಯೇದ್ದಿಶಿ ।**
**ಕೃಷ್ಣಚಂದನವಸ್ತ್ರೈಶ್ಚ ಕೃಷ್ಣಮಾಲ್ಯಾನುಲೇಪನೈಃ ॥ ೧೦೭ ॥**

**ಧೂಪೈಃ ಕೃಷ್ಣಪತಾಕಾಭಿರ್ಬಲಿಭಿರ್ಮಾಷಮಿಶ್ರಿತೈಃ ।**
**ಶುದ್ಧಸ್ಫಟಿಕಸಂಕಾಶಂ ಶಂಖಕುಂದೇಂದುಸಪ್ರಭಂ ॥ ೧೦೮ ॥**

---

ಗಳುಳ್ಳ ಸೇವಕಿಯರ ಸಮೂಹದಿಂದ ಪರಿವೃತನಾಗಿರುವವನೂ, ಎಡಗಡೆಯಲ್ಲಿ ತನ್ನ ವಾಹನವಾದ ಕೋಣವನ್ನೂ, ಬಲಗಡೆ ಚಿತ್ರಗುಪ್ತರನ್ನೂ ನಿಲ್ಲಿಸಿಕೊಂಡಿರುವವನೂ,

೧೦೫. ಜಗದ್ಗುರುವೂ ಆಗಿರುವನೆಂದು ಧ್ಯಾನಿಸಿ. ಆ ಪದ್ಮದ ದಕ್ಷಿಣದಿಕ್ಕಿನ ಎಸಳಿನಲ್ಲಿ 'ಅಚ್ಛೀಯ ಸಾ' ಎಂಬ ಮಂತ್ರಪೂರ್ವಕವಾಗಿ ಆವಾಹನಮಾಡಿ ಪರಮ ಭಕ್ತಿಯಿಂದ ಪೂಜಿಸಬೇಕು.

೧೦೬-೧೦೭. ರಾಕ್ಷಸರಿಗೆ ಅಧಿಪನೂ, ದೊಡ್ಡಶರೀರವುಳ್ಳವನೂ ಕಪ್ಪಗಿರುವವನೂ, ಎರಡು ಭುಜಗಳುಳ್ಳವನೂ, ಅನೇಕ ಆಭರಣಗಳಿಂದ ಕೂಡಿರುವವನೂ, ಕೈಯಲ್ಲಿ ಕತ್ತಿಯನ್ನು ಧರಿಸಿರುವವನೂ, ಮಹಾಬಲಶಾಲಿಯಾದವನೂ, ವರಮುಕ್ತವೆಂಬ ವಿಮಾನದಲ್ಲಿರುವವನೂ. ಭಯಂಕರವಾದ ರೂಪವುಳ್ಳವನೂ, ಖಲೇಶ್ವರನೂ ಆಗಿರುವನೆಂದು ನಿಋುಋತಿಯನ್ನು ಧ್ಯಾನಿಸಬೇಕು.

೧೦೮. ಬಳಿಕ ನೈಋತ್ಯದಿಕ್ಕಿನ ಎಸಳಿನಲ್ಲಿ 'ಏಷತೇ' ಎಂಬ ಮಂತ್ರಪೂರ್ವಕವಾಗಿ ಆವಾಹಿಸಿ ಕೃಷ್ಣಚಂದನ, ವಸ್ತ್ರಾದಿಗಳು, ನೀಲಕುಸುಮಮಾಲೆ, ಧೂಪ ಮುಂತಾದುವುಗಳಿಂದ ಪೂಜಿಸಬೇಕು. ಬಳಿಕ ಉದ್ದಿನಹುಡಿಅನ್ನವನ್ನು ಕಪ್ಪು ಬಣ್ಣದ ಪತಾಕೆಯೊಡನೆ ಬಲಿಸಮರ್ಪಣೆ ಮಾಡಬೇಕು.

ದ್ವಿಭುಜಂ ಪಾಶಹಸ್ತಂ ಚ ಸುಂದರಾಂಗಂ ವರಪ್ರದಂ ।
ವರುಣಸ್ಯೇತಿ ಮಂತ್ರೇಣ ಸ್ಥಾಪಯೇತ್ಪಶ್ಚಿಮೇ ದಲೇ ॥ ೧೦೯ ॥

ಸಿತಚಂದನಧೂಪೈಶ್ಚ ಪತಾಕಾಭಿರ್ಧ್ವಜೈರಪಿ ॥ ೧೧೦ ॥

ಸಮೀರಣಂ ಕುಂಜರವರ್ಣಸನ್ನಿಭಂ ಮೃಗಾಧಿರೂಢಂ ದ್ವಿಭುಜಂ ದ್ವಿನೇತ್ರಂ
ಧ್ವಜಾಂಬರಂ ಚಾಪಿ ದಧಾನಮೇಕಂ ನೀಲಾಂಬರಂ ಮೇಘಗಣೈರ್ವೃತಂ ಚ
॥ ೧೧೧ ॥

ನೀಲಚಂದನವಸ್ತ್ರೈಶ್ಚ ನೀಲಮಾಲ್ಯಾನುಲೇಪನೈಃ ।
ಪೂಜಯೇತ್ಪರಯಾ ಭಕ್ತ್ಯಾ ಪತಾಕಾಭಿರ್ಧ್ವಜೈರಪಿ ॥ ೧೧೨ ॥

ಧೂಪೈರ್ನೀಲಪತಾಕಾಭಿರ್ಬಲಿಭಿಃ ಪಾಯಸೈರಪಿ ॥ ೧೧೩ ॥

---

೧೦೯. ವರುಣನನ್ನು ಸ್ವಚ್ಛವಾದ ಸ್ಫಟಿಕದಂತೆ ಕಾಂತಿಯುತನೂ, ಶಂಖ, ಚಂದ್ರ, ಮಲ್ಲಿಗೆ ಇವುಗಳಂತೆ ಪ್ರಕಾಶಿಸುವವನೂ, ಎರಡು ಭುಜಗಳುಳ್ಳವನೂ, ಕೈಯಲ್ಲಿ ಪಾಶವನ್ನು ಧರಿಸಿರುವವನೂ, ಸುಂದರವಾದ ಅವಯವವುಳ್ಳವನೂ, ಆರಾಧಕರಿಗೆ ವರ ಕೊಡತಕ್ಕವನೂ ಆಗಿರುವನೆಂದು ಧ್ಯಾನಿಸಬೇಕು.

೧೧೦. ಬಳಿಕ ಪಶ್ಚಿಮದಿಕ್ಕಿನ ಎಸಳಿನಲ್ಲಿ 'ವರುಣಸ್ಯ' ಎಂಬ ಮಂತ್ರಪೂರ್ವಕವಾಗಿ ಆವಾಹನಮಾಡಿ ಬಿಳಿಯಗಂಧ ಪುಷ್ಪ ಧೂಪಾದಿಗಳಿಂದ ಪೂಜಿಸಿ ಧ್ವಜಗಳು ಪತಾಕೆಗಳ ಸಮೇತ ಬಲಿಸಮರ್ಪಣೆ ಮಾಡಬೇಕು.

೧೧೧. ವಾಯುದೇವನನ್ನು ಆನೆಯ ಮೈಬಣ್ಣಕ್ಕೆ ಸಮನಾದ ಬಣ್ಣವುಳ್ಳವನೂ, ಜಿಂಕೆಯನ್ನೇ ವಾಹನವಾಗಿ ಉಳ್ಳವನೂ, ಎರಡುಭುಜಗಳು ಎರಡುಕಣ್ಣು ಉಳ್ಳವನೂ,

೧೧೨. ನೀಲವರ್ಣದ ವಸ್ತ್ರವನ್ನು ಹೊದೆದಿರುವವನೂ, ನೀಲವರ್ಣದ ಧ್ವಜವನ್ನುಳ್ಳವನೂ, ಸದಾ ಮೇಘಗಳ ಸಮೂಹದಿಂದ ಆವರಿಸಲ್ಪಟ್ಟವನೂ ಆದವನೆಂದು ಧ್ಯಾನಿಸಿ ವಾಯುವ್ಯದಿಕ್ಕಿನ ಎಸಳಿನಲ್ಲಿ ಸ್ಥಾಪಿಸಬೇಕು.

೧೧೩. ಬಳಿಕ ನೀಲವರ್ಣದವಸ್ತ್ರ, ಗಂಧ, ನೀಲಪುಷ್ಪಗಳು, ಧೂಪ ಮುಂತಾದುವುಗಳಿಂದ ಪೂಜಿಸಿ ನೀಲಪತಾಕಾಸಮೇತವಾಗಿ ಪಾಯಸವನ್ನು ಬಲಿಸಮರ್ಪಣೆ ಮಾಡಬೇಕು.

**ಧ್ಯಾಯೇದ್ದ್ವಿನೇತ್ರಂ ದ್ವಿಭುಜಂ ಧನೇಶಂ ಪೀತಾಂಬರಂ ವೈ ನರವಾಹನಂ ಚ ।**
**ಗದಾಧರಂ ಭಕ್ತವರಪ್ರದಂ ಚ ಆವಾಹಯೇದುತ್ತರಪದ್ಮಪತ್ರೇ ॥ ೧೧೪ ॥**

**ಗಂಧಚಂದನವಸ್ತ್ರೈಶ್ಚ ಪೀತಮಾಲ್ಯಾನುಲೇಪನೈಃ ॥ ೧೧೫ ॥**

**ಧೂಪೈಃ ಪೀತಪತಾಕಾಭಿರ್ಬಲಿಭಿಃ ಪಾಯಸೈರಪಿ ॥ ೧೧೬ ॥**

**ಸ್ನಿಗ್ಧಕರ್ಪೂರಸಂಕಾಶಂ ತುಷಾರಕಿರಣಪ್ರಭಂ ।**
**ತ್ರಿಶೂಲತುಂಬುರುಧರಂ ತಥಾಭಯವರಪ್ರದಂ ॥ ೧೧೭ ॥**

**ಉತ್ತುಂಗವೃಷಭಾರೂಢಂ ತ್ರಿನೇತ್ರಂ ಭಸ್ಮಭೂಷಿತಂ ।**
**ಕಪಾಲಮಾಲಿನಂ ತದ್ವತ್ಖಂಡೇಂದುಕೃತಶೇಖರಂ ॥ ೧೧೮ ॥**

**ಏವಂ ಧ್ಯಾತ್ವಾ ಮಹೇಶಾನಂ ಸ್ಥಾಪಯೇದೀಶದಿಗ್ದಲೇ ॥ ೧೧೯ ॥**

---

೧೧೪. ಕುಬೇರನನ್ನು ಎರಡುಕಣ್ಣು, ಎರಡುಭುಜಗಳು ಉಳ್ಳವನೂ, ಧನಾಧಿಪತಿಯೆನಿಸಿದವನೂ, ಹಳದಿ (ಕುಂಕುಮ) ವಸ್ತ್ರವನ್ನು ಧರಿಸಿರುವವನೂ, ಮನುಷ್ಯನನ್ನೇ ವಾಹನವಾಗಿ ಉಳ್ಳವನೂ, ಭಕ್ತರಿಗೆ ವರವನ್ನು ಕೊಡತಕ್ಕವನೂ ಆಗಿರುವನೆಂದು ಧ್ಯಾನಿಸಿ ಆ ಪದ್ಮದ ಉತ್ತರದಿಕ್ಕಿನ ಎಸಳಿನಲ್ಲಿ ಆವಾಹನೆಮಾಡಬೇಕು.

೧೧೫-೧೧೬. ಬಳಿಕ ಚಂದನಗಂಧದ ಅನುಲೇಪನಗಳು, ವಸ್ತ್ರ, ಹಳದಿಯ ಬಣ್ಣದ ಹೂ, ಧೂಪ, ಮೊದಲಾದುವುಗಳಿಂದ ಆ ಧನಾಧಿಪನನ್ನು ಪೂಜಿಸಿ, ಹಳದಿಯ ಬಣ್ಣದ ಪತಾಕಾಸಮೇತವಾಗಿ ಪಾಯಸವನ್ನು ಬಲಿಸಮರ್ಪಣಮಾಡಬೇಕು

೧೧೭-೧೨೦. ಈಶಾನನನ್ನು ಮಿಂಚುವ ಕರ್ಪೂರದಂತೆ ಕಾಂತಿಯುಳ್ಳವನೂ, ಹಿಮಕರ (ಚಂದ್ರ) ನಂತೆ ಪ್ರಭಾಯುಕ್ತನೂ, ಕೈಗಳಲ್ಲಿ ತ್ರಿಶೂಲ ಡಮರುಗ ಇವನ್ನು ಧರಿಸಿದವನೂ, ಅಭಯಹಸ್ತ ವರದಹಸ್ತಗಳುಳ್ಳವನೂ, ಶ್ರೇಷ್ಠವಾದ ವೃಷಭವನ್ನು ವಾಹನವಾಗಿ ಉಳ್ಳವನೂ, ಮೂರುಕಣ್ಣುಗಳುಳ್ಳವನೂ, ಸರ್ವಾಂಗದಲ್ಲೂ ವಿಭೂತಿಯನ್ನು ಲೇಪಿಸಿಕೊಂಡಿರುವವನೂ, ರುಂಡಮಾಲೆಯನ್ನು ಧರಿಸಿರುವವನೂ, ಬಾಲಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವವನೂ, ಆದವನೆಂದು ಧ್ಯಾನಿಸಬೇಕು ಛಂದಸ್ಸು ಋಷಿನಾಮಸಹಿತ 'ತಮೀಶಾನಂ' ಎಂಬ ಮಂತ್ರಪೂರ್ವಕವಾಗಿ ಆ ಪದ್ಮದ

ಪೂಜಯೇತ್ಪರಯಾ ಭಕ್ತ್ಯಾ ಭಕ್ಷ್ಯಭೋಜ್ಯೈರನೇಕಶಃ ॥ ೧೨೦ ॥

ಸಿತಧ್ವಜಪತಾಕಾಭಿರ್ಬಲಿಭಿಃ ಪಾಯಸಾದಿಭಿಃ ।
ತಮೀಶಾನಇತಿಮಂತ್ರೇಣ ಋಷಿಂ ಛಂದಃ ಸಮರ್ಪಯೇತ್ ॥ ೧೨೧ ॥

ಬ್ರಹ್ಮಾಣಂ ರಕ್ತಗೌರಾಂಗಂ ಶೋಣಪದ್ಮಸಮಪ್ರಭಂ ।
ರಾಜೀವಲೋಚನಂ ತದ್ವತ್ಪದ್ಮಗರ್ಭಸಮಪ್ರಭಂ ॥ ೧೨೨ ॥

ಪದ್ಮಾಸನಸ್ಥಿತಂ ತದ್ವಚ್ಛ್ವೇತವಸ್ತ್ರಂ ಚತುರ್ಭುಜಂ ।
ಚತುರ್ಮುಖಂ ಸುರಶ್ರೇಷ್ಠಂ ಮೇಘಗಂಭೀರನಿಸ್ವನಂ ॥ ೧೨೩ ॥

ರಾಜಹಂಸಸಮಾಯುಕ್ತಂ ವಿಮಾನವರಸಂಸ್ಥಿತಂ ।
ಸ್ರುಕ್‌ಸ್ರುವೌ ದಕ್ಷಿಣೇ ಹಸ್ತೇ ವಾಮೇ ದಂಡಂ ಕಮಂಡಲುಂ ॥ ೧೨೪ ॥

ಕುರ್ವಾಣಮಿವ ಲೋಕಾಂಸ್ತ್ರೀನ್ ಸಿದ್ಧಗಂಧರ್ವಸೇವಿತಂ ।
ಆಜ್ಯಸ್ಥಾಲೀಂ ತಥೈವಾಗ್ರೇ ಕುಶಾಂಶ್ಚ ಸಮಿಧಂ ತಥಾ ॥ ೧೨೫ ॥

---

ಈಶಾನ್ಯದಿಕ್ಕಿನ ಎಸಳಿನಲ್ಲಿ ಈಶಾನನನ್ನು ಆವಾಹಿಸಿ ಪೂಜಾದ್ರವ್ಯಗಳಿಂದಲೂ, ಅನೇಕ ಭಕ್ಷ್ಯಭೋಜ್ಯಗಳ ನಿವೇದನದಿಂದಲೂ ಪರಮಭಕ್ತಿಯಿಂದ ಪೂಜಿಸಬೇಕು.

೧೨೧. ಬಳಿಕ ಬಿಳಿಯಬಣ್ಣದ ಪತಾಕಾಸಮೇತವಾಗಿ ಪಾಯಸಾದಿಗಳ ಬಲಿಯನ್ನು ಸಮರ್ಪಣೆಮಾಡಬೇಕು.

೧೨೨-೧೨೪. ಬ್ರಹ್ಮನನ್ನು ಕೆಂಪು ಬಿಳುಪು ಮಿಶ್ರವಾದ ಬಣ್ಣವುಳ್ಳವನೂ, ಕೆಂದಾವರೆಯಂತೆ ಕಾಂತಿಯುಳ್ಳವನೂ, ಕಮಲದಂತೆ ಕಣ್ಣುಳ್ಳವನೂ, ಪದ್ಮಪುಷ್ಪದ ಒಳಭಾಗದ ಬಣ್ಣದಂತಹ ಬಣ್ಣದಿಂದ ಶೋಭಿಸುವವನೂ, ಕಮಲದಮೇಲೆ ಕುಳಿತಿರುವವನೂ ಬಿಳಿಯವಸ್ತ್ರವನ್ನು ಧರಿಸಿರುವವನೂ, ನಾಲ್ಕುಭುಜಗಳು ನಾಲ್ಕುಮುಖಗಳು ಉಳ್ಳವನೂ, ದೇವತೆಗಳಲ್ಲಿ ಶ್ರೇಷ್ಠನೂ, ಗುಡುಗಿನಂತೆ ಗಂಭೀರವಾದ ಧ್ವನಿಯುಳ್ಳವನೂ, ರಾಜಹಂಸಪಕ್ಷಿಸಮೇತನೂ, ಶ್ರೇಷ್ಠವಾದ ವಿಮಾನದಲ್ಲಿ ನೆಲಸಿರುವವನೂ, ಬಲಗೈಯಲ್ಲಿ ಸ್ರುಕ್‌ಸ್ರುವಗಳು ಎಡಗೈಯಲ್ಲಿ ದಂಡ ಕಮಂಡುಲು ಇವುಗಳನ್ನು ಧರಿಸಿರುವವನೂ,

೧೨೫. ತ್ರಿಲೋಕನಿರ್ಮಾಣಕರ್ತನೂ, ಸಿದ್ಧರು, ಗಂಧರ್ವರು, ಇವರುಗಳಿಂದ ಸೇವಿಸಲ್ಪಡುತ್ತಿರುವವನೂ, ತುಪ್ಪದಪಾತ್ರೆ, ದರ್ಭೆ, ಸಮಿತ್ತು ಇವನ್ನು ಮುಂಭಾಗದಲ್ಲಿಟ್ಟುಕೊಂಡಿರುವವನೂ,

**ವಾಮಪಾರ್ಶ್ವೇ ತು ಸಾವಿತ್ರೀಂ ದಕ್ಷಿಣೇ ತು ಸರಸ್ವತೀಂ ।**
**ಆಬ್ರಹ್ಮನ್ನಿತಿ ಮಂತ್ರೇಣ ಸ್ಥಾಪಯೇತ್ಪೂರ್ವದಿಗ್ದಲೇ ॥ ೧೨೬ ॥**

**ನಾನಾಭಕ್ಷ್ಯೋಪಚಾರೈಶ್ಚ ಪೂಜಯೇದ್ಗಂಧಚಂದನೈಃ ।**
**ಧೂಪೈಃ ಶ್ವೇತಪತಾಕಾಭಿರ್ಬಲಿಭಿಶ್ಚಾಜ್ಯಪಾಯಸೈಃ ॥ ೧೨೭ ॥**

**ಅನಂತಂ ಶುಕ್ಲವರ್ಣಾಭಂ ಪೀತವಸ್ತ್ರಂ ಚತುರ್ಭುಜಂ ।**
**ಶಂಖಚಕ್ರಗದಾಪದ್ಮಧಾರಿಣಂ ಜಗದೀಶ್ವರಂ ॥ ೧೨೮ ॥**

**ಆಧಾರಭೂತಂ ಜಗತಾಂ ಸ್ವರ್ಣಯಜ್ಞೋಪವೀತಿನಂ ।**
**ನಾನಾಭರಣಸಂಪನ್ನಂ ಫಣಾಶತಸಮನ್ವಿತಂ ॥ ೧೨೯ ॥**

**ಓಂನಮೋಸ್ತ್ವಿತಿ ಮಂತ್ರೇಣ ಸ್ಥಾಪಯೇದ್ವರುಣಾಂತರೇ ।**
**ಪೂಜಯೇದ್ಭಕ್ಷ್ಯಭೋಜ್ಯೈಶ್ಚ ದೀಪಗಂಧಾನುಲೇಪನೈಃ ॥ ೧೩೦ ॥**

---

೧೨೬. ಎಡಗಡೆ ಸಾವಿತ್ರಿ, ಬಲಗಡೆ ಸರಸ್ವತಿ ಇವರುಗಳಿಂದ ಕೂಡಿದವನೂ ಆಗಿರುವನೆಂದು ಧ್ಯಾನಿಸಿ ಆ ಪದ್ಮದ ಪೂರ್ವದಿಕ್ಕಿನ ಎಸಳಿನಲ್ಲಿ 'ಆಬ್ರಹ್ಮ' ಎಂಬ ಮಂತ್ರಪೂರ್ವಕವಾಗಿ ಬ್ರಹ್ಮನನ್ನು ಆವಾಹನೆಮಾಡಬೇಕು.

೧೨೭. ಬಳಿಕ ಚಂದನಗಂಧ, ಪುಷ್ಪ ಮೊದಲಾದ ಉಪಕರಣಗಳಿಂದಲೂ, ಧೂಪದಿಂದಲೂ, ನಾನಾಭಕ್ಷ್ಯಗಳ ನಿವೇದನದಿಂದಲೂ ಪೂಜಿಸಿ ತುಪ್ಪಮಿಶ್ರಿತವಾದ ಪಾಯಸವನ್ನು ಬಿಳಿಯ ಪತಾಕಾಸಮೇತವಾಗಿ ಬಲಿಸಮರ್ಪಣೆ ಮಾಡಬೇಕು.

೧೨೮. ಸರ್ಪರಾಜನಾದ ಅನಂತನನ್ನು ಬಿಳಿಯಬಣ್ಣದ ಕಾಂತಿಯುಳ್ಳವನೂ, ಹಳದಿಯಬಣ್ಣದ ವಸ್ತ್ರವನ್ನು ಧರಿಸಿದವನೂ, ನಾಲ್ಕುಭುಜಗಳುಳ್ಳವನಾಗಿ ಅವುಗಳಲ್ಲಿ ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿದವನೂ, ಲೋಕಗಳಿಗೆಲ್ಲಾ ಸ್ವಾಮಿಯೂ,

೧೨೯. ಜಗತ್ತುಗಳಿಗೆ ಆಧಾರನಾದವನೂ, ಸುವರ್ಣಯಜ್ಞೋಪವೀತವನ್ನು ಧರಿಸಿದವನೂ, ಅನೇಕ ಆಭರಣಗಳಿಂದ ಕೂಡಿದವನೂ, ನೂರುಹೆಡೆಗಳಿಂದ ಪರಿಶೋಭಿತನೂ ಆದವನೆಂದು ಧ್ಯಾನಿಸಬೇಕು.

೧೩೦. 'ಓಂ ನಮೋಸ್ತು ಸರ್ಪೇಭ್ಯಃ' ಎಂಬ ಮಂತ್ರಪೂರ್ವಕವಾಗಿ ವರುಣ ಕಲಶದಲ್ಲಿ ಅನಂತನನ್ನು ಸ್ಥಾಪಿಸಬೇಕು. ಅನಂತರ ಗಂಧ, ಪುಷ್ಪ, ಧೂಪ, ದೀಪ, ಭಕ್ಷ್ಯ ಭೋಜ್ಯನೈವೇದ್ಯ ಮುಂತಾದುವುಗಳನ್ನು ಸಮರ್ಪಿಸಿ ಪೂಜಿಸಬೇಕು.

ಧೂಪ್ಯೈಃ ಶ್ವೇತಪತಾಕಾಭಿರ್ಬಲಿಭಿಶ್ಚೈವ ಸಿದ್ಧಿತೈಃ ।
ತತೋ ಮಂಡಲಪೂರ್ವೇ ತು ಬ್ರಹ್ಮಾಣಂ ಪೀತವಾಸಸಂ ॥ ೧೩೧ ॥

ಚತುರ್ಭುಜಂ ಚತುರ್ವಕ್ತ್ರಂ ಸ್ರುವಹಸ್ತಂ ವರಪ್ರದಂ ।
ಬಿಭ್ರತಂ ಚ ಶ್ರುತಂ ತದ್ವತ್ತಥಾ ದಂಡಕಮಂಡಲೂ ॥ ೧೩೨ ॥

ಆಬ್ರಹ್ಮನ್ನಿತಿಮಂತ್ರೇಣ ಪೂಜಯೇದ್ಗಂಧಚಂದನೈಃ ।
ದಕ್ಷಿಣೇ ತ್ರ್ಯಂಬಕಂ ಧ್ಯಾಯೇಚ್ಛೂಲಖಟ್ವಾಂಗಧಾರಿಣಂ ॥ ೧೩೩ ॥

ವರದಂ ಡಮರುಕಧರಂ ನಾಗಯಜ್ಞೋಪವೀತಿನಂ ।
ನಿಬದ್ಧಜೂಟಚಂದ್ರಾರ್ಧಂ ಶುದ್ಧಸ್ಫಟಿಕಸನ್ನಿಭಂ ॥ ೧೩೪ ॥

ಕಪಾಲಮಾಲಿನಂ ದೇವಂ ಭುಜಂಗಾಭರಣಾನ್ವಿತಂ ।
ತ್ರಿನೇತ್ರಂ ಕುಂದಸಂಕಾಶಂ ಭೂತಪ್ರೇತಗಣೈರ್ವೃತಂ ॥ ೧೩೫ ॥

---

೧೩೧. ನಿವೇದಿಸಿದ ವಸ್ತುಗಳನ್ನು ಬಿಳಿಯಬಣ್ಣದ ಪತಾಕಾಸಮೇತವಾಗಿ ಅನಂತನ ಪ್ರೀತ್ಯರ್ಥವಾಗಿ ಬಲಿಸಮರ್ಪಣೆ ಮಾಡಬೇಕು. ಈ ಮುಂದೆ ಬ್ರಹ್ಮನ ರೂಪಾದಿಗಳನ್ನು ಪ್ರಕಾರಾಂತರ ಹೇಳಲಾಗಿದೆ

೧೩೨. ಬ್ರಹ್ಮನು ಹಳದಿಬಣ್ಣದ ವಸ್ತ್ರವನ್ನು ಧರಿಸಿದವನೂ, ನಾಲ್ಕುಭುಜಗಳು, ನಾಲ್ಕುಮುಖಗಳು ಉಳ್ಳವನೂ, ದಂಡ, ಕಮಂಡಲು, ಸ್ರುವೆ, ವರದಮುದ್ರೆ ಇವು ಯುಕ್ತವಾದ ನಾಲ್ಕುಕೈಗಳುಳ್ಳವನೂ, ವೇದಗಳನ್ನು ಧರಿಸಿದವನೂ ಆಗಿರುವನು.

೧೩೩. ಈ ಪ್ರಕಾರ ಬ್ರಹ್ಮನನ್ನು ಧ್ಯಾನಿಸಿ ಅನಂತರ ಮಂಡಲದ ಪೂರ್ವಭಾಗದಲ್ಲಿ 'ಆಬ್ರಹ್ಮನ್' ಎಂಬ ಮಂತ್ರಪೂರ್ವಕವಾಗಿ ಆವಾಹನೆಮಾಡಿ ಗಂಧ ಚಂದನ ಪುಷ್ಪಾದಿಗಳಿಂದ ಪೂಜಿಸಬೇಕು.

೧೩೪. ಬಳಿಕ ತ್ರ್ಯಂಬಕನನ್ನು ತ್ರಿಶೂಲ, ಖಟ್ವಾಂಗ, ಡಮರುಕ, ವರದ ಮುದ್ರೆ ಇವುಗಳಿಂದ ಕೂಡಿದ ಕೈಗಳುಳ್ಳವನೂ, ಸರ್ಪವನ್ನು ಯಜ್ಞೋಪವೀತವಾಗಿ ಧರಿಸಿರುವವನೂ, ಜಟಾಬದ್ಧನಾಗಿ ಚಂದ್ರಲೇಖೆಯನ್ನು ಧರಿಸಿದವನೂ, ಸ್ವಚ್ಛವಾದ ಸ್ಫಟಿಕದಂತೆ ಕಾಂತಿಯುಳ್ಳವನೂ,

೧೩೫. ಮತ್ತು ರುಂಡಮಾಲೆ ನಾನಾ ಆಭರಣಗಳು ಇವನ್ನು ಧರಿಸಿದವನೂ, ಮಲ್ಲೆಹೂವಿನಂತೆ ಮೈಬಣ್ಣವುಳ್ಳವನೂ, ಭೂತಪ್ರೇತಗಣಗಳಿಂದ ಕೂಡಿದವನೂ, ತ್ರಿನೇತ್ರನೂ ಆಗಿರುವನೆಂದು ಧ್ಯಾನಿಸಿ

**ತ್ರ್ಯಂಬಕಂ ಚೇತಿ ಮಂತ್ರೇಣ ಪೂಜಯೇನ್ಮಧುಪಾಯಸೈಃ ।**
**ಅತಸೀಪುಷ್ಪಸಂಕಾಶಂ ಹಾರಕೇಯೂರಭೂಷಿತಂ ॥ ೧೩೬ ॥**

**ನಾನಾಭರಣಸಂಪನ್ನಂ ಪೀತವಸ್ತ್ರಂ ಚತುರ್ಭುಜಂ ।**
**ದಕ್ಷಿಣೇ ಚ ಗದಾಂ ಚಕ್ರಂ ವಾಮೇ ಶಂಖಂ ಸಪದ್ಮಕಂ ॥ ೧೩೭ ॥**

**ಶ್ರಿಯಾ ದಕ್ಷಿಣತೋ ವಾಮೇ ಸರಸ್ವತ್ಯಾ ಸಮನ್ವಿತಂ ।**
**ತದ್ವಿಷ್ಣೋರಿತಿ ಮಂತ್ರೇಣ ಸ್ಥಾಪಯೇತ್ಪಶ್ಚಿಮೇ ತತಃ ॥ ೧೩೮ ॥**

**ಪೂಜಯೇದ್ಗಂಧಪುಷ್ಪಾದ್ಯೈಃ ಪಾಯಸೇನ ಘೃತೇನ ಚ ।**
**ಗಣೇಶಂ ತು ಚತುರ್ಬಾಹುಂ ವ್ಯಾಲಯಜ್ಞೋಪವೀತಿನಂ ॥ ೧೩೯ ॥**

**ಗಜೇಂದ್ರವದನಂ ದೇವಂ ಶ್ವೇತವಸ್ತ್ರಂ ಚತುರ್ಭುಜಂ ।**
**ಪರಶುಂ ಲಗುಡಂ ವಾಮೇ ದಕ್ಷಿಣೇ ದಂಡಮುತ್ಪಲಂ ॥ ೧೪೦ ॥**

---

೧೩೬. ಮಂಡಲದ ದಕ್ಷಿಣದಿಗ್ಭಾಗದಲ್ಲಿ 'ತ್ರ್ಯಂಬಕ' ಎಂಬ ಮಂತ್ರಪೂರ್ವಕವಾಗಿಆವಾಹನಮಾಡಿ ಪೂಜಾದ್ರವ್ಯಗಳಿಂದ ಪೂಜಿಸಿ, ಜೇನುತುಪ್ಪಮಿಶ್ರವಾದ ಪಾಯಸವನ್ನು ಬಲಿಸಮರ್ಪಣೆ ಮಾಡಬೇಕು.

೧೩೭. ಮಹಾವಿಷ್ಣುವನ್ನು ಅಗಸೆಯಹೂವಿನಂತೆ ಮೈಬಣ್ಣವುಳ್ಳವನೂ, ಹಾರ, ಭುಜಕೀರ್ತಿ ಮುಂತಾದ ಆಭರಣಗಳಿಂದ ಶೃಂಗರಿಸಲ್ಪಟ್ಟವನೂ, ಹಳದಿಯ ವಸ್ತ್ರವನ್ನು ಉಟ್ಟಿರುವವನೂ, ಚತುರ್ಭುಜ ಸಮನ್ವಿತನಾಗಿ ಬಲಭಾಗದ ಎರಡು ಕೈಗಳಲ್ಲಿ ಗದೆ, ಚಕ್ರ ಎಡಗಡೆಯ ಎರಡುಕೈಗಳಲ್ಲಿ ಶಂಖ ಪದ್ಮ ಇವುಗಳನ್ನು ಧರಿಸಿರುವವನೂ,

೧೩೮. ಬಲಗಡೆ ಲಕ್ಷ್ಮೀ, ಎಡಗಡೆ ಸರಸ್ವತಿ ಇವರಿಂದ ಯುಕ್ತನೂ, ಆಗಿರುವನೆಂದು ಧ್ಯಾನಿಸಿ ಮಂಡಲದ ಪಶ್ಚಿಮದಿಕ್ಕಿನಲ್ಲಿ 'ತದ್ವಿಷ್ಣೋ' ಎಂಬ ಮಂತ್ರವನ್ನು ಹೇಳಿ ಆವಾಹನೆಮಾಡಬೇಕು.

೧೩೯. ಹೀಗೆ ಆವಾಹಿಸಿ ಗಂಧ, ಪುಷ್ಪ, ಮೊದಲಾದುವುಗಳಿಂದ ಪೂಜಿಸಿ ತುಪ್ಪಸಹಿತವಾದ ಪಾಯಸವನ್ನು ಬಲಿಸಮರ್ಪಣೆ ಮಾಡಬೇಕು.

೧೪೦. ಮಹಾಗಣಪತಿಯನ್ನು ನಾಲ್ಕುಭುಜಗಳುಳ್ಳವನೂ, ಎಡಭಾಗದ ಕೈಗಳಲ್ಲಿ ಪರಶು, ಲಗುಡ, ಬಲಭಾಗದ ಕೈಗಳಲ್ಲಿ ದಂಡ, ಉತ್ಪಲ, ಇವನ್ನು ಹಿಡಿದಿ

ಮೂಷಕಸ್ಥಂ ಮಹಾಕಾಯಂ ಶಂಖಕುಂದೇಂದುಸಪ್ರಭಂ ।
ಯುಕ್ತಂ ಬುದ್ಧಿಕುಬುದ್ಧಿಭ್ಯಾಮೇಕದಂತಂ ಭಯಾಪಹಂ ॥ ೧೪೧ ॥

ನಾನಾಭರಣಸಂಪನ್ನಂ ಸರ್ವಾಪತ್ತಿವಿನಾಶನಂ ।
ಗಣಾನಾಂ ತ್ವೇತಿ ಮಂತ್ರೇಣ ವಿನ್ಯಸೇದುತ್ತರೇ ಧ್ರುವಂ ॥ ೧೪೨ ॥

ಉತ್ತಪ್ತಜಾಂಬೂನದಹೇಮಸನ್ನಿಭಾಂ ।
ಲಕ್ಷ್ಮೀಂ ಸರೋಜಾಸನಸಂಸ್ಥಿತಾಂ ಶುಭಾಂ ॥
ವಾಮೇ ಸರೋಜಂ ದಧತೀಂ ತಥೈವ ।
ಹಸ್ತೇ ಚ ದಕ್ಷೇ ಧೃತಚಾಮರಾಂ ಚ ॥ ೧೪೩ ॥

ಶ್ರೀಶ್ಚ ತೇತಿ ಚ ಮಂತ್ರೇಣ ಐಶಾನ್ಯಾಂ ಮಂಡಲಾದ್ಬಹಿಃ ।
ಸ್ಥಾಪಯೇತ್ಪೂಜಯೇದ್ಭಕ್ತ್ಯಾ ಸಿತಚಂದನಪಂಕಜೈಃ ॥ ೧೪೪ ॥

---

ರುವವನೂ, ಸರ್ಪವನ್ನು ಜನಿವಾರವಾಗಿ ಧರಿಸಿರುವವನೂ, ಆನೆಯ ಮುಖವುಳ್ಳವನೂ, ಬಿಳಿಯವಸ್ತ್ರವನ್ನು ಧರಿಸಿದವನೂ, ಇಲಿಯನ್ನು ವಾಹನವಾಗಿ ಉಳ್ಳವನೂ,

೧೪೧. ಶಂಖ, ಮಲ್ಲಿಯಹೂ, ಚಂದ್ರ, ಇವರ ಬಣ್ಣದಂತೆ ಕಾಂತಿಯುಕ್ತವಾದ ದೊಡ್ಡದೇಹವುಳ್ಳವನೂ, ಒಂದೇ ದಂತವುಳ್ಳವನೂ, ಬುದ್ಧಿ, ಕುಬುದ್ಧಿಗಳೆರಡರಿಂದಲೂ ಯುಕ್ತನಾದವನೂ, ವಿಘ್ನಭಯವನ್ನು ನಿವಾರಿಸತಕ್ಕವನೂ

೧೪೨. ಅನೇಕ ಆಭರಣಗಳನ್ನು ಧರಿಸಿರುವವನೂ, ಭಕ್ತರ ಸಮಸ್ತ ಕಷ್ಟಗಳನ್ನು ಪರಿಹರಿಸತಕ್ಕ ಸ್ವಾಮಿಯೂ ಆಗಿರುವನೆಂದು ಧ್ಯಾನಿಸಿ ಮಂಡಲದಉತ್ತರದಿಕ್ಕಿನಲ್ಲಿ 'ಗಣಾನಾಂತ್ವಾ' ಎಂಬ ಮಂತ್ರಪೂರ್ವಕವಾಗಿ ಆವಾಹನೆಮಾಡಿ ಪೂಜಿಸಬೇಕು.

೧೪೩. ಮಹಾಲಕ್ಷ್ಮಿಯನ್ನು ಪುಟಕ್ಕೆಹಾಕಿ ಭಂಗಾರದಂತೆ ಮೈಬಣ್ಣವುಳ್ಳವಳು, ಕಮಲಪುಷ್ಪದ ಮೇಲೆ ಕುಳಿತಿರುವವಳು, ಮಂಗಳಕರಳು, ಎಡಗೈಯಲ್ಲಿ ಪದ್ಮವನ್ನೂ ಬಲಗೈಯಲ್ಲಿ ಚಾಮರವನ್ನೂ ಧರಿಸಿರುವವಳು,

೧೪೪. ಹೀಗೆಂಬುದಾಗಿ ಧ್ಯಾನಿಸಿ ಮಂಡಲದ ಹೊರಗಡೆ ಈಶಾನ್ಯದಿಕ್ಕಿನಲ್ಲಿ 'ಶ್ರಿಶ್ಚತೇ' ಎಂಬ ಮಂತ್ರಪೂರ್ವಕವಾಗಿ ಸ್ಥಾಪಿಸಿ ಭಕ್ತಿಯುಕ್ತನಾಗಿ ಶ್ರೀಗಂಧ, ಪುಷ್ಪ, ಕಮಲ ಮುಂತಾದುವುಗಳಿಂದ ಪೂಜಿಸಬೇಕು.

ಮೋದಕಂ ಪರಮಾನ್ನಂ ಚ ಯವಕ್ಷೀರಂ ನಿವೇದಯೇತ್ ॥ ೧೪೫ ॥

ತತೋ ದೇವೀಮಂಬಿಕಾಂ ದಿವ್ಯರೂಪಾಂ ।
ಬ್ರಹ್ಮೇಂದ್ರಾದ್ಯೈಃ ಸ್ತೂಯಮಾನಾಂ ತ್ರಿಣೇತ್ರಾಂ ॥
ಸಿಂಹೇಶಸ್ಥಾಂ ತಪ್ತಜಾಂಬೂನದಾಭಾಂ ।
ಚಂದ್ರಾರ್ಧೇನಾಬದ್ಧಮೌಲಿಂ ಜಟಾಭಿಃ ॥ ೧೪೬ ॥

ದಿವ್ಯೈರ್ವಸ್ತ್ರೈರ್ಬಾಹುಭಿಃ ಸಾಗ್ರಲಂಬೈಃ ।
ದಿವ್ಯೈರ್ಮಾಲ್ಯೈರ್ಭೂಷಣೈಃ ಸ್ವೈರುಪೇತಾಂ ॥
ಬ್ರಹ್ಮೇಂದ್ರಾದ್ಯೈರ್ದುರ್ಜಯಾಂ ಮಾಹಿಷಾಸ್ಯಂ ।
ತೀಕ್ಷ್ಣೈರಸ್ತ್ರೈರ್ದಾನವಂ ಮರ್ದಯಂತೀಂ ॥ ೧೪೭ ॥

ಶೂಲಂ ತೀಕ್ಷ್ಣಂ ಬಾಣಶಕ್ತೀ ಚ ತೀಕ್ಷ್ಣೇ ।
ಖಡ್ಗಂ ತೀಕ್ಷ್ಣಂ ಬಿಭ್ರತೀಂ ದಕ್ಷಿಣೇನ ॥
ಚಾಪಂ ಪಾಶಂ ಖೇಟಕಂ ಚಾಂಕುಶಂ ಚ ।
ಘಂಟಾಂ ವಾಮೇ ಬಿಭ್ರತೀಂ ವೈ ಕುಠಾರಂ ॥ ೧೪೮ ॥

---

೧೪೫. ಅನಂತರ ಮೋದಕ, ಪಾಯಸ, ಯವಕ್ಷೀರ ಇವನ್ನು ನಿವೇದನ ಮಾಡಬೇಕು.

೧೪೬. ಅಂಬಿಕೆ (ದುರ್ಗಿ) ಯನ್ನು ದಿವ್ಯರೂಪವುಳ್ಳವಳು, ಬ್ರಹ್ಮ, ಇಂದ್ರ ಮುಂತಾದವರಿಂದ ಹೊಗಳಿಸಿಕೊಳ್ಳತಕ್ಕವಳು, ಮೂರುಕಣ್ಣುಳ್ಳವಳು, ಸಿಂಹವಾಹನೆ, ಪುಟಹಾಕಿದ ಬಂಗಾರದಂತೆ ದೇಹಕಾಂತಿಯುಳ್ಳವಳು, ಕಟ್ಟಿದ ಜಟೆಗಳಲ್ಲಿ ಅರ್ಧ ಚಂದ್ರವನ್ನು ಧರಿಸಿದವಳು ಎಂದೂ

೧೪೭. ಶ್ರೇಷ್ಠವಾದ ವಸ್ತ್ರಗಳನ್ನು ಧರಿಸಿದವಳು, ನೀಳವಾದ ಬಾಹುಗಳುಳ್ಳವಳು, ಸ್ವಕೀಯವೂ ದಿವ್ಯವೂ ಆದ ಒಡವೆ ಹಾರ ಇವುಗಳಿಂದ ಕೂಡಿದವಳು, ಬ್ರಹ್ಮ ಇಂದ್ರ ಇವರಿಗೂ ಜಯಿಸಲು ಅಸಾಧ್ಯಳು, ಮಹಿಷಾಕಾರವಾದ ಮುಖವುಳ್ಳ ಮಹಿಷಾಸುರನನ್ನು ತೀಕ್ಷ್ಣವಾದ ಬಾಣಗಳಿಂದ ಧ್ವಂಸಮಾಡಿದವಳು ಎಂದೂ

೧೪೮. ಬಲಗಡೆಯ ಹಲವು ಕೈಗಳಲ್ಲಿ ತೀಕ್ಷ್ಣವಾದ ಶೂಲ, ತೀಕ್ಷ್ಣವಾದ ಬಾಣ, ತೀಕ್ಷ್ಣವಾದ ಶಕ್ತ್ಯಾಯುಧ, ತೀಕ್ಷ್ಣಖಡ್ಗ, ಇವುಗಳನ್ನೂ, ಎಡಭಾಗದ

ಶೀರ್ಷಚ್ಛೇದಾದರ್ಧಜಾತಂ ಕಬಂಧಂ ।
ಖಡ್ಗಂ ತೀಕ್ಷ್ಣಂ ಬಿಭ್ರತೀಂ ದೈತ್ಯರಾಜಂ ॥
ನಾಗೈಃ ಪಾಶೈರ್ವೇಷ್ಟಯಿತ್ವಾ ಸಮಂತಾತ್ ।
ಶೂಲೇನೈನಂ ನಿಘ್ನತೀಂ ದೇಹಮಧ್ಯೇ ॥ ೧೪೯ ॥

ಸೇಂದ್ರೈರ್ದೇವೈಃ ಸ್ತೂಯಮಾನಾಂ ಸುವೇಣೀಂ ।
ಗಂಧರ್ವಾದ್ಯೈಃ ಸಿದ್ಧಸಂಘೈಶ್ಚ ಸೇವ್ಯಾಂ ॥
ನಾನಾವಸ್ತ್ರೈರ್ಭೂಷಣೈರ್ದೀಪ್ಯಮಾನಾಂ ।
ಧ್ಯಾಯೇದ್ದೇವೀಮಂಬಿಕಾಮುಜ್ಜ್ವಲಂತೀಂ ॥ ೧೫೦ ॥

ವಸ್ತ್ರೈರ್ಮಾಲ್ಯೈರ್ಯಕ್ಷಧೂಪೈರ್ವಿತಾನೈಃ ।
ಭಕ್ಷ್ಯೈರ್ಭೋಜ್ಯೈರ್ಮೋದಕೈಃ ಪಾಯಸೈಶ್ಚ ॥
ಮಾಂಸೈಃ ಪಿಷ್ಟೈಶ್ಛಾಗಲಾದ್ಯೈರಶೇಷೈಃ ।
ಪೂಜ್ಯಾ ದೇವೀ ಚಂಡಿಕಾಽಭೀಷ್ಟದಾ ಚ ॥ ೧೫೧ ॥

---

ಹಲವುಕೈಗಳಲ್ಲಿ ಬಿಲ್ಲು, ಪಾಶ, ಗುರಾಣಿ, ಅಂಕುಶ, ಘಂಟೆ, ಕುಠಾರ ಇವನ್ನೂ ಧರಿಸಿದವಳು ಎಂದೂ

೧೪೯. ತನ್ನ ಹರಿತವಾದ ಕತ್ತಿಯಿಂದ ಪ್ರಹರಿಸಲಾಗಿ ಆ ರಾಕ್ಷಸಾಧಿಪನ ತಲೆ ಕತ್ತರಿಸಿಹೋಗಲು ಆವನ ಮುಂಡವನ್ನು ಸರ್ಪಗಳೆಂಬ ಹಗ್ಗದಿಂದ ಸುತ್ತಲೂ ಬಂಧಿಸಿ ತ್ರಿಶೂಲದಿಂದ ಅವನ ದೇಹಮಧ್ಯವನ್ನು ಇರಿದು ಅವನನ್ನು ಕೊಂದವಳು ಎಂದೂ

೧೫೦. ಇಂದ್ರನೇ ಮೊದಲಾದ ದೇವತೆಗಳಿಂದ ಸ್ತುತಿಸಲ್ಪಡುವವಳು, ಸುಂದರವಾದ ವೇಣೀಬಂಧನವುಳ್ಳವಳು, ಗಂಧರ್ವರು ಸಿದ್ಧಜನರು ಮೊದಲಾದವರ ಸಮೂಹಗಳಿಂದ ಸೇವೆಮಾಡಿಸಿಕೊಳ್ಳುವವಳು, ಬಗೆಬಗೆಯ ವಸ್ತ್ರಾಭರಣಗಳಿಂದ ಥಳಥಳಿಸುವವಳು, ಸಹಜವಾಗಿ ಮಹಾತೇಜಸ್ವಿನಿಯಾಗಿರುವಳು ಎಂದೂ ಧ್ಯಾನಿಸಬೇಕು.

೧೫೧. ಸರ್ವರ ಇಷ್ಟಾರ್ಥಗಳನ್ನೂ ಕರುಣಿಸುವ ಆ ಚಾಮುಂಡಿಕಾಂಬೆಯನ್ನು ವಸ್ತ್ರ, ಗಂಧ, ಪುಷ್ಪ, ಯಕ್ಷಕರ್ದಮ ಎಂಬ ಧೂಪ ಭಕ್ಷ್ಯ, ಭೋಜ್ಯ, ಮೋದಕ, ಪಾಯಸ, ಮಾಷ, ಪಿಷ್ಟಗಳು ಸಮಸ್ತವಾದ ಛಾಗಲಗಳು ಮೊದಲಾದುವುಗಳನ್ನು ನಿವೇದಿಸಿ ಪೂಜೆಮಾಡಬೇಕು.

**ಶ್ಯಾಮಾಂ ಚ ಪೃಥಿವೀಂ ಧ್ಯಾಯೇತ್ಪಂಕಜದ್ವಯಧಾರಿಣೀಂ ॥ ೧೫೨ ॥**

**ಮಂಡೂಕಸ್ಥಾಂ ಚ ದ್ವಿಭುಜಾಂ ಸ್ಯೋನಾಪೃಥಿವೀತಿ ಚಾರ್ಚಯೇತ್ ।**
**ನೈಋತ್ಯಾಂ ವಿಶ್ವಕರ್ಮಾಣಂ ದ್ವಿಭುಜಂ ಟಂಕಧಾರಿಣಂ ॥ ೧೫೩ ॥**

**ಉತ್ಪಲಂ ದಕ್ಷಿಣೇ ಹಸ್ತೇ ಪದ್ಮಸ್ಥಂ ಪೀತವಾಸಸಂ ।**
**ಏವಂ ಧ್ಯಾತ್ವಾ ತತೋ ಬ್ರಹ್ಮನ್ನಿತಿ ಮಂತ್ರೇಣ ಪೂಜಯೇತ್ ॥ ೧೫೪ ॥**

**ಸ್ವಸ್ಥಾಂ ಸರಸ್ವತೀಂ ಧ್ಯಾಯೇದ್ವರದಾಭಯದಾಯಿನೀಂ ।**
**ಪೀತವಸ್ತ್ರಾಂ ಸುಮುಕುಟಾಂ ದೇವಗಂಧರ್ವಸೇವಿತಾಂ ॥ ೧೫೫ ॥**

**ಯಾಮಧಾ ಇತಿ ಮಂತ್ರೇಣ ಪೂಜಯೇತ್ಸಿತಚಂದನೈಃ ।**
**ಬಲಿಂ ಶ್ವೇತಚರುಂ ದದ್ಯಾತ್ಕೃಶರಂ ಯಾವಕಂ ತಥಾ ॥ ೧೫೬ ॥**

---

೧೫೨. ಶ್ಯಾಮವಾದ ಬಣ್ಣವುಳ್ಳವಳೂ, ಎರಡು ಭುಜಗಳುಳ್ಳವಳೂ, ಆಗಿ ಕೈಗಳೆರಡರಲ್ಲೂ ಕಮಲವನ್ನು ಹಿಡಿದಿರುವವಳೂ, ಮಂಡೂಕ (ಕಪ್ಪೆ) ವಾಹನೆಯೂ ಆದವಳೆಂದು ಪೃಥಿವಿಯನ್ನು ಧ್ಯಾನಿಸಿ 'ಸ್ಯೋನಾ ಪೃಥಿವೀ' ಎಂಬ ಮಂತ್ರದಿಂದ ಆವಾಹಿಸಿ ಪೂಜಿಸಬೇಕು.

೧೫೩-೧೫೪. ವಿಶ್ವಕರ್ಮನು ಎರಡು ಭುಜಗಳುಳ್ಳವನಾಗಿ ಎಡಗೈಯಲ್ಲಿ ಟಂಕಾಯುಧವನ್ನೂ, ಬಲಗೈಯಲ್ಲಿ ಉತ್ಪಲವನ್ನೂ ಧರಿಸಿರುವನೆಂದು ಧ್ಯಾನಿಸಿ 'ಬ್ರಹ್ಮನ್' ಎಂಬ ಮಂತ್ರ ಪೂರ್ವಕವಾಗಿ ನೈಋತ್ಯದಿಕ್ಕಿನಲ್ಲಿ ಆವಾಹನೆಮಾಡಿ ಷೋಡಶೋಪಚಾರಪೂಜೆಯನ್ನು ಮಾಡಬೇಕು.

೧೫೫. ವರದಹಸ್ತ, ಅಭಯಹಸ್ತಯುಕ್ತೆಯಾಗಿ ವರವನ್ನೂ ಅಭಯವನ್ನೂ ಕೊಡತಕ್ಕವಳು, ಹಳದಿಯವಸ್ತ್ರವನ್ನು ಧರಿಸಿರುವವಳು, ಸುಂದರವಾದ ಕಿರೀಟವುಳ್ಳವಳು, ದೇವಗಂಧರ್ವಾದಿಗಳಿಂದ ಸೇವಿಸಲ್ಪಡುವವಳು ಎಂಬದಾಗಿ ಸರಸ್ವತಿಯನ್ನು ಧ್ಯಾನಿಸಬೇಕು.

೧೫೬. 'ಯಾಮಧಾ' ಎಂಬ ಮಂತ್ರಪೂರ್ವಕವಾಗಿ ಆ ದೇವಿಯನ್ನು ದೇವನ ಎಡಭಾಗದಲ್ಲಿ ಆವಾಹನಮಾಡಿ ಬಿಳಿಯಗಂಧ, ಮಲ್ಲಿಯಹೂ ಮುಂತಾದುವುಗಳಿಂದ ಪೂಜಿಸಿ, ಬಿಳಿಯಅನ್ನ, ಎಳ್ಳುಪುಡಿ (ಚಿಗುಳಿ) ಯವಧಾನ್ಯ ಇವುಗಳಿಂದ ಬಲಿಸಮರ್ಪಣ ಮಾಡಬೇಕು.

ಸ್ಥಾಪಯೇದ್ವಾಮದಿಗ್ಭಾಗೇ ಕುಂದಪುಷ್ಪೈಃ ಪ್ರಪೂಜಯೇತ್ ।
ಪೂರ್ವಾದಿದ್ವಾರದೇಶೇ ತು ಪೂಜಯೇಚ್ಚ ಮರುದ್ಗಣೈಃ ॥ ೧೫೭ ॥

ಅಗ್ನ್ಯಾದಿಷು ಚ ಕೋಣೇಷು ಬಹಿರ್ಭೂತಾನ್ಸಮಾಚರೇತ್ ।
ಪಿಶಾಚಾ ರಾಕ್ಷಸಾ ಭೂತಾ ವೇತಾಲಕಪಿಜಾತಯಃ ॥ ೧೫೮ ॥

ನಿರ್ಣಾಸಾಶ್ಚೈವ ತೇ ಸರ್ವೇ ರೌದ್ರಾ ವಿಕೃತರೂಪಿಣಃ ।
ತತೋ ಮಂಡಲಮಧ್ಯೇ ತು ವಾರುಣಂ ಪೂರ್ವವರ್ತ್ಮನಾ ॥ ೧೫೯ ॥

ಪೂರಯೇತ್ಕಲಶೇ ತತ್ರ ಸುವರ್ಣಾದಿವಿನಿರ್ಮಿತಂ ।
ಕೂರ್ಮಂ ಕೂರ್ಮಾಕೃತಿಂ ಕುರ್ಯಾಚ್ಛುದ್ಧಸ್ವರ್ಣೇನ ಸತ್ತಮಾಃ ॥ ೧೬೦ ॥

ಬೃಹತ್ಪರ್ವಪ್ರಮಾಣೇನ ರಾಜತಸ್ಯ ತು ದುರ್ಲಭಂ ।
ಪಾದಂ ಪಾದೇನ ಮಾನೇನ ಅಂಗುಲಂ ಪರಿಮಂಡಲಂ ॥ ೧೬೧ ॥

---

೧೫೭. ಪೂರ್ವ ಮುಂತಾದ ನಾಲ್ಕುಕಡೆಯ ಬಾಗಿಲುಗಳಲ್ಲಿ ಒಂದೊಂದರಲ್ಲೂ ಮರುತ್ತುಗಳ ಒಂದೊಂದು ಜೊತೆಯನ್ನು ಪೂಜೆಮಾಡಬೇಕು.

೧೫೮. ಆಗ್ನೇಯ ಮುಂತಾದ ಮೂಲೆಗಳಲ್ಲಿ ಹೊರಗಡೆ ಪಿಶಾಚರು, ರಾಕ್ಷಸರು, ಭೂತಗಳು, ಬೇತಾಳಗಳು, ಕಪಿಜಾತಿಗಳು, ಮೂಗಿಲ್ಲದವರು ಮುಂತಾದ ಭಯಂಕರರೂಪಿಗಳು ವಿಕಾರರೂಪಿಗಳು ಇವರನ್ನು ಪೂಜಿಸಬೇಕು.

೧೫೯-೧೬೦. ಓ ದ್ವಿಜವರ್ಯರೇ! ಹಿಂದೆ ಹೇಳಿದ ಕ್ರಮದಂತೆ ಮಂಡಲದ ಮಧ್ಯದಲ್ಲಿಟ್ಟಿರುವ ವರುಣಕಲಶದಲ್ಲಿ ಚಿನ್ನ ಮುಂತಾದ ಲೋಹಗಳಿಂದ ಮಾಡಿದ ಜಲಚರಗಳ ಪ್ರತಿಮೆಗಳನ್ನು ಹಾಕಬೇಕು. ಅವುಗಳಲ್ಲಿ ಆಮೆಯ ಪ್ರತಿಮೆಯನ್ನು ಶುದ್ಧವಾದಬಂಗಾರದಿಂದ ದೊಡ್ಡ ಪರ್ವಾಕಾರವಾಗಿ ಮಾಡಬೇಕು.

೧೬೧. ಹಾಗೆ ಚಿನ್ನದಿಂದ ಮಾಡಿಸಲು ಅನುಕೂಲ ಸಾಲದಿದ್ದರೆ ಬೆಳ್ಳಿಯಿಂದ ಮಾಡಿದುದನ್ನಾದರೂ ಹಾಕಬೇಕು. ಅದರ ಕಾಲುಭಾಗ ಪ್ರಮಾಣದಷ್ಟರಲ್ಲಿ ಪಾದವನ್ನು ಅಂಗುಲದಷ್ಟು ಸುತ್ತಳತೆಯಿಟ್ಟು ಮಾಡಿಸಬೇಕು

ಪ್ರೌಷ್ಠೀಮತ್ಸ್ಯಂ ತಥಾ ಕುರ್ಯಾತ್ಕುಲೀರಂ ತಾಮ್ರನಿರ್ಮಿತಂ ।
ತೇಷ್ವೈಕಸ್ಯ ವಿನಿರ್ಮಾಣಂ ದ್ವ್ಯಂಗುಲಾಯಾಮವಿಸ್ತೃತಂ ॥ ೧೬೨ ॥

ತಥಾ ಮಾನೇನ ಮಂಡೂಕಂ ತಾಂ ಭೂಮಿಂ ಮುನಿಸತ್ತಮಾಃ ।
ಶಿಂಶುಮಾರಂ ಚ ವೈ ಸಮ್ಯಕ್ಸೋಲಕೆದ್ವಯನಿರ್ಮಿತಂ ॥ ೧೬೩ ॥

ಅಂಗುಲತ್ರಯದೀರ್ಘಂ ಚ ಯಥಾ ತಸ್ಯಾಕೃತಿರ್ಭವೇತ್ ।
ಸಿತಚಂದನವಸ್ತ್ರೈಶ್ಚ ಪೂಜನೀಯಾಃ ಸಮಂತತಃ ॥ ೧೬೪ ॥

ಯಾವಕೈಶ್ಚ ವಿಶೇಷೇಣ ಬಹುಮಂತ್ರವಿಶಾರದಾನ್ ।
ಬಹ್ವಚೌ ಪೂರ್ವಮತ್ಸ್ಯಾರ್ಥೇ ದಕ್ಷಿಣೇ ತು ಯಜುರ್ವಿದೌ ॥ ೧೬೫ ॥

ಸಾಮಗೌ ಪಶ್ಚಿಮೇ ಚಾಥ ಉತ್ತರೇಽಥರ್ವಣೌ ಸ್ಮೃತೌ ।
ಜಯಧ್ವಮಿತಿ ತಾನ್ ಬ್ರೂಯಾದ್ಧೋತೃಕಾನ್ ಪುನರೇವ ಹಿ ॥ ೧೬೬ ॥

---

೧೬೨. ಪ್ರೋಷ್ಠೀಮತ್ಸ್ಯಪ್ರತಿಮೆ ಕುಳೀರಪ್ರತಿಮೆಗಳನ್ನು ತಾಮ್ರದಿಂದ ಮಾಡಬೇಕು. ಇವೊಂದೊಂದನ್ನೂ ಎರಡುಅಂಗುಲ ಉದ್ದ ಅದಕ್ಕೆ ತಕ್ಕನ್ನು ಅಗಲ ಇರುವಂತೆ ಮಾಡಬೇಕು.

೧೬೩. ಓ ಋಷಿಶ್ರೇಷ್ಠರೇ ! ಕಪ್ಪೆಯ ಪ್ರತಿಮೆಯನ್ನೂ, ಭೂಮಿಯ ಪ್ರತಿಮೆಯನ್ನೂ ಅದೇ ಅಳತೆಯಲ್ಲಿಯೇ ಮಾಡಬೇಕು. ಎರಡುತೊಲ ತೂಕದಲ್ಲಿ ಮೂರುಅಂಗುಲ ನೀಳವಾಗಿರುವಂತೆ ಶಿಂಶುಮಾರ ಪ್ರತಿಮೆಯನ್ನು ಮಾಡಬೇಕು.

೧೬೪. ಈ ಪ್ರತಿಮೆಗಳನ್ನು ಸುತ್ತಲೂ ಇಟ್ಟು ಬಿಳಿಯಗಂಧ ವಸ್ತ್ರ ಮೊದಲಾದುವುಗಳಿಂದಲೂ, ಯಾವಕಭಕ್ಷ್ಯ ನೈವೇದ್ಯದಿಂದಲೂ ಪೂಜಿಸಬೇಕು.

೧೬೫. ಬಹುಮಂತ್ರವಿಶಾರದರೂ, ಋಗ್ವೇದ ಪಾರಂಗತರೂ ಆದ ಇಬ್ಬರನ್ನು ಪೂರ್ವದಿಕ್ಕಿನಲ್ಲಿ ಮತ್ಸ್ಯಾಸನದಲ್ಲಿ ಕೂರಿಸಬೇಕು.

೧೬೬. ಹೀಗೆಯೇ ದಕ್ಷಿಣದಲ್ಲಿ ಯಜುರ್ವೇದಜ್ಞರಾದ ಇಬ್ಬರು, ಪಶ್ಚಿಮದಲ್ಲಿ ಸಾಮವೇದಜ್ಞರಾದ ಇಬ್ಬರು, ಉತ್ತರದಲ್ಲಿ ಅಥರ್ವಣವೇದಜ್ಞರಾದ ಇಬ್ಬರು, ಈ ಪ್ರಕಾರ ಕೂರಿಸಬೇಕು. ಆ ಹೋತೃಗಳನ್ನು ಕುರಿತು ನೀವು ಈ ಕಾರ್ಯದಲ್ಲಿ ಜಯ ಹೊಂದಿರಿ (ಸರ್ವೋತ್ಕೃಷ್ಟರಾಗಿರಿ) ಎಂದು ಹೇಳಬೇಕು.

ಸ್ಥಾಪ್ಯ ಸರ್ವಂ ಪೃಥಕ್ಸೂತ್ರೀ ಮಾತರುದ್ದೀಪಮೇವ ಚ ।
ಪಂಚಾಂಗಂ ಶಿವಸೂಕ್ತಂ ಚ ಯಥಾ ವಿಷ್ಣೋರ್ಹರಸ್ಯ ಚ ॥ ೧೬೭ ॥

ಜಯಾಗ್ರತಃ ಪುರುಷಸೂಕ್ತಮದ್ಭ್ಯಃಸಂಭೂತಮೇವ ಚ ।
ಆಶುಃಶಿಶಾನಮಾರಭ್ಯ ವಯಂ ಮೋಷಾಂಗರುದ್ರಕೇ ॥ ೧೬೮ ॥

ಯಜ್ಞಾಗ್ರತಶ್ಚಾಗ್ನೇ ಚ ವಿಷ್ಣೋ ರರಾಟಮೇವ ಚ ।
ಸಮಸ್ತಾಧ್ಯಾಯರುದ್ರೇಣ ಶತರುದ್ರಾಖ್ಯಮಿರಿತಂ ॥ ೧೬೯ ॥

ಪಂಚಾಗರುದ್ರಸ್ಯಃ ಪುಷ್ಪದಂತಋಷಿಃ ಗಾಯತ್ರೀ
ಛಂದಃ ವೇದಾಹಮೇತದ್ಭೀಜಂ ಶ್ರೀಶ್ಚತೇ ಇತಿಶಕ್ತಿಃ
ನಮಸ್ತೇರುದ್ರ ಇತಿನಾಯಕಃ ಪರಮರುದ್ರೋ
ದೇವತಾ ಪರಮಸ್ತುತೌ ವಿನಿಯೋಗಃ
ಸಪ್ತಾಂಗರುದ್ರಸ್ಯ ಪುಷ್ಪದಂತಋಷಿಃ ಪಂಕಿಶ್ಛಂ
ದಃ ತ್ರ್ಯಂಬಕಮಿತಿ ಅಂಗುಷ್ಠಾಭ್ಯಾಂನಮಃ

---

೧೬೭. ಇವಲ್ಲದೆ ಪ್ರತ್ಯೇಕ ಪ್ರತ್ಯೇಕವಾಗಿ ಬೇರೆ ಸೂತ್ರ ಜಪಮಾಡುವುದಕ್ಕಾಗಿ ಸರ್ವರನ್ನೂ ಸ್ಥಾಪನೆಮಾಡಿ ಅವರು ಮಾತರುದ್ದೀಪನಸೂಕ್ತ, ಪಂಚಾಂಗರುದ್ರಸೂಕ್ತ, ವಿಷ್ಣುಸೂಕ್ತ, ಶಿವಸೂಕ್ತ ಇವನ್ನೂ

೧೬೮. ಮತ್ತು ಜಯ ಎಂಬ ಸಂಜ್ಞೆಯಿಂದ ವ್ಯವಹೃತವಾಗುವ ಗ್ರಂಥಭಾಗ, "ಅದ್ಭ್ಯಃ ಸಂಭೂತಃ" ಎಂಬಲ್ಲಿಂದ ಆರಂಭಿಸಿ ಮುಂದಕ್ಕೆ ಹೇಳುವ ಪುರುಷಸೂಕ್ತದ ಅಂತ್ಯಭಾಗ "ಆಶುಃ ಶಿಶಾನಃ" ಎಂಬುದರಿಂದ ಆರಂಭಮಾಡಿ "ವಯಂ ಮೋಷಾಂಗ" ಎಂಬ ವರೆಗೆ ಹೇಳುವ ರುದ್ರಸೂಕ್ತ ಇವೆಲ್ಲವನ್ನೂ ಪಠನಮಾಡಬೇಕು.

೧೬೯. 'ಯಜ್ಞಾಗ್ರತ' ಎಂಬ ಮಂತ್ರವೂ, 'ಅಗ್ನೇಚ' ಎಂಬ ಮಂತ್ರವೂ, 'ವಿಷ್ಣೋ ರರಾಟಮಸಿ' ಎಂಬ ಮಂತ್ರವೂ ಮತ್ತು ಸಮಸ್ತ ರುದ್ರಾಧ್ಯಾಯದ ಮಂತ್ರವೆಲ್ಲವೂ 'ಶತರುದ್ರ' ಎಂಬ ಹೆಸರಿನಿಂದ ಕರೆಯಲ್ಪಡುವುದು.

ಈ ಪಂಚಾಂಗರುದ್ರ ಮಂತ್ರಕ್ಕೆ ಪುಷ್ಪದಂತನು ಋಷಿ, ಗಾಯತ್ರಿಯು ಛಂದಸ್ಸು, ವೇದಾಹಮೇತತ್ ಎಂಬುದು ಬೀಜ, ಶ್ರೀಶ್ಚತೇ ಎಂಬುದು ಶಕ್ತಿ,

ತ್ರಿಪಾದೂರ್ಧ್ವಮಿತಿ ತರ್ಜನೀಭ್ಯಾಂ ಸ್ವಾಹಾ
ವೇದಾಹಮಿತಿ ಮಧ್ಯಮಾಭ್ಯಾಂ ವಷಟ್
ಅಮೀಷಾಂ ಚಿತ್ರಮಿತಿ ಅನಾಮಿಕಾಭ್ಯಾಂ ಹುಂ
ಯುವಾಗೂಂಸೋಮ ಇತಿ ಕನಿಷ್ಠಿಕಾಭ್ಯಾಂ ವೌಷಟ್
ಪರಿತೋಧೇನುಮಿತಿ ಕರತಲಕರಪೃಷ್ಠಾಭ್ಯಾಂ ಅಸ್ತ್ರಾಯ ಫಟ್
ಯಜ್ಞಾಗ್ರತ ಇತಿ ಹೃದಯಾಯನಮಃ
ಸಹಸ್ರಶೀರ್ಷೇತಿ ಶಿರಸೇ ಸ್ವಾಹಾ
ಅದ್ಭ್ಯಃ ಸಂಭೂತ ಇತಿ ಶಿಖಾಯೈವಷಟ್
ಆಶುಃ ಶಿಶಾನ ಇತಿ ಕವಚಾಭ್ಯಾಂ ಹುಂ
ನಮಸ್ತೇ ರುದ್ರ ಇತಿ ನೇತ್ರತ್ರಯಾಯ ವೌಷಟ್
ರೂಢಂ ಬ್ರಹ್ಮನ್ನಿತಿ ಅಸ್ತ್ರಾಯಫಟ್
ಚತುರ್ದಿಕ್ಷು ಛೋಟಿಕಾದಾನಂ
ಇತಿ ಸರ್ವಾಂಗೇಷು

ಹೋಮೇ ಪ್ರವರ್ತಮಾನೇ ತು ಸೂಕ್ತಾನನ್ಯಾಂಶ್ಚ ವೈ ಜಪೇತ್ ।
ಪ್ರಜಪೇದ್ವಾರುಣಂ ಸೂಕ್ತಂ ತಥಾ ಚ ಪಾಲಸೂಕ್ತಕಂ　　　　॥ ೧೭೦ ॥

---

ನಮಸ್ತೇರುದ್ರ ಎಂಬವನು ನಾಯಕನು, ಪರಮರುದ್ರನು ದೇವತೆ, ಆ ಪರಮಾತ್ಮನ ಸ್ತುತಿಯಲ್ಲಿ ಈ ಮಂತ್ರವು ವಿನಿಯೋಗಿಸಲ್ಪಡುವುದು.

ಸಪ್ತಾಂಗರುದ್ರ ಮಂತ್ರಕ್ಕೆ ಪುಷ್ಪದಂತನು ಋಷಿ, ಪಂಕ್ತಿ ಎಂಬುದು ಛಂದಸ್ಸು, ತ್ರ್ಯಂಬಕಂ ಎಂಬ ಮಂತ್ರಪೂರ್ವಕ ಅಂಗುಷ್ಠಗಳೆರಡರಿಂದ ನಮಸ್ಕಾರ. 'ತ್ರಿಪಾದೂರ್ಧ್ವ' ಎಂಬ ಮಂತ್ರದಿಂದ ತರ್ಜನಿಗಳೆರಡರಿಂದ ಸ್ವಾಹಾ; ವೇದಾಹಮೇತಂ ಎಂಬುದರಿಂದ ಎರಡು ಮಧ್ಯಮಗಳಿಂದ ವಷಟ್; ಈ ಮುಂತಾಗಿ ಉಕ್ತವಾಗಿರುವ ರೀತಿ ಕರನ್ಯಾಸಗಳನ್ನು ಮಾಡಬೇಕು.

೧೭೦. ಇದೇ ರೀತಿ ಹೃದಯಾದಿ ಸಮಸ್ತ ಅಂಗನ್ಯಾಸ ಮಾಡಬೇಕು. ಹಾಗೆ ಮಾಡಿದ ಅನಂತರದಲ್ಲಿ ಭೂತೋಚ್ಚಾಟನೆಗೋಸ್ಕರವಾಗಿ ತನ್ನ ಶರೀರದ ನಾಲ್ಕು ದಿಕ್ಕುಗಳಲ್ಲಿಯೂ ಬೆರಳಿನಿಂದ ಪ್ರದಕ್ಷಿಣಾಕಾರವಾಗಿ ಚಿಟಿಕೆ ಹೊಡೆದು ಶಬ್ದಗಳನ್ನು ಮಾಡಬೇಕು. ಹೋಮಕ್ಕೆ ಪ್ರಾರಂಭಿಸುತ್ತಲೆ ಮುಂದೆ ಹೇಳುವ ಸೂಕ್ತಗಳನ್ನು ಜಪಮಾಡಬೇಕು.

ರಾತ್ರಿಸೂಕ್ತಂ ಚ ರೌದ್ರಂ ಚ ಪಾವಮಾನಂ ಸಮುಜ್ವಲಂ ।
ಜಪೇಚ್ಚ ಪೌರುಷಂ ಸೂಕ್ತಂ ಸರ್ವಶೋಽಪರತಂ ಪೃಥಕ್ ॥ ೧೭೧ ॥

ಶಾಕ್ತಂ ರೌದ್ರಂ ಚ ಸೌಮ್ಯಂ ಚ ಕೂಷ್ಮಾಂಡಂ ಜಾತವೇದಸಂ ।
ಸೌರಸೂಕ್ತಂ ಚ ಜಯಶೋ ದಕ್ಷಿಣೇನ ಯಜುರ್ವಿದಃ ॥ ೧೭೨ ॥

ವೈರಾಜಂ ಪೌರುಷಂಸೂಕ್ತಂ ಸೌವರ್ಣಂ ರುದ್ರಸಂಹಿತಾಂ ।
ಶೈಚವಂ ಪಂಚನಿರಯಂ ಗಾಯತ್ರ್ಯಂ ಜ್ಯೇಷ್ಠಸಾಮ ಚ ॥ ೧೭೩ ॥

ವಾಮದೇವ್ಯಂ ಬೃಹತ್ಸಾಮ ತಥಾ ಚೈವ ರಥಂತರಂ ।
ಗೋವ್ರತಂ ಚ ವಿಕರ್ಣಂ ಚ ರಕ್ಷೋಘ್ನಂ ಪಾವನಂ ಸ್ಮೃತಂ ॥ ೧೭೪ ॥

ಗಾಯಂತಂ ಬ್ರಾಹ್ಮಣಾ ಯೇ ಚ ಪೂರ್ವಾದಿದ್ವಾರದೇಶತಃ ।
ಅನ್ನಾತ್ಪರಿಸ್ರುತ ಇತಿ ಪಂಚಪೂರ್ವಂ ಸೌರಸೂಕ್ತಕಂ ॥ ೧೭೫ ॥

---

೧೭೧. ಜಾಪಕರಾದ ಋತ್ವಿಜರು ವರುಣಸೂಕ್ತ, ಪಾಲಸೂಕ್ತ, ರಾತ್ರಿಸೂಕ್ತ, ರುದ್ರಸೂಕ್ತ, ಜಾಜ್ವಲ್ಯಮಾನವಾದ ಪವಮಾನಸೂಕ್ತ, ಪುರುಷಸೂಕ್ತ ಇವುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಜಪಮಾಡಬೇಕು. ಹೀಗೆ ಮಾಡುವಾಗ ಋತ್ವಿಗ್ವ್ಯಕ್ತಿಗಳು ಗಮನವಿಲ್ಲದೆ ಶಾಂತಚಿತ್ತತೆಯಿಂದ ಇರಬೇಕು.

೧೭೨. ಯಜುರ್ವೇದ ವಿಧಾನದಿಂದ ನಡೆಸತಕ್ಕ ಜಯಾದಿ ಹೋಮಕಾಲದಲ್ಲಿ ದಕ್ಷಿಣದಿಕ್ಕಿನಲ್ಲಿ ಕೂರಿಸಿರುವ ಋತ್ವಿಜರು ಅಗ್ನಿಪ್ರೀತ್ಯರ್ಥವಾಗಿ ಶಕ್ತಿಸೂತ್ರ, ರುದ್ರಸೂಕ್ತ ಸೌಮ್ಯಸೂಕ್ತ, ಕೂಷ್ಮಾಂಡಸೂಕ್ತ, ಸೌರಸೂಕ್ತ ಇವುಗಳನ್ನು

೧೭೩. ಮತ್ತು ವೈರಾಜಸೂಕ್ತ, ಪುರುಷಸೂಕ್ತ, ಸೌವರ್ಣಸೂಕ್ತ, ರುದ್ರಸಂಹಿತೆ, ಶೈವಸೂಕ್ತ, ಪಂಚನಿರಯಸೂಕ್ತ ಇವನ್ನು ಪಾರಾಯಣಮಾಡಬೇಕು. ಸಾಮವೇದಜ್ಞರಾದ ಋತ್ವಿಜರು ಗಾಯತ್ರೀಸಂಬಂಧವಾದ ಜ್ಯೇಷ್ಠಸಾಮ

೧೭೪. ವಾಮದೇವ್ಯಸಾಮ, ಬೃಹತ್ಸಾಮ, ರಥಂತರಸಾಮ ಇತ್ಯಾದಿ ಸಾಮಸೂಕ್ತಗಳನ್ನು ಜಪಮಾಡಬೇಕು. ಗೋವ್ರತಸೂಕ್ತವನ್ನೂ, ವಿಕರ್ಣಸೂಕ್ತವನ್ನೂ ರಕ್ಷೋಘ್ನಸೂಕ್ತವನ್ನೂ ಜಪಿಸುವುದು ಶ್ರೇಷ್ಠವೆಂದು ಹೇಳಿದೆ.

೧೭೫ ಪೂರ್ವ ಮೊದಲಾದ ದ್ವಾರಪ್ರದೇಶದಲ್ಲಿ ಯಾವ ಬ್ರಾಹ್ಮಣರು ಈ ಸೂಕ್ತಗಳನ್ನು ಜಪಮಾಡುತ್ತಿರುವರೋ ಅವರು ಮೊದಲು ಸೌರಸೂಕ್ತವನ್ನು

**ರುದ್ರಾಧ್ಯಾಯಂ ಚ ಪಂಚಾಂಗಂ ರೌದ್ರ ಇತ್ಯಭಿಧೀಯತೇ ।**
**ಆಪ್ಯಾಯಸ್ವೇತಿ ಚ ಚತುಃ ಸೌಮ್ಯಂ ಸೂಕ್ತಂ ಪ್ರಚಕ್ಷತೇ ॥ ೧೭೬ ॥**

**ಈಶಾವೇತ್ಯಾದಿ ಸ್ವಾಂಗಂ ಚ ಕೂಷ್ಮಾಂಡಂ ದಶಮಂ ಸ್ಮೃತಂ ।**
**ಅಗ್ರೇಬೃಹನ್ನಿತಿ ನವಸೂಕ್ತಂ ವೈ ಜಾತವೇದಸಂ ॥ ೧೭೭ ॥**

**ಷೋಡಶಂ ತು ವಿಭ್ರಾಟ್ ಬೃಹತ್ಸೌರಂ ಸೂಕ್ತಂ ಪ್ರಕೀರ್ತಿತಂ ।**
**ಸೌರಸೂಕ್ತಂ ಧ್ರುವೋऽಸೀತಿ ಇಷವೋ ಮಂಗಲಂ ಸ್ಮೃತಂ ॥ ೧೭೮ ॥**

**ರಾತ್ರಿಸೂಕ್ತಂ ಹಿ ಯಜ್ವಾಗ್ನೇ ರಕ್ಷೋಘ್ನಂ ಶೈವಸೂಕ್ತಕಂ ।**
**ಗಣಾನಾಂತ್ವೇತಿ ಪಂಚ ಆಪೋಹಿಷ್ಠೇತಿ ಚ ತ್ರಯಂ ॥ ೧೭೯ ॥**

---

ಜಪಿಸಿ ಅನಂತರ 'ಅನ್ನಾತ್ಪರಿಸ್ರುತಂ' ಎಂಬ ಐದುಸೂಕ್ತಗಳನ್ನು ಪಾರಾಯಣಮಾಡ ಬೇಕು.

೧೭೬. ಐದು ಅಂಗಗಳಿಂದ ಕೂಡಿದ ರುದ್ರಾಧ್ಯಾಯವು ರುದ್ರಸೂಕ್ತವೆಂದು ಹೇಳಿಸಿಕೊಳ್ಳುತ್ತದೆ. 'ಆಪ್ಯಾಯಸ್ವ' ಎಂಬುದು ಮೊದಲುಗೊಂಡು ನಾಲ್ಕು ಮಂತ್ರ ಗಳು ಸೌಮ್ಯಸೂಕ್ತವೆನಿಸಿಕೊಳ್ಳುತ್ತವೆ.

೧೭೭. ಸಾಂಗಭೂತವಾದ 'ಈಶಾವಾ' ಎಂಬುದು ಮೊದಲುಗೊಂಡು ಹತ್ತು ಮಂತ್ರಗಳು ಕೂಷ್ಮಾಂಡಸೂಕ್ತವೆನಿಸಿಕೊಳ್ಳುತ್ತವೆ. 'ಅಗ್ರೇಬೃಹ್' ಎಂಬದು ಮೊದ ಲುಗೊಂಡು ಒಂಭತ್ತುಸೂಕ್ತಗಳು ಅಗ್ನಿಸೂಕ್ತವೆನಿಸಿಕೊಳ್ಳುತ್ತವೆ.

೧೭೮. ವಿಭ್ರಾಟ್ ಬೃಹತ್ ಎಂಬುದು ಮೊದಲುಗೊಂಡು ಹದಿನಾರು ಮಂತ್ರಗಳು ಬೃಹತ್ ಸೌರಸೂಕ್ತವೆನಿಸಿಕೊಳ್ಳುವುವು. 'ಧ್ರುವೋಸಿ' ಎಂಬುದರಿಂದ ಆರಂಭಿಸಿ "ಇಷವೋಮಂಗಲಂ" ಎಂಬವರೆಗಿನ ಮಂತ್ರವು ಸೌರಸೂಕ್ತವೆನಿಸುವುದು.

೧೭೯. ಅಗ್ನಿಯು ಜಾಜ್ವಲ್ಯಮಾನವಾಗಿರುವಾಗ ಹೇಳಬೇಕಾದ ರಾತ್ರಿ ಸೂಕ್ತ, ರಕ್ಷೋಘ್ನಸೂಕ್ತ, ಶೈವಸೂಕ್ತ ಇವನ್ನೂ "ಗಣಾನಾಂ ತ್ವಾ" ಇತ್ಯಾದಿಯಾದ ಐದು ಮಂತ್ರಗಳನ್ನೂ "ಆಪೋಹಿಷ್ಠಾ" ಮೊದಲಾದ ಮೂರು ಮಂತ್ರಗಳನ್ನೂ

**ಪವಮಾನಂ ತು ತದ್ವಿದ್ಧಿ ಪಾವಮಾನಂ ತು ಷೋಡಶ ।**
**ಸಮಸ್ತಂ ದೇವಯಾಗೇಷು ತದ್ರಾತ್ರೌ ತು ತದರ್ಧಕಂ ॥**
**ತದರ್ಧಾರ್ಧಂ ಚ ಆರಾಮೇ ಕೂಪೇ ತ್ವೇಕಋಚಂ ಜಪೇತ್ ॥ ೧೮೦ ॥**

**ಸ್ವಗೃಹ್ಯೋಕ್ತವಿಧಾನೇನ ಪ್ರತಿಕುಂಡೇಷು ಹೋಮಯೇತ್ ।**
**ಸಂಸ್ಕುರ್ಯಾದೀಕ್ಷಣಾದ್ಯೈಶ್ಚ ಸಂಪೂಜ್ಯ ಚ ಪರಸ್ಪರಂ ॥ ೧೮೧ ॥**

**ಪ್ರಜ್ವಾಲ್ಯಾಗ್ನಿಂ ಚ ವಿಧಿವತ್ ಹೋಮಂ ಕುರ್ಯಾದನಂತರಂ ।**
**ವಾಗೀಶ್ವರಂ ಸಮಭ್ಯರ್ಚ್ಯ ವಾಗೀಶ್ವರ್ಯಾ ಸಮನ್ವಿತಂ ॥ ೧೮೨ ॥**

**ಯಸ್ಯ ದೇವಸ್ಯ ಯೋ ಯಾಗಃ ಪ್ರತಿಷ್ಠಾ ಯಸ್ಯ ಕಸ್ಯಚಿತ್ ।**
**ಪ್ರಾಗೇವ ತಸ್ಯ ಜುಹುಯಾತ್ ಸಹಸ್ರಂ ಚ ಶತಂ ತಥಾ ॥ ೧೮೩ ॥**

---

೧೮೦. ಒಟ್ಟು ಈ ಹದಿನಾರನ್ನೂ ಪವಮಾನಸೂಕ್ತವೆಂದು ತಿಳಿಯಬೇಕು. ದೇವಯಾಗದಲ್ಲಿ ಈ ಪಾವಮಾನಸೂಕ್ತಗಳನ್ನು ಸಮಗ್ರವಾಗಿ ಪಠನಮಾಡಬೇಕು. ರಾತ್ರಿಯವೇಳೆ ಪಾರಾಯಣಮಾಡಬೇಕಾದಲ್ಲಿ ದೇವಯಾಗದಲ್ಲಿ ಮಾಡುವುದರ ಅರ್ಧದಷ್ಟನ್ನು ಪಾರಾಯಣಮಾಡಬಹುದು. ಆರಾಮಪ್ರತಿಷ್ಠಾ ಕರ್ಮದಲ್ಲಿ ಪೂರ್ವೋಕ್ತವಾದ ಸೂಕ್ತಗಳ ಅರ್ಧದಲ್ಲಿ ಅರ್ಧದಷ್ಟನ್ನು ಎಂದರೆ-ಕಾಲುಭಾಗವನ್ನು ಹೇಳಬಹುದು ಕೂಪಪ್ರತಿಷ್ಠಾಸಂದರ್ಭದಲ್ಲಿ ಅದರ ಒಂದೇ ಋಕ್ಕನ್ನು ಜಪಮಾಡಬಹುದು.

೧೮೧. ತಮ್ಮ ಶಾಖೆಯಲ್ಲಿ ಹೇಳಿರುವ ವಿಧಾನದಿಂದ ಪ್ರತಿಕುಂಡ ರಚನೆಯಲ್ಲಿ ಅಗ್ನಿಕುಂಡದ ಸ್ಥಂಡಿಲದಲ್ಲಿ ಈಕ್ಷಣ ಮೊದಲಾದ ಯಥೋಕ್ತ ಸಂಸ್ಕಾರಗಳನ್ನು ಮಾಡಿ ಪೂಜೆಮಾಡಿ ವಿಧಿವತ್ತಾಗಿ ಅಗ್ನಿಯನ್ನು ಪ್ರತಿಷ್ಠಿಸಬೇಕು.

೧೮೨. ಸ್ಥಂಡಿಲದಲ್ಲಿ ವಾಗೀಶ್ವರೀ ದೇವೀಸಮೇತನಾದ ವಾಗೀಶ್ವರನನ್ನು ಅರ್ಚಿಸಿ ಅನಂತರ ಅಗ್ನಿಯನ್ನು ಹತ್ತಿಸಿ ವಿಧಿಪ್ರಕಾರ ಹೋಮಮಾಡಬೇಕು.

೧೮೩. ಯಾವ ದೇವತೆಗೆ ಸಂಬಂಧಿಸಿದ ಪ್ರತಿಷ್ಠಾಪನೆಯ ಅಂಗವಾಗಿ ಆ ಯಾಗ ನಡೆಯುತ್ತದೆಯೋ ಆ ದೇವತೆಯನ್ನು ಉದ್ದೇಶಿಸಿ ಆರಂಭದಲ್ಲಿ ಎಳ್ಳು, ತುಪ್ಪ, ಪಾಯಸ, ಇವುಗಳಿಂದ ಒಂದುಸಾವಿರದನೂರು ಆಹುತಿಗಳನ್ನು ಹೋಮಮಾಡಬೇಕು

**ತಿಲಾಜ್ಯೈಃ ಪಾಯಸೈರ್ವಾಥ ಪತ್ರಪುಷ್ಪಾಕ್ಷತೇನ ಚ ।**
**ಗ್ರಹೇಭ್ಯೋ ವಿಧಿವತ್ಸರ್ವಂ ತಥೇಂದ್ರಾಯೇಶ್ವರಾಯ ಚ ॥ ೧೮೪ ॥**

**ಮರುದ್ಭ್ಯೋ ಲೋಕಪಾಲೇಭ್ಯೋ ವಿಧಿವದ್ವಿಶ್ವಕರ್ಮಣೇ ।**
**ಊರ್ಜೇನ ಸಮಿಧಾ ಕುರ್ಯಾದಷ್ಟಾಷ್ಟೌ ಸ್ವಗೃಹೇಷ್ವಪಿ ॥ ೧೮೫ ॥**

**ಇಂದ್ರೇಶ್ವರಮಾರುತಾನಾಂ ತಿಲಾಜ್ಯೇನ ಘೃತೇನ ವಾ ।**
**ಏಕೈಕಾಮಾಹುತಿಂ ದದ್ಯಾತ್ಸ್ವೈಸ್ವೈರ್ಮಂತ್ರೈರ್ಯಥಾಕ್ರಮಾತ್ ॥ ೧೮೬ ॥**

**ದಿಗೀಶಾನಾಂ ಚ ಪ್ರತ್ಯೇಕಮಷ್ಟಾಷ್ಟೌ ಚ ವಿಶೇಷತಃ ।**
**ವಿಶ್ವಕರ್ಮನ್ನಿತಿ ಮಂತ್ರೇಣ ಕೃತ್ವಾ ಆಜ್ಯಾಹುತಿತ್ರಯಂ ॥ ೧೮೭ ॥**

**ಸಮಿತ್ತ್ರಯಂ ಪಲಾಶಸ್ಯ ಅಥವಾಶ್ವತ್ಥಸಂಭವಂ ।**
**ಏಕೈಕಾಮಾಹುತಿಂ ದದ್ಯಾದಾಜ್ಯೇನ ಚ ವಿಶೇಷತಃ ॥ ೧೮೮ ॥**

---

೧೮೪–೧೮೫. ನವಗ್ರಹಗಳಿಗೂ, ಇಂದ್ರನಿಗೂ, ವಿಶ್ವಕರ್ಮನಿಗೂ, ಈಶ್ವರನಿಗೂ, ಮರುದ್ದೇವತೆಗಳಿಗೂ, ಲೋಕಪಾಲಕರಿಗೂ ಸಹ, ಗಂಧ, ಪುಷ್ಪ, ಅಕ್ಷತಾದಿಗಳಿಂದ ವಿಧಿಪ್ರಕಾರ ಪೂಜಿಸಿ, ಪ್ರತಿಯೊಬ್ಬನಿಗೂ ಸಂಸ್ಕಾರಮಾಡಿದ ಎಂಟೆಂಟು ಸಮಿತ್ತುಗಳನ್ನು ಎಳ್ಳು ಅಥವಾ ಪಾಯಸ ತುಪ್ಪ ಇವುಗಳಸಮೇತ ಹೋಮಮಾಡಬೇಕು.

೧೮೬. ಅದು ಹೇಗೆಂದರೆ ಇಂದ್ರನಿಗೂ, ಈಶ್ವರನಿಗೂ, ಮರುತ್ತುಗಳಿಗೂ ಅನುಕ್ರಮವಾಗಿ ಆಯಾ ದೇವತೆಗಳಿಗೆ ಸಂಬಂಧಪಟ್ಟ ಮಂತ್ರಪೂರ್ವಕವಾಗಿ ತಿಲ ಮಿಶ್ರವಾದ ತುಪ್ಪದಿಂದಲಾಗಲಿ, ಕೇವಲ ತುಪ್ಪದಿಂದಲಾಗಲಿ ಒಂದೊಂದೇ ಆಹುತಿ ಕೊಡಬೇಕು.

೧೮೭ ದಿಕ್ಪಾಲಕರಿಗೆ ಪ್ರತ್ಯೇಕ ಪ್ರತ್ಯೇಕವಾಗಿ ವಿಶೇಷತಃ ಎಂಟೆಂಟು ಹೋಮಗಳನ್ನು ಮಾಡಬೇಕು "ವಿಶ್ವಕರ್ಮನ್" ಎಂಬ ಮಂತ್ರದಿಂದ ವಿಶ್ವಕರ್ಮನಿಗೆ ಮೂರು ಆಜ್ಯಾಹುತಿಗಳನ್ನು ಕೊಡಬೇಕು.

೧೮೮. ಮೂರು ಮುತ್ತುಗದ ಸಮಿತ್ತು ಅಥವಾ ಮೂರು ಅರಳಿಯ ಸಮಿತ್ತಿನ ಜೊತೆ ತುಪ್ಪದಿಂದಲೂ ಒಂದೊಂದು ವಿಶೇಷವಾದ ಆಹುತಿ ಕೊಡಬೇಕು

ಶಿವಂ ಪ್ರಜಾಪತಿಂ ವಿಷ್ಣುಂ ದುರ್ಗಾಂ ಚ ಕಮಲಾಮಪಿ ।
ಸರಸ್ವತೀಂ ಚ ವಿಧಿವತ್ಪೃಥಿವ್ಯಾ ಇತಿ ಪಾವಕೈಃ ॥ ೧೮೯ ॥

ಭೂತೇಭ್ಯೋಽಪ್ಯಾಹುತಿಂ ದದ್ಯಾದೇವಂ ಮಾಸದ್ವಯಂ ಕ್ರಮಾತ್ ।
ಅನ್ಯೇಷಾಂ ಮಧುರಾಕ್ತೇನ ತಿಲಲಾಜೈರ್ಯಥಾಕ್ರಮಂ ॥ ೧೯೦ ॥

ವಿಷ್ಣುಂ ಚೈವಂ ತು ವಾಯವ್ಯೇ ದುರ್ಗಾಯಾಶ್ಚ ತಥೋತ್ತರೇ ।
ಕಮಲಾಯಾಶ್ಚ ಈಶಾನೇ ಈಶಾನಸ್ಯ ಸಭೂತಕಂ ॥ ೧೯೧ ॥

ಏಕಕುಂಡೇ ತು ಏಕಸ್ಮಿನ್ ಹೋಮಂ ಕುರ್ಯಾದ್ಯಥಾವಿಧಿ ।
ಪಕ್ಷೇ ವೈ ಪಂಚಕುಂಡೇ ತು ಪೂರ್ವಾದೀನಾಂ ಕ್ರಮೇಣ ತು ॥ ೧೯೨ ॥

ಏಕಕುಂಡೇ ಗ್ರಹಾನ್ ಕೃತ್ವಾ ಕೃತ್ವಾ ಬಲಭಿದಾ ಸಹ ।
ದಕ್ಷಿಣೇ ಕ್ರಮತಶ್ಚೈವಂ ಲೋಕೇಶಂ ಚ ತಥೈವ ಚ ॥ ೧೯೩ ॥

---

೧೮೯. ಈ ರೀತಿ ಎರಡು ತಿಂಗಳವರೆಗೂ ಶಿವ, ಬ್ರಹ್ಮ, ವಿಷ್ಣು, ದುರ್ಗಾ ಲಕ್ಷ್ಮೀ, ಸರಸ್ವತಿ ಇವರುಗಳನ್ನು ಉದ್ದೇಶಿಸಿ ಅಗ್ನಿಯಲ್ಲಿ ಆಹುತಿಕೊಡುತ್ತಿರಬೇಕು.

೧೯೦. 'ಪೃಥಿವ್ಯಾ' ಎಂಬ ಮಂತ್ರಪೂರ್ವಕ ಭೂತಗಳನ್ನುದ್ದೇಶಿಸಿ ಅಗ್ನಿಯಲ್ಲಿ ಆಹುತಿಕೊಡಬೇಕು. ಇತರ ದೇವತೆಗಳಿಗೆ ಸಕ್ಕರೆಯಿಂದ ಕೂಡಿದ ಎಳ್ಳು ಅರಳು ಇವುಗಳಿಂದ ಯಥಾಕ್ರಮವಾಗಿ ಆಹುತಿಕೊಡಬೇಕು.

೧೯೧. ಈ ದೇವತೆಗಳಲ್ಲಿ ವಿಷ್ಣುವನ್ನುದ್ದೇಶಿಸಿ, ಅಗ್ನಿಯ ವಾಯುವ್ಯ ಭಾಗದಲ್ಲಿಯೂ ದುರ್ಗೆಯನ್ನೂ, ಲಕ್ಷ್ಮಿಯನ್ನೂ ಉದ್ದೇಶಿಸಿ ಅಗ್ನಿಯ ಉತ್ತರಭಾಗ ದಲ್ಲಿಯೂ ಭೂತಗಣಸಮೇತ ಈಶಾನನನ್ನು ಉದ್ದೇಶಿಸಿ ಈಶಾನ್ಯದಲ್ಲಿಯೂ, ಆಹುತಿ ಕೊಡಬೇಕು.

೧೯೨. ಒಂದುಕುಂಡದಲ್ಲಿ ಒಂದು ದೇವತೆಗೆ ಸಂಬಂಧಿಸಿದ ಹೋಮವನ್ನು ವಿಧಿವತ್ತಾಗಿ ಮಾಡಬೇಕು. ಹಾಗಿಲ್ಲದ ಪಕ್ಷದಲ್ಲಿ ಪೂರ್ವದಿಕ್ಕು ಮೊದಲುಮಾಡಿ ಕೊಂಡು ಐದುಕುಂಡಗಳನ್ನು ರಚಿಸಬೇಕು.

೧೯೩-೧೯೪. ಆಚಾರಶೀಲನಾದವನು ಒಂದುಕುಂಡದಲ್ಲಿ ಕ್ರಮವಾಗಿ ಇಂದ್ರ ಸಹಿತವಾಗಿ ಗ್ರಹಗಳಿಗೂ, ದಕ್ಷಿಣದಿಕ್ಕಿನ ಕುಂಡದಬ್ರಹ್ಮನಿಗೂ, ಪಶ್ಚಿಮದಕುಂಡದಲ್ಲಿ

**ಪಶ್ಚಿಮೇ ಯಸ್ಯ ಯಾಗಶ್ಚ ದುರ್ಗಾಯಾಶ್ಚೋತ್ತರೇ ದಿಶಿ ।**
**ಈಶಾನೇ ಭೂತಯಕ್ಷಾಶ್ಚ ಜುಹುಯಾದ್ದೇಶಿಕೋತ್ತಮಃ ॥ ೧೯೪ ॥**

**ವಿಷ್ಣ್ವಾದಿದೇವತಾನಾಂ ಚ ಅಗ್ರಕುಂಡೇ ವಿಧೀಯತೆ ।**
**ಪ್ರಥಮೇ ದಿವಸೇ ಕುರ್ಯಾದ್ದೇವತಾನಾಂ ಚ ಸ್ಥಾಪನಂ ॥**
**ದ್ವಿತೀಯೇ ಪೂಜನಂ ಕುರ್ಯಾದ್ಧೋಮಂ ಕುರ್ಯಾದ್ಯಥಾವಿಧಿ ॥ ೧೯೫ ॥**

**ಬಲಿದಾನಂ ತೃತೀಯೇ ತು ಚತುರ್ಥೀಕಂ ಚತುರ್ಥಕೇ ।**
**ನೀರಾಜನಂ ಪಂಚಮೇ ತು ಪಂಚಾಹಸಾಧ್ಯಕೋ ವಿಧಿಃ ॥**
**ತ್ರ್ಯಹಸಾಧ್ಯೇ ತೃತೀಯೇ ತು ನವಾಹೇ ತ್ವಥ ಪಂಚಮೇ ॥ ೧೯೬ ॥**

**ಉದಙ್ಮುಖಃ ಪ್ರಾಙ್ಮುಖೋ ವಾಪ್ಯೈಶ್ಯಾನ್ಯಾದಿಕ್ರಮೇಣ ತು ।**
**ಪ್ರಾದಕ್ಷಿಣ್ಯೇನ ಯಜ್ಞಂ ತು ಮಂತ್ರೈಃ ಪರಿಸಮೂಹನಂ ॥**
**ಮಂತ್ರಪೂರ್ವಂ ಸಾಗ್ನಿಕಾನಾಂ ನಿರಗ್ನೇಸ್ತುಷ್ಣಿಕೇನ ತು ॥ ೧೯೭ ॥**

---

ಯಾಗಕ್ಕೆ ಸಂಬಂಧಿಸಿದ ಪ್ರಧಾನದೇವತೆಗೂ, ಉತ್ತರದಕುಂಡದಲ್ಲಿ ದುರ್ಗೆಗೂ, ಈಶಾನ್ಯದ ಕುಂಡದಲ್ಲಿ ಭೂತಾದಿಗಳಿಗೂ, ಅನುಕ್ರಮದಲ್ಲಿ ಹೋಮಮಾಡಬೇಕು.

೧೯೫. ಮೊದಲನೆಯ ಕುಂಡದಲ್ಲಿ ವಿಷ್ಣು ಮುಂತಾದ ದೇವತೆಗಳನ್ನುದ್ದೇಶಿಸಿ ಹೋಮಮಾಡಬೇಕು. ಪ್ರತಿಷ್ಠಾಯಜ್ಞದಲ್ಲಿ ಮೊದಲನೆಯ ದಿವಸ ದೇವತಾಸ್ಥಾಪನ ರೂಪವಾದ ಅಂಕುರಾರ್ಪಣ ಮಾಡಬೇಕು. ಎರಡನೆಯದಿವಸ ಆ ದೇವತೆಗಳಿಗೆಲ್ಲಾ ವಿಧಿವತ್ತಾಗಿ ಪೂಜೆಮಾಡಿ ಅನಂತರ ಹೋಮಮಾಡಬೇಕು.

೧೯೬-೧೯೭. ಮೂರನೆಯದಿನ ಬಲಿಪ್ರದಾನವನ್ನೂ ನಾಲ್ಕನೆಯದಿನ ಅವ ಭೃಥವನ್ನೂ, ಐದನೆಯದಿನ ನೀರಾಜನವನ್ನೂ ಮಾಡಿಹೀಗೆ ಪ್ರತಿಷ್ಠಾಯಾಗವನ್ನು ಐದು ದಿನಗಳಲ್ಲಿ ನಡೆಯಿಸಿ ಮುಗಿಸಬಹುದು.

೧೯೭. ಮೂರೇದಿನದಲ್ಲಿ ಮಾಡುವ ಯಜ್ಞವಾದರೆ ಮೂರನೇದಿನದಲ್ಲಿ ಪೂಜಾಹೋಮಾದಿಗಳನ್ನೂ ಒಂಭತ್ತುದಿನದಲ್ಲಿ ಮಾಡುವ ಯಜ್ಞವಾದರೆ ಐದನೇದಿನ ದಲ್ಲಿ ಹೋಮಾದಿಗಳನ್ನೂ ಮಾಡಬಹುದು. ಆಹಿತಾಗ್ನಿಯಾಗಿ ಆ ಅಗ್ನಿಯನ್ನೇ ಇಟ್ಟು ಉತ್ತರಮುಖವಾಗಿಯೋ, ಪೂರ್ವಮುಖವಾಗಿಯೋ ಕುಳಿತು ಕ್ರಮವಾಗಿ ಈಶಾನ್ಯ ದಿಕ್ಕಿನಿಂದ ಆರಂಭಿಸಿ ಪ್ರದಕ್ಷಿಣೆಯಾಗಿ ಅಗ್ನಿಯನ್ನು ಮಂತ್ರಪೂರ್ವಕವಾಗಿ ಪರ್ಯುಕ್ಷಣ ಪರಿಸಮೂಹನಾದಿಗಳಿಂದ ಸಂಸ್ಕರಿಸಬೇಕು.

ತ್ರಿಕುಶೇನ ಮಹಾಯಾಗೇ ವಿವಾಹಾದೌ ದ್ವಿಪತ್ರಕಂ ।
ವೈಶ್ವದೇವೇ ತ್ವೇಕಪತ್ರಮಿತಿ ಸಾಧಾರಣೋ ವಿಧಿಃ ॥ ೧೯೮ ॥

ದಿಗ್ವಿದಿಕ್ಷು ಪರಿಸ್ತೀರ್ಯ ಮಹಾಯಾಗೇಷು ಸರ್ವದಾ ।
ದಿಕ್ಷು ಮಾತ್ರಂ ನಿತ್ಯಕೇ ಚ ವಿಶ್ವೇದೇವೇ ತಥೈವ ಚ ॥ ೧೯೯ ॥

ಅಕೃತ್ವಾ ಕರ್ಮ ನಿತ್ಯಂ ಚ ವೃಥಾ ನೈಮಿತ್ತಿಕಂ ಭವೇತ್ ।
ತಸ್ಮಾತ್ಫಲಾದ್ಯೈರಪಿ ತತ್ಕೃತ್ವಾ ನೈಮಿತ್ತಿಕಂ ಚರೇತ್ ॥ ೨೦೦ ॥

ಪ್ರಾಯಶ್ಚಿತ್ತೇ ವೈಶ್ವದೇವೇ ಸಾಯಂ ಪ್ರಾತಃ ಪ್ರತೀಷು ಚ ॥ ೨೦೧ ॥

ಮಾರಣೋಚ್ಚಾಟಹೋಮೇಷು ತಥಾ ಸಂಕಲ್ಪಿತಾಕೃತೀ ।
ಪ್ರತ್ಯವಾಯಕುಲೇ ಕ್ವಾಪಿ ತತ್ರ ನಿತ್ಯಾಕೃತಿಂ ವಿನಾ ॥ ೨೦೨ ॥

---

೧೯೮. ಆಹಿತಾಗ್ನಿಯಲ್ಲದವನು ತುಷಾಗ್ನಿಯನ್ನು ಏರ್ಪಡಿಸಿಕೊಂಡು ಪರ್ಯುಕ್ಷಣಾದಿ ಸಂಸ್ಕಾರಮಾಡಬೇಕು. ಮಹಾಯಾಗದಲ್ಲಿ ಮೂರುದರ್ಭೆಗಳಿಂದ ಅಗ್ನಿಯನ್ನು ಸಂಸ್ಕರಿಸಬೇಕು. ವಿವಾಹಾದಿಗಳಲ್ಲಿ ಎರಡುದರ್ಭೆಗಳಿಂದಲೂ ವೈಶ್ವದೇವ ಹೋಮದಲ್ಲಿ ಒಂದೇದರ್ಭೆಯಿಂದಲೂ ಸಂಸ್ಕರಿಸಿ ಹೋಮಮಾಡಬೇಕೆಂಬ ವಿಧಿಯು ಸರ್ವಸಾಮಾನ್ಯವಾಗಿದೆ.

೧೯೯. ಮಹಾಯಾಗಾದಿಗಳಲ್ಲಿ ಯಾವಾಗಲೂ ನಾಲ್ಕು ದಿಕ್ಕುಗಳು ನಾಲ್ಕು ವಿದಿಕ್ಕುಗಳಲ್ಲಿ ಸಹ ಪರಿಸ್ತರಣವನ್ನು ಹಾಕಬೇಕು. ನಿತ್ಯಹೋಮದಲ್ಲಿ ನಾಲ್ಕುದಿಕ್ಕಿನಲ್ಲಿ ಮಾತ್ರ ಪರಿಸ್ತರಣವಿದ್ದರೆ ಸಾಕು. ವೈಶ್ವದೇವ ಹೋಮದಲ್ಲಿಯೂ ಅದೇ ರೀತಿ ಇರಬೇಕು.

೨೦೦. ನಿತ್ಯಕರ್ಮವನ್ನು ಆಚರಿಸದೆ ಮಾಡಿದ ನೈಮಿತ್ತಿಕಕರ್ಮವು ನಿಷ್ಫಲವಾಗುವುದು. ಆದುದರಿಂದ ನೈಮಿತ್ತಿಕಕರ್ಮ ಫಲಾಕಾಂಕ್ಷೆಗಾಗಿಯಾದರೂ ನಿತ್ಯಕರ್ಮವನ್ನು ಮಾಡಿ ಅನಂತರವೇ ನೈಮಿತ್ತಿಕವನ್ನು ಮಾಡಬೇಕು.

೨೦೧. ಪ್ರಾಯಶ್ಚಿತ್ತಹೋಮ, ವೈಶ್ವದೇವಹೋಮ ಇವನ್ನು ಪ್ರತಿದಿನವೂ ಬೆಳಿಗ್ಗೆ ಸಂಜೆ ಎರಡು ವೇಳೆಯೂ ಆಚರಿಸಬೇಕು.

೨೦೨-೨೦೩. ಮಾರಣಹೋಮ, ಗೃಹೋಚ್ಚಾಟನಹೋಮಗಳಲ್ಲಿ ಅದೇ ರೀತಿ ಸಂಕಲ್ಪಿಸಿ ಮಾಡಬೇಕು. ಮಧ್ಯೆ ಎಲ್ಲಿಯಾದರೂ ವಿಘ್ನ ಸಂಭವಿಸಿದರೆ ಅಂಥ ಸಂದರ್ಭದಲ್ಲಿ ಪೂರ್ಣಸಂಖ್ಯೆಯಲ್ಲಿ ಮಾಡದೇ ಇದ್ದರೂ, ಐವತ್ತು ಹೋಮವನ್ನಾದರೂ

**ಶತಾರ್ಧಂ ಜುಹುಯಾದ್ಯತ್ರ ತತ್ರ ನಿತ್ಯಂ ವಿವರ್ಜಯೇತ್ ।**
**ತೂರ್ಷ್ಣಹೋಮಂ ತತಃ ಕೃತ್ವಾ ತೂಷ್ಣೀಮೇವ ಜಿತೇಂದ್ರಿಯಃ ॥ ೨೦೩ ॥**

**ಪ್ರಜಪೇದಿಂದ್ರಮಗ್ನಿಂ ಚ ಸೋಮಾಯ ಚ ಯಥಾಕ್ರಮಂ ।**
**ತತಸ್ತು ಸಮಿಧಾಹೋಮಂ ವ್ಯಾಹೃತಿಸ್ತದನಂತರಂ ॥ ೨೦೪ ॥**

**ಭೂರ್ಭುವಃ ಸ್ವಾಹೇತಿ ತಥಾ ತ್ವನ್ನ ಇತ್ಯಾದಿಪಂಚಕಂ ।**
**ಅಂತೇ ಸ್ವಿಷ್ಟಕೃತಂ ದದ್ಯಾದ್ವಿಧಾನಂ ತಸ್ಯ ಭೋಃ ಶೃಣು ॥ ೨೦೫ ॥**

**ಘೃತಾಹುತಿಂ ಸ್ವಿಷ್ಟಕೃಚ್ಚ ದ್ವಿಜಸಂಸ್ಕಾರಕರ್ಮಸು ।**
**ಘೃತೈಃ ಸ್ವಿಷ್ಟಕೃತಂ ದದ್ಯಾದ್ಯಾಗಾದೌ ಪರಿವರ್ಜಯೇತ್ ॥ ೨೦೬ ॥**

**ಸರ್ವೌಷಧ್ಯುದಕಸ್ನಾನಂ ಕರಿದಂತೋತ್ಥಮೃತ್ತಯಾ ।**
**ರಥ್ಯಾವಾಲ್ಮೀಕಗೋಷ್ಠಸ್ಯ ತಥಾಶ್ವಸ್ಯ ಖುರಸ್ಯ ಚ ॥ ೨೦೭ ॥**

---

ಮಾಡಬೇಕು. ಆನಂತರ ಜಿತೇಂದ್ರಿಯನಾಗಿ ಮೌನದಿಂದ ಮಂತ್ರರಹಿತನಾಗಿ ಕೊನೆಯ ಹೋಮವನ್ನು ಮಾಡಿ ನಿತ್ಯಹೋಮವನ್ನು ಮಾಡದೆ ಬಿಟ್ಟುಬಿಡಬೇಕು.

೨೦೪. ಅನಂತರ ಕ್ರಮವಾಗಿ ಇಂದ್ರ, ಅಗ್ನಿ, ಸೋಮ ಇವರ ಮಂತ್ರಗಳನ್ನು ಜಪಮಾಡಬೇಕು. ಬಳಿಕ ಸಮಿಧಾಹೋಮವನ್ನೂ ಆ ಮೇಲೆ ವ್ಯಾಹೃತಿಹೋಮವನ್ನೂ ಮಾಡತಕ್ಕದ್ದು.

೨೦೫. 'ತ್ವನ್ನ' ಎಂಬಿವೇ ಮೊದಲಾದ ಐದು ಮಂತ್ರಗಳಿಂದಸಮಿಧಾಹೋಮವನ್ನು ಮಾಡಿ 'ಭೂಃ ಭುವಃ ಸ್ವಃ' ಎಂಬ ಮಂತ್ರದಿಂದ ವ್ಯಾಹೃತಿಹೋಮವನ್ನು ಮಾಡಬೇಕು. ಆ ಮೇಲೆ ಸ್ವಿಷ್ಟಕೃತ್ ಹೋಮಮಾಡಬೇಕು. ಓ ವಿಪ್ರರೇ! ಅದರ ವಿಧಿಯನ್ನು ಹೇಳುತ್ತೇನೆ ಕೇಳೋಣವಾಗಲಿ.

೨೦೬ ಉಪನಯನಾದಿಕರ್ಮಗಳಲ್ಲಿ ಸ್ವಿಷ್ಟಕೃತ್ ಹೋಮವನ್ನು ಕೇವಲ ಆಜ್ಯಾಹುತಿಯಿಂದ ಮಾಡಬೇಕು. ಯಾಗಾದಿಕರ್ಮಗಳಲ್ಲಿ ಸ್ವಿಷ್ಟಕೃತ್ ಹೋಮವನ್ನು ಕೇವಲ ಆಜ್ಯಾಹುತಿಯಿಂದ ಮಾಡತಕ್ಕದ್ದಲ್ಲ.

೨೦೭. ಸ್ನಾನಮಾಡುವ ಕಲಶದ ಉದಕದಲ್ಲಿ ಸಮಸ್ತಮೂಲಿಕೆಗಳು, ಆನೆಯ ಕೊಂಬಿನಿಂದ ಮಿಾಟಲ್ಪಟ್ಟ ಮಣ್ಣು, ರಥದ ಗಾಲಿಯಮಣ್ಣು, ಹುತ್ತದ ಮಣ್ಣು, ಕುದುರೆಯ ಗೊರಸಿನಿಂದ ಎದ್ದಮಣ್ಣು

ತ್ರಿಗಂಧಂ ಚ ತ್ರಿಶೀತಂ ಚ ಕುಶಮೂಲಸ್ಯ ಮೃತ್ತಿಕಾಃ ।
ನಿಕ್ಷೇಪೇತ್ ಸ್ನಾನಕುಂಭೇಷು ಆಚಾರ್ಯಾದೀಂಶ್ಚ ಸ್ಥಾಪಯೇತ್ ॥ ೨೦೮ ॥

ಯಜಮಾನಃ ಪುರಃ। ಕೃತ್ವಾ ದಂತಕಾಷ್ಠಪುರಃಸರಂ ।
ರಾತ್ರೌ ಚ ಭಕ್ಷ್ಯಭೋಜ್ಯಾದ್ಯೈಃ ಪರಿತೋಷ್ಯ ಯವಾಕ್ಷತಂ ॥ ೨೦೯ ॥

ಕೃತ್ವಾ ಯಥೋಕ್ತಕಾಲೇನ ಪೂಜಯೇತ್ತೈಲಧಾರಯಾ ।
ತತಃ ಪ್ರಭಾತೇ ವಿಮಲೇ ಸ್ನಾನಂ ಕುರ್ಯಾದ್ಯಥಾವಿಧಿ ॥ ೨೧೦ ॥

ಸ್ನಾನಮಬ್ದೈವತೈರ್ಮಂತ್ರೈಃ ಸೂಕ್ತೇನ ಪುರುಷೇಣ ತು ।
ವಾರುಣೇನ ಚ ಸೂಕ್ತೇನ ಸುರಾಸ್ತ್ವಾದಿ ಯಥಾಕ್ರಮಂ ॥ ೨೧೧ ॥

ಸುರಾಸ್ತ್ವಾಮಭಿಷಿಂಚಂತು ಬ್ರಹ್ಮವಿಷ್ಣುಮಹೇಶ್ವರಾಃ ।
ವಾಸುದೇವೋ ಜಗನ್ನಾಥಃ ತಥಾ ಸಂಕರ್ಷಣಃ ಪ್ರಭುಃ ॥ ೨೧೨ ॥

ಆಖಂಡಲೋಽಗ್ನಿರ್ಭಗವಾನ್ ಯಮೋ ವೈ ನಿಋುತಿಸ್ತಥಾ ।
ವರುಣಃ ಪವನಶ್ಚೈವ ಧನಾಧ್ಯಕ್ಷಸ್ತಥಾ ಶಿವಃ ॥ ೨೧೩ ॥

---

೨೦೮-೨೧೧. ದರ್ಭೆಯ ಬುಡದಮೃತ್ತಿಕೆ ಎಂಬ ಪಂಚಮೃತ್ತಿಕೆಗಳು ಮೂರು ವಿಧವಾದ ಗಂಧಗಳು ಮೂರು ಬಗೆಯ ಶೀತಲವಸ್ತುಗಳು ಇವುಗಳೆಲ್ಲವನ್ನೂ ಹಾಕಿರಬೇಕು. ಯಜಮಾನನು ದಂತಕಾಷ್ಠ ಮೊದಲಾದ್ದರ ಸಮೇತ ಆಚಾರ್ಯರೇ ಮೊದಲಾದವರನ್ನು ಮುಂದುಮಾಡಿಕೊಂಡು ಬಂದು ಸ್ನಾನವನ್ನಾಚರಿಸಬೇಕು. ಆ ರಾತ್ರಿ ಭಕ್ಷ್ಯ ಭೋಜ್ಯ ಮೊದಲಾದುವುಗಳಿಂದ ಅವರನ್ನು ತೃಪ್ತಿಪಡಿಸಿ ಯವಾಕ್ಷತೆಯನ್ನು ಸಿದ್ಧಮಾಡಿ ಉಕ್ತವಾದ ಕಾಲದಲ್ಲಿ ತೈಲಧಾರೆಪೂರ್ವಕ ಪೂಜಿಸಬೇಕು. ಮಾರನೇ ಬೆಳಿಗ್ಗೆ ವಿಧಿಪ್ರಕಾರ ಶುದ್ಧೋದಕ ಸ್ನಾನವಾಗಬೇಕು. ಯಜಮಾನನ ಸ್ನಾನಕಾಲದಲ್ಲಿ ಆಚಾರ್ಯರು ಜಲದೇವತಾಕವಾದ ಸೂಕ್ತಮಂತ್ರಗಳು, ಪುರುಷಸೂಕ್ತ, ವರುಣಸೂಕ್ತ ಇವುಗಳನ್ನು ಪಠಿಸಬೇಕು. ಮತ್ತು ಇಲ್ಲಿ ಮುಂದೆ ಹೇಳುವ 'ಸುರಾಸ್ತ್ವಾಂ' ಎಂಬ ಮಂತ್ರ ಮೊದಲುಗೊಂಡು ಕ್ರಮವಾಗಿ ಎಲ್ಲವನ್ನೂ ಹೇಳಬೇಕು. (ಆ ಮಂತ್ರದ ಅರ್ಥವು ಈರೀತಿ ಇದೆ)

೨೧೨-೨೧೫. ಬ್ರಹ್ಮ, ವಿಷ್ಣು, ಮಹೇಶ್ವರ, ಜಗತ್ಪತಿಯಾದ ವಾಸುದೇವ, ಪ್ರಭುವಾದ ಸಂಕರ್ಷಣ, ಇವರೂ, ಇಂದ್ರ, ಅಗ್ನಿ, ಯಮ, ನಿಋುತಿ, ವರುಣ, ವಾಯು, ಕುಬೇರ, ಈಶಾನ, ಎಂಬ ದಿಕ್ಪಾಲಕರೂ, ಬ್ರಹ್ಮ ಮೊದಲಾದ ದೇವತೆಗಳೂ,

**ಬ್ರಹ್ಮಣಾಸಹಿತಃ ಶೇಷೋ ದಿಕ್ಪಾಲಾಃ ಪಾಂತು ತೇ ಸದಾ ।**
**ಕೀರ್ತಿರ್ಲಕ್ಷ್ಮೀರ್ಧೃತಿರ್ಮೇಧಾ ಪುಷ್ಟಿಃ ಶ್ರದ್ಧಾ ಕ್ರಿಯಾ ಮತಿಃ ॥ ೨೧೪ ॥**

**ಬುದ್ಧಿರ್ಲಜ್ಜಾ ವಪುಃ ಶಾನ್ತಿಸ್ತುಷ್ಟಿಃ ಕಾಂತಿಶ್ಚ ಮಾತರಃ ।**
**ಏತಾಸ್ತ್ವಾಮಭಿಷಿಂಚಂತು ದೇವಪತ್ನ್ಯಃ ಸಮಾಹಿತಾಃ ॥ ೨೧೫ ॥**

**ಆದಿತ್ಯಶ್ಚಂದ್ರಮಾ ಭೌಮೋ ಬುಧಜೀವಸಿತಾರ್ಕಜಾಃ ।**
**ಗ್ರಹಾಸ್ತ್ವಾಮಭಿಷಿಂಚಂತು ರಾಹುಃ ಕೇತುಶ್ಚ ತರ್ಪಿತಾಃ ॥ ೨೧೬ ॥**

**ದೇವದಾನವಗಂಧರ್ವಾ ಯಕ್ಷರಾಕ್ಷಸಪನ್ನಗಾಃ ।**
**ಋಷಯೋ ಮನವೋ ದೇವಾ ದೇವಮಾತರ ಏವ ಚ ॥ ೨೧೭ ॥**

**ದೇವಪತ್ನ್ಯೋ ದ್ರುಮಾ ನಾಗಾ ದೈತ್ಯಾಶ್ಚಾಪ್ಸರಸಾಂ ಗಣಾಃ ।**
**ಅಸ್ತ್ರಾಣಿ ಸರ್ವಶಸ್ತ್ರಾಣಿ ರಾಜಾನೋ ವಾಹನಾನಿ ಚ ॥ ೨೧೮ ॥**

**ಔಷಧಾನಿ ಚ ರತ್ನಾನಿ ಕಾಲಸ್ಯಾವಯವಾಶ್ಚ ಯೇ ।**
**ಸರಿತಃ ಸಾಗರಾಃ ಶೈಲಾಸ್ತೀರ್ಥಾನಿ ಜಲದಾ ನದಾಃ ॥ ೨೧೯ ॥**

---

ಆದಿಶೇಷನೂ ನಿನಗೆ ಅಭಿಷೇಕಮಾಡಲಿ, ಮತ್ತು ಯಾವಾಗಲೂ ನಿನ್ನನ್ನು ರಕ್ಷಿಸಲಿ, ಕೀರ್ತಿ, ಲಕ್ಷ್ಮಿ, ಧೃತಿ, ಮೇಧಾ, ಪುಷ್ಟಿ, ಶ್ರದ್ಧಾ, ಕ್ರಿಯಾ, ಮತಿ, ಬುದ್ಧಿ, ಲಜ್ಜಾ, ವಪು, ಶಾಂತಿ, ತುಷ್ಟಿ,ಕಾಂತಿ ಎಂಬ ಮಾತೃದೇವತೆಗಳೂ, ದೇವಪತ್ನಿಯರೂ ಶಾನ್ತಮನಸ್ಸುಳ್ಳವರಾಗಿ ನಿನಗೆ ಅಭಿಷೇಕಮಾಡಲಿ.

೨೧೬.೨೧೯. ಸೂರ್ಯ, ಚಂದ್ರ, ಅಂಗಾರಕ, ಬುಧ,ಗುರು, ಶುಕ್ರ, ಶನಿ,ರಾಹು ಕೇತು, ಎಂಬ ನವಗ್ರಹಗಳು ಸಂತೃಪ್ತರಾಗಿ ನಿನಗೆ ಅಭಿಷೇಕಮಾಡಲಿ. ದೇವತೆಗಳು, ರಾಕ್ಷಸರು, ಗಂಧರ್ವರು, ಯಕ್ಷರುಗಳು, ರಕ್ಷಸ್ಸುಗಳು ಪನ್ನಗರು, ಋಷಿಗಳು, ಮನುಗಳು, ಮೊದಲಾದ ದೇವತೆಗಳು, ದೇವಮಾತೆಯರು, ದೇವಪತ್ನಿಯರು, ವೃಕ್ಷಾಭಿಮಾನದೇವತೆಗಳು, ನಾಗರು, ದೈತ್ಯರು,-ಅಪ್ಸರಸ್ತ್ರೀಯರಸಮೂಹ ಇವರೆಲ್ಲ ನಿನಗೆ ಅಭಿಷೇಕಮಾಡಲಿ. ಅಸ್ತ್ರಗಳು, ಸಮಸ್ತಶಸ್ತ್ರಗಳು, ರಾಜರುಗಳು, ವಾಹನಗಳು, ಔಷಧಿಗಳು ರತ್ನಗಳು, ಕಾಲದ ಅವಯವಗಳಾದ ಮುಹೂರ್ತ, ಕ್ಷಣ, ಮಾಸ ವತ್ಸರಾದಿಗಳು, ಸರಿತ್ತು (ನದಿ) ಗಳು, ನದ (ಗಂಡುನದಿ) ಗಳು, ಸಮುದ್ರಗಳು ,ಪರ್ವತಗಳು, ಪುಣ್ಯತೀರ್ಥಗಳು, ಮೇಘಗಳು.

ಏತೇ ತ್ವಾಮಭಿಷಿಂಚಂತು ಸರ್ವಕಾಮಾರ್ಥಸಿದ್ಧಯೇ ।
ಸ್ನಾನಂ ಸಮಾಪ್ಯ ವಿಧಿವತ್ಸ್ವಗಣೇನಾನುಲೇಪಯೇತ್ ॥ ೨೨೦ ॥

ಗವಾಮಷ್ಟೋತ್ತರಶತಂ ತದರ್ಧಂ ಚಾಥ ವಿಂಶತಿಂ ।
ಆಚಾರ್ಯಾಯಾಭಿರೂಪಾಯ ಪ್ರದದ್ಯಾದಭಿಪೂಜಯನ್ ॥ ೨೨೦ ॥

ತತಃ ಪ್ರಭಾತೇ ವಿಮಲೇ ಜಲೇ ಸಮುವತಾರಯೇತ್ ।
ಶುದ್ಧಾಂ ಚ ಕಪಿಲಾಂ ದೋಗ್ಧ್ರೀಂ ಘಂಟಾಚಾಮರವರ್ಜಿತಾಂ॥ ೨೨೨ ॥

ಸಾಮಗಾಯ ತತೋ ದದ್ಯಾತ್ಸುವರ್ಣದಕ್ಷಿಣಾನ್ವಿತಾಂ ।
ಯೂಪಮಾದಾಯ ಸಂಸ್ಥಾಪ್ಯ ಸ್ನಾಪಯೇದ್ವಾರುಣಂ ಜಪನ್ ॥ ೨೨೩ ॥

ಅಚ್ಛೇವತೇನ ಮಂತ್ರೇಣ ಗಾಯತ್ರ್ಯಾ ತದನಂತರಂ ।
ರೋಚನಾಭಿಸ್ತ್ರಿರತ್ನೇನ ತಥಾ ಕುಂಭೋದಕೇನ ಚ ॥ ೨೨೪ ॥

---

೨೨೦. ಇವೆಲ್ಲವೂ ನಿನ್ನ ಸಮಸ್ತ ಇಷ್ಟಾರ್ಥಗಳ ಸಿದ್ಧಿಗೋಸ್ಕರವಾಗಿ ನಿನಗೆ ಅಭಿಷೇಕಮಾಡಲಿ. ಎಂದು ಹೇಳಿದಮೇಲೆ ವಿಧಿಪ್ರಕಾರ ಸ್ನಾನಕರ್ಮವನ್ನು ಮುಗಿಯಿಸಿ ತನ್ನ ಇಷ್ಟಾನುಸಾರ ಅನುಲೇಪನಮಾಡಿಕೊಳ್ಳಬೇಕು

೨೨೧. ಅನಂತರ ತನ್ನ ಆಚಾರ್ಯರಿಗೆ ಪೂಜೆಮಾಡಿ, ನೂರೆಂಟು ಗೋವುಗಳನ್ನೋ, ಅಥವಾ ಅದರ ಅರ್ಧದಷ್ಟನ್ನೋ, ಕೊನೆಯಪಕ್ಷ ಇಪ್ಪತ್ತುಗೋವನ್ನೋ, ಕೊಡಬೇಕು.

೨೨೨ ೨೨೩. ಕಪಿಲವರ್ಣವುಳ್ಳದ್ದಾಗಿ ಶ್ರೇಷ್ಠವೆನಿಸಿದುದೂ, ಗಂಟೆ,ಚಾಮರ ಮುಂತಾದ ಅಲಂಕಾರಗಳಿಲ್ಲದುದೂ ಆದ ಎಳಗರುವಿನ ಹಸುವನ್ನು ಸುವರ್ಣನಾಣ್ಯದ ದಕ್ಷಿಣಾಸಮೇತವಾಗಿ ಸಾಮವೇದಜ್ಞನಾದ ಬ್ರಾಹ್ಮಣನಿಗೆ ಕೊಡಬೇಕು. ಅನಂತರ ಮಾರನೆಯದಿನ ಪ್ರಾತಃಕಾಲ ಯೂಪವನ್ನು ತಂದು ಇರಿಸಿ ವರುಣಸೂಕ್ತವನ್ನು ಪಠಿಸುತ್ತಾ ಪರಿಶುದ್ಧವಾದ ಜಲದಿಂದ ಅದಕ್ಕೆ ಸ್ನಾನಮಾಡಿಸಬೇಕು.

೨೨೪. ಮೊದಲು ಅಚ್ಛೇವತೇನ ಎಂಬ ಮಂತ್ರದಿಂದಲೂ, ಅನಂತರ ಗಾಯತ್ರೀಮಂತ್ರಪೂರ್ವಕವಾಗಿಯೂ ಗೋರೋಚನ, ಮೂರುಬಗೆಯ ರತ್ನಗಳು ಇವನ್ನು ಕಲಶೋದಕದಲ್ಲಿ ಹಾಕಿ ಯೂಪಸ್ತಂಭಕ್ಕೆ ಅಭಿಷೇಕಮಾಡಬೇಕು.

**ಪರ್ವತಾಗ್ರಮೃದಾ ತೋಯನಾಗವಲ್ಮೀಕಜಾತಯಾ ।**
**ಗಜದಂತಮೃದಾ ಚೈವ ಕುಶಮೂಲಮೃದಾ ತಥಾ　　　॥ ೨೨೫ ॥**

**ಪುಷ್ಪೋದಕೇನ ಶಂಖೇನ ತಥಾ ರತ್ನೋದಕೇನ ಚ ।**
**ದಧ್ಯಕ್ಷತೇನ ದುಗ್ಧೇನ ಘಟೇನ ಶತಧಾರಯಾ　　　॥ ೨೨೬ ॥**

**ಸುಗಂಧೇನ ತ್ರಿಶೀತೇನ ವಿಲಿಪ್ಯ ಚ ಸಮಾಹಿತಃ ।**
**ದಾಪಯೇತ್ಕಾಂಸ್ಯಮೂಲಂ ಚ ದದ್ಯಾಲ್ಲೋಹಮಯಂ ಚ ವಾ ॥ ೨೨೭ ॥**

**ಮಾಲ್ಯವಸ್ತ್ರೈರಲಂಕೃತ್ಯ ಪೂಜಯೇದ್ಗಂಧಚಂದನೈಃ ।**
**ಈಶಾವಾ ಇತಿ ಮಂತ್ರೇಣ ದದ್ಯಾತ್ಪುಷ್ಪಾಂಜಲಿತ್ರಯಂ　　　॥ ೨೨೮ ॥**

**ಪುನಸ್ತ್ವಾದಿತಿ ಮಂತ್ರೇಣ ಪುನಃ ಪುಷ್ಪಂ ಸಮುತ್ಸೃಜೇತ್ ।**
**ಪ್ರಾದೇಶಮಾತ್ರವಿಸ್ತಾರಂ ಮಧ್ಯೇ ವೃತ್ತಂ ಷಡಂಗುಲಂ　　　॥ ೨೨೯ ॥**

---

೨೨೫. ಪರ್ವತದ ತುದಿಯ ಮೃತ್ತಿಕೆ, ನೀರೊಳಗಿನ ಮೃತ್ತಿಕೆ, ಹಾವಿರುವ ಹುತ್ತದಮೃತ್ತಿಕೆ, ಆನೆಯು ಕೋಡಿನಿಂದ ಮಾಟಿದ ಮೃತ್ತಿಕೆ, ದರ್ಭೆಯಬೇರಿನ ಮೃತ್ತಿಕೆ. ಇವನ್ನೂ ಸೇರಿಸಿದ

೨೨೬. ಪುಷ್ಪಸಹಿತವಾದಜಲ, ಶಂಖಜಲ, ರತ್ನಯುಕ್ತವಾದಜಲ, ಮೊಸರು ಅಕ್ಷತೆ, ಹಾಲು ಇವುಗಳನ್ನೂ ಧಾರಾಪಾತ್ರೆಯಿಂದ ನೂರುಧಾರೆಯಾಗಿ ಬೀಳುವಂತೆ ಹುಯ್ಯಬೇಕು.

೨೨೭. ಯೂಪಕ್ಕೆ ಸುಗಂಧದ್ರವ್ಯವನ್ನೂ, ತ್ರಿಶೀತದ್ರವ್ಯವನ್ನೂ, ಸಮಾಧಾನ ಚಿತ್ತನಾಗಿ ಲೇಪನಮಾಡಿ, ಕಂಚಿನಿಂದಲೋ, ಅಥವಾ ಇತರ ಲೋಹದಿಂದಲೋ ಮಾಡಿದ ಯೂಪಪೀಠವನ್ನು ಅದಕ್ಕೆ ತೊಡಿಸಬೇಕು.

೨೨೮. ವಸ್ತ್ರಗಳು, ಹೂಮಾಲಿಕೆಗಳು ಇವುಗಳಿಂದ ಅಲಂಕರಿಸಿ ಗಂಧಾದಿಗಳಿಂದ ಪೂಜಿಸಬೇಕು. 'ಈಶಾವಾ' ಎಂಬ ಮಂತ್ರಪೂರ್ವಕವಾಗಿ ಮೂರುಸಾರಿ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು.

೨೨೯. ಅನಂತರ 'ಪುನಸ್ತ್ವಾ' ಎಂಬ ಮಂತ್ರದಿಂದ ಮತ್ತೆ ಪುಷ್ಪವನ್ನು ಅರ್ಪಿಸಬೇಕು. ಒಂದು ಚೋಟಿನಷ್ಟು ವಿಸ್ತಾರದ ಮಧ್ಯೆ ಆರುಅಂಗುಲ ವ್ಯಾಸದ ವೃತ್ತಾಕಾರವುಳ್ಳದಾಗಿ

ಕಾಂಸ್ಯಚಕ್ರಸ್ಯ ಮಾನಂ ತು ಊರ್ಧ್ವಂ ಯದ್ದ್ವಾದಶಾಂಗುಲಂ ।
ತದೂರ್ಧ್ವೇ ವಿಲಿಖೇಚ್ಛೂಲಂ ಚತುರಂಗುಲಮಾನತಃ ॥ ೨೩೦ ॥

ಅಂಗುಷ್ಠಹೀನೇ ಲೋಹಸ್ಯ ತತ್ರ ಶೂಲಂ ನ ಕಾರಯೇತ್ ।
ತತೋ ಮಂಗಲಪೂರ್ವೇ ತು ದ್ವಿಜಾತೀನಾಂ ಮತೇನ ಚ ॥ ೨೩೧ ॥

ಸಮುತ್ಸೃಜೇಚ್ಚ ಪ್ರಾಸಾದಂ ತಡಾಗಂ ಚ ವಿಶೇಷತಃ ।
ಚತುರ್ದರ್ಭಂ ಗೃಹೀತ್ವಾ ತು ಈಶಾನಾಭಿಮುಖೇನ ತು ॥
ಸಮುತ್ಸೃಜೇತ್ತತಃ ಪಶ್ಚಾದ್ವಾಕ್ಯಮೇತದುದೀರಯೇತ್ ॥ ೨೩೨ ॥

ಓಮಿತ್ಯಾದಿ ಶ್ರೀಕೃಷ್ಣದ್ವೈಪಾಯನಾಭಿಧಾನ ವೇದವ್ಯಾಸ ಪ್ರಣೀತ ಭವಿಷ್ಯ ಪುರಾಣೋಕ್ತ ಫಲಪ್ರಾಪ್ತಿಕಾಮಶ್ಚತುಷ್ಕೋಣಾದ್ಯವಚ್ಛಿನ್ನ ಮತ್ಕಾರಿತ ಪುಷ್ಕರಿಣೀ ಜಲಮೇತದೂರ್ಜಿತಂ ಗಂಧಪುಷ್ಪಾದ್ಯರ್ಚಿತಂ ವರುಣದೈವತಂ ಸರ್ವಸತ್ವೇಭ್ಯಃ ಸ್ನಾನಾವಗಾಹನಾರ್ಥಮಹಮುತ್ಸೃಜೆ । ॥ ೨೩೩ ॥

---

೨೩೦-೨೩೩. ಮೇಲ್ಭಾಗದಲ್ಲಿ ಹನ್ನೆರಡಂಗುಲ ಅಗಲ ಇರುವಂತಹ ಒಂದು ಕಂಚಿನ ಚಕ್ರವನ್ನು ಮಾಡಬೇಕು. ಅದರ ಮೇಲುಗಡೆ ನಾಲ್ಕುಅಂಗುಲ ಅಳತೆಯುಳ್ಳ ಒಂದು ಶೂಲವನ್ನು ರಚಿಸಬೇಕು. ಲೋಹವು ಒಂದು ಅಂಗುಷ್ಟದಷ್ಟು ಅಳತೆ ಕಮ್ಮಿಯಿದ್ದರೂ ಶೂಲವನ್ನು ರಚಿಸಬಾರದು. ಆ ಮೇಲೆ ಬ್ರಾಹ್ಮಣರ ಶುಭಕರವಾದ ಅನುಜ್ಞೆಯನ್ನು ಪಡೆದು ನಾಲ್ಕು ದರ್ಭೆಗಳನ್ನು ಕೈಯಲ್ಲಿ ತೆಗೆದುಕೊಂಡು, ಈಶಾನ್ಯಾಭಿಮುಖವಾಗಿ ನಿಂತು ಈ ಮುಂದೆ ಹೇಳುವಂತೆ ಎಂದರೆ 'ಶ್ರೀಕೃಷ್ಣ ದ್ವೈಪಾಯನನೆಂಬ ಹೆಸರುಳ್ಳ ಶ್ರೀವೇದವ್ಯಾಸರಿಂದ ರಚಿತವಾದ ಭವಿಷ್ಯ ಪುರಾಣದಲ್ಲಿ ಹೇಳಿರುವರೀತಿ ಫಲವನ್ನು ಹೊಂದಲು ಅಪೇಕ್ಷೆಯುಳ್ಳವನಾಗಿ ನಾನು ರಚಿಸಿರುವ ಚತುಷ್ಕೋಣಾಕೃತಿಯಾದ ಈ ಕೊಳದ (ಕಲ್ಯಾಣಿ) ಲ್ಲಿ ವರುಣನನ್ನು ಉದ್ದೇಶಿಸಿ ಗಂಧ ಪುಷ್ಪಾದಿ ಸಂಭಾರಪೂರ್ವಕ ನನ್ನಿಂದ ಪೂಜಿಸಲ್ಪಟ್ಟ ಈ ಜಲವು ಊರ್ಜಿತವಾಗಿ ಎಲ್ಲಾ ಪ್ರಾಣಿಗಳ ಸ್ನಾನಪಾನೋಪಯೋಗಾರ್ಥವಾಗಿ ಪರಿಣಮಿಸಲಿ ಎಂದು ಇದನ್ನು ಬಿಟ್ಟಿದ್ದೇನೆ' ಎಂಬದಾಗಿ ಉತ್ಸರ್ಜನ ವಾಕ್ಯವನ್ನು ಉಚ್ಚರಿಸುತ್ತಾ ಪ್ರಾಸಾದ ಸಹಿತ ತಟಾಕವನ್ನು ಉತ್ಸರ್ಜನಮಾಡಬೇಕು.

ತತೋ ವರುಣಸೂಕ್ತೇನ ವರುಣಂ ನಾಗಸಂಯುತಂ ।
ಮಕರಂ ಕಚ್ಛಪಂ ಚೈವ ತೋಯೇಷು ಪರಿನಿಕ್ಷಿಪೇತ್ ॥ ೨೩೪ ॥

ಪೂಜಯೇದ್ವರುಣಂ ದೇವಮರ್ಘ್ಯಂ ದದ್ಯಾದ್ವಿಶೇಷತಃ ।
ತೇನೋದಕೇನ ಸಂಸ್ನಾಪ್ಯ ಗಜದಂತೋತ್ಥಮೃತ್ಸ್ನಯಾ ॥ ೨೩೫ ॥

ಶ್ವೇತಾಶ್ವಖುರಸಂಭೂತಂ ಶ್ರೀಶ್ಚತೇತಿ ಚ ಸಂಜಪನ್ ।
ಆಪ್ಯಾಯಸ್ವೇತಿಮಂತ್ರೇಣ ಮೃದಂ ಚತುಷ್ಪಥೋದ್ಭವಂ ॥ ೨೩೬ ॥

ತದ್ವಿಷ್ಣೋರಿತಿಮಂತ್ರೇಣ ಕುಶಮೂಲೇನ ಸ್ನಾಪಯೇತ್ ।
ತೀರ್ಥತೋಯೇನ ಗಂಧೇನ ತಥಾ ಪಂಚಾಮೃತೇನ ಚ ॥ ೨೩೭ ॥

ಗಾಯತ್ರ್ಯಾ ಸ್ನಾಪಯೇದ್ದೇವಂ ರತ್ನತೋಯೇನ ಸಾಧಕಃ ।
ಆಪ್ಯಾಯಸ್ವೇತಿ ಮಂತ್ರೇಣ ಕ್ಷೀರೇಣ ತದನಂತರಂ ॥ ೨೩೮ ॥

---

೨೩೪. ಅನಂತರ ವರುಣಸೂಕ್ತವನ್ನು ಪಠಿಸುತ್ತಾ ಅನಂತಸಮೇತ ವರುಣನನ್ನು ಆವಾಹಿಸಿದ್ದ ಕಲಶ, ಮೊಸಳೆ, ಆಮೆ ಮುಂತಾದುವನ್ನೂ ಅದರ ಜಲದಲ್ಲಿ ಬಿಡಬೇಕು

೨೩೫. ಈ ಸಂದರ್ಭದಲ್ಲಿ ವರುಣನನ್ನು ವಿಶೇಷವಾಗಿ ಪೂಜಿಸಿ ಅರ್ಘ್ಯವನ್ನು ಕೊಡಬೇಕು. ಆ ಜಲಾಶಯದ ನೀರಿನಲ್ಲಿ ಆನೆಯ ದಂತದಿಂದ ಮಾಟಲ್ಪಟ್ಟ ಮಣ್ಣು ಮತ್ತು ಬಿಳಿಯಕುದುರೆಯ ಗೊರಸಿನಿಂದ ಎದ್ದ ಮಣ್ಣು ಇವುಗಳನ್ನು ಸ್ವಲ್ಪ ಆ ಜಲದಲ್ಲಿ ಸೇರಿಸಿ

೨೩೬. 'ಶ್ರೀಶ್ಚತೇ' ಎಂಬ ಮಂತ್ರವನ್ನು ಪಠಿಸುತ್ತಾ ವರುಣನಿಗೆ ಸ್ನಾನಮಾಡಿಸಬೇಕು. 'ಆಪ್ಯಾಯಸ್ವ' ಎಂಬ ಮಂತ್ರಪೂರ್ವಕವಾಗಿ ನಾಲ್ಕು ಬೀದಿಗಳು ಕೂಡಿದ ಚೌಕದ ಮಣ್ಣನ್ನೂ

೨೩೭. 'ತದ್ವಿಷ್ಣೋಃ' ಎಂಬ ಮಂತ್ರದಿಂದ ದರ್ಭೆಯಗಿಡದ ಬೇರಿನ ಮಣ್ಣನ್ನೂ ತಂದು ತೀರ್ಥಜಲದೊಡನೆ ಬೆರಸಿ ಸ್ನಾನಮಾಡಿಸಬೇಕು. ಬಳಿಕ ಗಂಧೋಧಕದಿಂದಲೂ ಪಂಚಾಮೃತದಿಂದಲೂ ಅಭಿಷೇಕಮಾಡಬೇಕು.

೨೩೮. ಸಾಧಕನು ಮೊದಲು ಗಾಯತ್ರೀ ಮಂತ್ರಪೂರ್ವಕವಾಗಿ ರತ್ನವನ್ನು ಹಾಕಿದ ಕಲಶೋದಕದಿಂದ ವರುಣನಿಗೆ ಅಭಿಷೇಕಮಾಡಬೇಕು. ಅನಂತರ 'ಆಪ್ಯಾಯಸ್ವ' ಎಂಬ ಮಂತ್ರವನ್ನು ಹೇಳುತ್ತಾ ಕ್ಷೀರಾಭಿಷೇಕಮಾಡಬೇಕು.

ದಧಿಕ್ರಾವ್ಣೇತಿ ದಧ್ನಾ ಚ ಮಧುವಾತೇತಿ ವೈ ಮಧು ।
ಸರಸ್ವತ್ಯಾಂತೇತಿ ಜಾತೀಪುಷ್ಪತೋಯೇನ ಸ್ನಾಪಯೇತ್ ॥ ೨೪೯ ॥

ತದ್ವಿಷ್ಣೋರಿತಿಮಂತ್ರಸ್ಯ ಮೈನಾಕಋಷಿಃ ತ್ರಿಷ್ಟುಪ್‌ಛಂದಃ
ಸರಸ್ವತೀದೇವತಾ ವರುಣಪ್ರೀತಯೇ ಕುಶಮೃದಾಸ್ನಾನೇ ವಿನಿಯೋಗಃ ।

ಕಯಾನಇತಿ ಮಂತ್ರಸ್ಯ ವಸಿಷ್ಠಋಷಿಃ ಅನುಷ್ಟುಪ್‌ಛಂದಃ
ಸೋಮೋದೇವತಾ ವರುಣಪ್ರೀತಯೇ ನಾಗಗಂಧಸ್ನಾನೇವಿನಿಯೋಗಃ ।

ವರುಣೋತ್ತಮಿತಿಮಂತ್ರಸ್ಯ ನಾರಾಯಣಋಷಿಃ ಗಾಯತ್ರೀಛಂದಃ
ವರುಣೋದೇವತಾ ವರುಣಪ್ರೀತಯೇ ವಿನಿಯೋಗಃ ।
ಶ್ರೀಶ್ಚತೇಇತಿಮಂತ್ರಸ್ಯ ಕರ್ದಮಋಷಿಃ ಪಂಕ್ತಿಶ್ಛಂದಃ
ಸರಿದ್ದೇವತಾ ಅಶ್ವಖುರಮೃದಾ ಸ್ನಾನೇ ವಿನಿಯೋಗಃ ।
ಆಪ್ಯಾಯಸ್ವೇತಿಮಂತ್ರಸ್ಯ ಪರ್ವತಋಷಿಃ ಉಷ್ಣಿಕ್‌ಛಂದಃ
ಸರಸ್ವತೀದೇವತಾ ವರುಣಪ್ರೀತಯೇ ಚತುಷ್ಪಥಮೃದಾಸ್ನಾನೇ ವಿನಿಯೋಗಃ।

---

೨೪೯ 'ದಧಿಕ್ರಾವ್ಣೋ' ಎಂಬ ಮಂತ್ರಪೂರ್ವಕವಾಗಿ ಮೊಸರನ್ನೂ, ಮಧು ವಾತಾ ಎಂಬ ಮಂತ್ರದಿಂದ ಜೇನುತುಪ್ಪವನ್ನೂ, 'ಸರಸ್ವತ್ಯಾಂತ' ಎಂಬ ಮಂತ್ರ ಪೂರ್ವಕವಾಗಿ ಜಾಜೀಪುಷ್ಪಸಹಿತವಾದ ಉದಕವನ್ನೂ ಅಭಿಷೇಕಮಾಡಬೇಕು.

'ವರುಣೋತ್ತಂ' ಎಂಬ ಮಂತ್ರಕ್ಕೆ ನಾರಾಯಣನು ಋಷಿ, ಗಾಯತ್ರೀ ಎಂಬುದು ಛಂದಸ್ಸು, ವರುಣನೇ ದೇವತೆ, ವರುಣನು ಪ್ರಸನ್ನನಾಗುವುದಕ್ಕಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

'ಶ್ರೀಶ್ಚತೇ' ಎಂಬ ಮಂತ್ರಕ್ಕೆ ಕರ್ದಮನು ಋಷಿ, ಪಂಕ್ತಿ ಎಂಬುದು ಛಂದಸ್ಸು, ಸರಿತ್ತೇ ದೇವತೆ, ಕುದುರೆಯ ಗೊರಸಿನಿಂದ ಎದ್ದ ಮೃತ್ತಿಕೆಯಿಂದ ಸ್ನಾನಮಾಡಿಸುವಾಗ ಈ ಮಂತ್ರವನ್ನು ವಿನಿಯೋಗಿಸತಕ್ಕದ್ದು,

'ಆಪ್ಯಾಯಸ್ವ' ಎಂಬ ಮಂತ್ರಕ್ಕೆ ಪರ್ವತನೆಂಬುವನು ಋಷಿ, ಉಷ್ಣಿಕ್ ಎಂಬುದು ಛಂದಸ್ಸು, ಸರಸ್ವತಿಯೇ ದೇವತೆ, ವರುಣಪ್ರೀತ್ಯರ್ಥವಾಗಿ ನಾಲ್ಕುಬೀದಿ ಸೇರಿದ ಸ್ಥಳದ ಮೃತ್ತಿಕೆಯಿಂದ ಸ್ನಾನಮಾಡಿಸುವಾಗ ಈ ಮಂತ್ರವನ್ನು ವಿನಿಯೋಗಿಸಬೇಕು.

**ತೇಜೋಽಸೀತಿ ಮಂತ್ರಸ್ಯ ಗರ್ಗಋಷಿಃ ತ್ರಿಷ್ಟುಪ್‌ಛಂದಃ**
**ವಾಸವೋ ದೇವತಾ ವರುಣಪ್ರೀತಯೇ ವಿನಿಯೋಗಃ ।**

**ಸರಸ್ವತ್ಯೈಭೈಷಜ್ಯೇನೇತಿ ಮಂತ್ರಸ್ಯ ವಾಮದೇವಋಷಿಃ**
**ಪಂಕ್ತಿಶ್ಛಂದಃ ವಿಷ್ಣುರ್ದೇವತಾ ವರುಣಪ್ರೀತಯೇ ವಿನಿಯೋಗಃ ।**

**ಅಗ್ನಆಯಾಹೀತಿ ಮಂತ್ರಸ್ಯ ಜನಾರ್ದನ ಋಷಿಃ ಜಗತೀಚ್ಛಂದಃ**
**ಐಂದ್ರೀ ದೇವತಾ ವರುಣಪ್ರೀತಯೇ ಪುಷ್ಪೋದಕಸ್ನಾನೇವಿನಿಯೋಗಃ ।**

**ಪ್ರಕ್ಷಿಪೇತ್ಪಂಚವ್ರೀಹೀಂಶ್ಚ ಇಯಂ ಚೇತಿ ಚ ಸಂಪಠನ್ ।**
**ಪಶ್ಚಾನ್ನೀರಾಜನಂ ಕುರ್ಯಾತ್ಪಂಚಘೋಷಪುರಃಸರಂ　　　　॥ ೨೪೦ ॥**

---

'ತದ್ವಿಷ್ಣೋ' ಎಂಬ ಮಂತ್ರಕ್ಕೆ ಮೈನಾಕನೆಂಬವನು ಋಷಿ, ತ್ರಿಷ್ಟುಪ್ಪೆಂಬುದು ಛಂದಸ್ಸು, ಸರಸ್ವತಿಯೇ ದೇವತೆ, ವರುಣನ ಪ್ರೀತ್ಯರ್ಥವಾಗಿ ದರ್ಭೆಯಬುಡದ ಮೃತ್ತಿಕೆಯಿಂದ ಸ್ನಾನಮಾಡಿಸುವಾಗ ಈ ಮಂತ್ರವನ್ನು ವಿನಿಯೋಗಿಸಬೇಕು.

'ಕಯಾನ' ಎಂಬ ಮಂತ್ರಕ್ಕೆ ವಸಿಷ್ಠನು ಋಷಿ, ಅನುಷ್ಟುಪ್ಪೆಂಬುದು ಛಂದಸ್ಸು, ಸೋಮನು ದೇವತೆ, ವರುಣಪ್ರೀತ್ಯರ್ಥವಾಗಿ ನಾಗಗಂಧದಿಂದ ಸ್ನಾನಮಾಡಿಸುವಾಗ ಈ ಮಂತ್ರವನ್ನು ವಿನಿಯೋಗಿಸಬೇಕು.

'ತೇಜೋಽಸಿ' ಎಂಬ ಮಂತ್ರಕ್ಕೆ ಗರ್ಗನೆಂಬುವನು ಋಷಿ, ತ್ರಿಷ್ಟುಪ್ಪೆಂಬುದು ಛಂದಸ್ಸು, ಇಂದ್ರನು ದೇವತೆ, ವರುಣಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

'ಸರಸ್ವತ್ಸ್ಯೈ ಭೈಷಜ್ಯೇನ' ಎಂಬ ಮಂತ್ರಕ್ಕೆ ವಾಮದೇವನೆಂಬವನು ಋಷಿ, ಪಂಕ್ತಿ ಎಂಬುದು ಛಂದಸ್ಸು, ವಿಷ್ಣುವೇ ದೇವತೆ, ವರುಣನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

'ಅಗ್ನಆಯಾಹಿ' ಎಂಬ ಮಂತ್ರಕ್ಕೆ ಜನಾರ್ದನನು ಋಷಿ, ಜಗತೀ ಎಂಬುದು ಛಂದಸ್ಸು, ಐಂದ್ರಿಯು ದೇವತೆ ವರುಣಪ್ರೀತ್ಯರ್ಥವಾಗಿ ಪುಷ್ಪೋದಕಸ್ನಾನ ಮಾಡಿಸುವಾಗ ಈ ಮಂತ್ರವನ್ನು ವಿನಿಯೋಗಿಸಬೇಕು.

೨೪೦. ಅನಂತರ 'ಇಯಂ ಚ' ಎಂಬ ಮಂತ್ರವನ್ನು ಉಚ್ಚರಿಸುತ್ತಾ ಐದು ಬಗೆಯ ವ್ರೀಹಿಧಾನ್ಯಗಳನ್ನು ಕ್ಷೇಪಣಮಾಡಬೇಕು. (ಎರಚಬೇಕು.) ಅನಂತರ

ಶಿರೀಷಪುಷ್ಪಸಂಭೂತಂ ದರ್ಪಣಂ ಕಾಂಸ್ಯಸಂಭವಂ ಗೋಪಿಚಂದನಸಂಭೂ
ತಂ ಗಂಗಾಮೃತ್ತಿಕಯಾಥ ವಾ ।
ಕೃಷ್ಣಾಂ ಗಾಂ ಗೋಮಯಂ ವಾಪಿ ಸ್ವಸ್ತಿಕಂ ಶಂಖಮೇವ ಚ ॥ ೨೪೧ ॥

ಕಾರಯೇತ್ಪದಕಂ ವಾಪಿ ಯವಗೋಧೂಮಕಸ್ಯ ವಾ ।
ಶ್ರೀರಸಂ ಪುಷ್ಪಸಂಭೂತಂ ದರ್ಪಣಂ ಕಾಂಸ್ಯಸಂಭವಂ ॥ ೨೪೨ ॥

ನಂದ್ಯಾವರ್ತೇ ಮಲಯಜೇ ತತೋ ನಿರ್ಮಲಯೇತ್ಸುಧೀಃ ।
ಏಕೈಕಂ ಪ್ರತಿಮಂತ್ರೇಣ ಪ್ರತ್ಯೇಕಂ ತು ಜಲೋಪರಿ ॥ ೨೪೩ ॥

ಧ್ರುವಪ್ರತಿಕೃತ್ಯೈರ್ಮಂತ್ರ್ಯೈರಷ್ಟಭಿಶ್ಚ ಯಥಾಕ್ರಮಂ ।
ಪೂರ್ವಾಕ್ಷತಂ ಮಾಷಭಕ್ತಬಲಿಂ ದದ್ಯಾದ್ವಿಧಾನತಃ ॥ ೨೪೪ ॥

ತತೋ ನಾರಾಯಣಸೂಕ್ತೇನ ದೇವಂ ನಾರಾಯಣಂ ವ್ರಜೇತ್ ।
ಅನ್ಯೇಷಾಂ ಚೈವ ದೇವಾನಾಂ ಪ್ರದದ್ಯಾತ್ರಿಂಶತಂ ಬಲಿಂ ॥ ೨೪೫ ॥

---

ಐದುವಿಧವಾದ ಮಂಗಳ ವಾದ್ಯಶಬ್ದಪೂರ್ವಕವಾಗಿ ಮಂಗಳಾರತಿಯನ್ನು ಮಾಡಬೇಕು.

೨೪೧–೨೪೨. ಶಿರೀಷಪುಷ್ಪದಿಂದ ಆದ ಮಾಲಿಕೆ, ಅಥವಾ ಪುಷ್ಪಸಂಭೂತವಾದ ಶ್ರೀರಸ ಕಂಚಿನಿಂದ ಮಾಡಿದ ಕನ್ನಡಿ, ಗೋಪೀಚಂದನದಿಂದಲೋ ಅಥವಾ ಗಂಗಾತೀರದ ಮೃತ್ತಿಕೆಯಿಂದಲೋ ಮಾಡಿದ ಸ್ವಸ್ತಿಕ, ಶಂಖ, ಕಪಿಲವರ್ಣದ ಹಸು, ಗೋಮಯ, ಯವ, ಗೋಧೂಮಧಾನ್ಯ ಇವುಗಳ ಪದಕವನ್ನು ಮಾಡಬೇಕು.

೨೪೩. ಅನಂತರ ಶ್ರೀಗಂಧದಲ್ಲಿ ನಂದಾವರ್ತ ಮಂಡಲಾಕೃತಿಯನ್ನು ರಚಿಸಿ, ಈ ಒಂದೊಂದನ್ನೂ ಆಯಾ ಮಂತ್ರಗಳಿಂದ ತೊಳೆದ ನೀರಿನಮೇಲೆ ತೇಲಿಬಿಟ್ಟು ಅನಂತರ ನಿರ್ಮಲವಾಗುವಂತೆ ಮಾಡಬೇಕು.

೨೪೪. 'ಧ್ರುವಪ್ರತಿಕೃತ್ಯೈಃ' ಎಂಬ ಎಂಟುಮಂತ್ರಗಳ ಮೂಲಕ ಕ್ರಮತಪ್ಪದೆ ದೂರ್ವಾಕ್ಷತೆಯನ್ನೂ, ಉದ್ದಿನಹುಡಿ ಅನ್ನದ ಬಲಿಯನ್ನೂ ಎಂಟುದಿಕ್ಕುಗಳಲ್ಲೂ ವಿಧಿ ಪ್ರಕಾರ ಸಮರ್ಪಿಸಬೇಕು.

೨೪೫. ಅನಂತರ ನಾರಾಯಣಸೂಕ್ತದಿಂದ ನಾರಾಯಣನನ್ನು ಪೂಜಿಸಬೇಕು. ಇತರ ದೇವತೆಗಳಿಗೂ ಮೂವತ್ತು ಬಲಿಯನ್ನು ಸಮರ್ಪಿಸಬೇಕು.

**ತತ ಆಚಮನೀಯಂ ಚ ವಸ್ತ್ರಯುಗ್ಮಂ ನಿವೇದಯೇತ್ ।**
**ವಕ್ಷ್ಯಮಾಣೇನ ಮಂತ್ರೇಣ ಕ್ರಮೇಣಾಪಿ ವಿಧಾನತಃ ॥ ೨೪೬ ॥**

**ಪೃಥಕ್‌ಪೃಥಕ್ ತತೋ ದದ್ಯಾತ್ತಾವಂತ್ಯೇನಾಪಿ ಭೋ ದ್ವಿಜಾಃ ।**
**ವೇದಸೂಕ್ತಸಮಾಯುಕ್ತೇ ಯಜ್ಞಸೂತ್ರಸಮನ್ವಿತೇ ॥**
**ಸರ್ವವರ್ಣಪ್ರದೇ ದೇವಿ ವಾಸಸೀ ತೇ ವಿನಿರ್ಮಿತೇ ॥ ೨೪೭ ॥**

**ಶರೀರಂ ತೇ ನ ಜಾನಾಮಿ ಚೇಷ್ಟಾಂ ನೈವ ಚ ನೈವ ಚ ।**
**ಮಯಾ ನಿವೇದಿತಾನ್ ಗಂಧಾನ್ ಪ್ರಗೃಹ್ಯ ಚ ವಿಲಿಪ್ಯತಾಂ ॥ ೨೪೮ ॥**

**ಅಷ್ಟೋತ್ತರಶತಾನ್ ದೀಪಾನ್ ಪರಿತಃ ಸ್ಥಾಪಯೇತ್ಕ್ರಮಾತ್ ।**
**ತದರ್ಧಂ ವಾ ಪಂಚವಿಂಶಂ ಮಂತ್ರೇಣ ಪ್ರಯುಜೇತ್ಸುಧೀಃ ॥ ೨೪೯ ॥**

---

೨೪೬. ಓ ದ್ವಿಜರೇ! ಅನಂತರ ಆಚಮನವನ್ನು ಸಮರ್ಪಿಸಿ ಕ್ರಮವಾಗಿ ಮುಂದೆ ಹೇಳುವ ಮಂತ್ರಗಳಿಂದ ವಿಧಿಪೂರ್ವಕವಾಗಿ ಒಂದು ಜೊತೆ ವಸ್ತ್ರವನ್ನು ಅರ್ಪಿಸಬೇಕು

೨೪೭. ಒಂದೊಂದು ದೇವತೆಗೂ ಪ್ರತ್ಯೇಕಪ್ರತ್ಯೇಕವಾಗಿ ಅಷ್ಟಕ್ಕೂ ವಸ್ತ್ರಗಳನ್ನು ಸಮರ್ಪಿಸಬೇಕು. ವೇದಸೂಕ್ತದಿಂದ ಕೂಡಿದವಳೂ, ಯಜ್ಞೋಪವೀತದಿಂದ ಕೂಡಿದವಳೂ, ಸರ್ವವರ್ಣಗಳನ್ನೂ ಕೊಡತಕ್ಕ ದೇವಿಯೇ! ನಿನಗಾಗಿ ನಿರ್ಮಿತವಾಗಿರುವ ಈ ವಸ್ತ್ರದ್ವಯವನ್ನು ಪರಿಗ್ರಹಿಸು (ಎಂದು ವಸ್ತ್ರಯುಗ್ಮಸಮರ್ಪಣೆ ಮಾಡಬೇಕು.)

೨೪೮. ನಿನ್ನ ಶರೀರಸ್ವರೂಪವನ್ನು ನಾನು ತಿಳಿದವನಲ್ಲ. ನಿನ್ನ ಕ್ರಿಯಾ ವ್ಯಾಪಾರಗಳನ್ನಂತೂ ಕಂಡವನೇ ಅಲ್ಲ. ನಾನು ಸಮರ್ಪಿಸುವ ಗಂಧವನ್ನು ಪರಿಗ್ರಹಿಸಿ ಲೇಪಿಸಿಕೋ. (ಎಂದು ಗಂಧಸಮರ್ಪಣೆ ಮಾಡಬೇಕು)

೨೪೯. ಬುದ್ಧಿಶಾಲಿಯಾದವನು ದೇವರ ಸುತ್ತಲೂ ನೂರೆಂಟು ದೀಪಗಳನ್ನೋ ಅಥವಾ ಅದರ ಅರ್ಧದಷ್ಟನ್ನೋ ಕೊನೆಯಪಕ್ಷ ಇಪ್ಪತ್ತೈದು ದೀಪಗಳನ್ನೋ ಹತ್ತಿಸಿ, ಈ ಮುಂದೆ ಹೇಳುವ ಅರ್ಥವುಳ್ಳ ಮಂತ್ರವನ್ನು ಹೇಳಿ ಸಮರ್ಪಿಸಬೇಕು.

ತ್ವಂ ಸೂರ್ಯಚಂದ್ರಜ್ಯೋತೀಂಷಿ ವಿದ್ಯುತಸ್ತ್ವಂ ತಥೈವ ಚ ।
ತ್ವಮೇವ ಸರ್ವಜ್ಯೋತೀಂಷಿ ದೀಪೋಽಯಂ ಪ್ರತಿಗೃಹ್ಯತಾಂ ॥ ೨೫೦ ॥

ಪ್ರದಕ್ಷಿಣಂ ತತಃ ಕುರ್ಯಾತ್ಪಂಚಧಾ ಸಪ್ತಧಾಥ ವಾ ।
ವಕ್ಷ್ಯಮಾಣೇನ ಮಂತ್ರೇಣ ದದ್ಯಾದ್ಧೂಪಂ ದಶಾಂಗಕಂ ॥ ೨೫೧ ॥

ವನಸ್ಪತಿರಸೋ ದಿವ್ಯೋ ಗಂಧಾಢ್ಯಃ ಸುರಭಿಃ ಶುಚಿಃ ।
ಮಯಾ ನಿವೇದಿತೋ ಭಕ್ತ್ಯಾ ಧೂಪೋಽಯಂ ಪ್ರತಿಗೃಹ್ಯತಾಂ ॥ ೨೫೨ ॥

ಅಲಂಕಾರೈಶ್ಚ ಗಂಧೈಶ್ಚ ಪೀತವಸ್ತ್ರೈಸ್ತಥೈವ ಚ ।
ದೂರ್ವಾಕ್ಷತೇನ ಮಾಲ್ಯೇನ ಯುಕ್ತಂ ಪುಷ್ಪೇಣ ಪೂಜಯೇತ್ ॥
ದದ್ಯಾತ್ಪಂಚಾಂಜಲಿಂ ಪಶ್ಚಾದ್ವಿಷ್ಣುಸೂಕ್ತಂ ಪುನರ್ಜಪೇತ್ ॥ ೨೫೩ ॥

ತತಃ ಸುಶೋಭನೇ ಸ್ಥಾನೇ ವೇದೀಂ ನಿರ್ಮಾಯ ದೇಶಿಕಃ ।
ವರುಣಂ ವಿನ್ಯಸೇತ್ತತ್ರ ತಥಾ ಪುಷ್ಕರಿಣೀಮಪಿ ॥ ೨೫೪ ॥

---

೨೫೦. ನೀನೇ ಸೂರ್ಯ ನೀನೇ ಚಂದ್ರ, ಜ್ಯೋತಿಸ್ಸು, ವಿದ್ಯುತ್ತು ಮೊದಲಾದ ಸಮಸ್ತ ಪ್ರಕಾಶಸ್ವರೂಪನೂ ನೀನೇ ಆಗಿದ್ದೀ ಈ ದೀಪವನ್ನು ಸ್ವೀಕರಿಸು. (ಎನ್ನಬೇಕು)

೨೫೧. ಅನಂತರ ಐದು ಆವೃತ್ತಿ ಇಥವಾ ಏಳು ಆವೃತ್ತಿ ಪ್ರದಕ್ಷಿಣೆಮಾಡಬೇಕು. ಬಳಿಕ ಈ ಮಂತ್ರವನ್ನು ಹೇಳಿ ದಶಾಂಗಧೂಪವನ್ನು ಹಾಕಬೇಕು.

೨೫೨. ಪರಿಶುದ್ಧವೂ, ಸುವಾಸನೆಯನ್ನು ಹರಡತಕ್ಕದೂ, ದಿವ್ಯಪರಿಮಳ ಗಂಧಯುತವೂ ವೃಕ್ಷದ ನಿರ್ಯಾಸರೂಪವೂ ಆದ ಈ ಧೂಪವನ್ನು ನಾನು ಭಕ್ತಿಯಿಂದ ನಿವೇದಿಸುತ್ತಿದೇನೆ. ಇದನ್ನು ಸ್ವೀಕರಿಸು.

೨೫೩. ಅನಂತರ ಆಭರಣಗಳು, ಗಂಧ, ಹಳದಿಯಬಣ್ಣದ ವಸ್ತ್ರಗಳು, ದೂರ್ವೆ, ಅಕ್ಷತೆ, ಪುಷ್ಪಮಾಲಿಕೆ ಇವುಗಳಿಂದ ಪೂಜಿಸಬೇಕು. ಬಳಿಕ ಐದು-ಬೊಗಸೆ ಹೂವುಗಳನ್ನು ಪುಷ್ಪಾಂಜಲಿ ಸಮರ್ಪಣೆಮಾಡಿ ಮತ್ತೆ ನಾರಾಯಣಸೂಕ್ತವನ್ನು ಪಠನಮಾಡಬೇಕು.

೨೫೪. ಅನಂತರ ಆಚಾರ್ಯನು ಶುಭಕರವಾದ ಪ್ರದೇಶದಲ್ಲಿ ಹಸೆಜಗುಲಿಯನ್ನು ನಿರ್ಮಿಸಿ, ಅದರಲ್ಲಿ ಒಂದುಕಡೆ ವರುಣನನ್ನೂ ಮತ್ತೊಂದುಕಡೆ ಪುಷ್ಕರಿಣಿಯನ್ನೂ ವಿನ್ಯಾಸಮಾಡಬೇಕು.

**ವಿವಾಹೋಕ್ತೇನ ವಿಧಿನಾ ಕುರ್ಯಾನ್ನಿರ್ಮಂಥನಾದಿಕಂ ।**
**ಗಂಧಪುಷ್ಪಂ ತತೋ ದದ್ಯಾದ್ಗಾಂ ಚ ದದ್ಯಾತ್ಸದಕ್ಷಿಣಾಂ ॥ ೨೫೫ ॥**

**ಚಾಮರಂ ವ್ಯಜನಂ ಛತ್ರಂ ಕಾಂಸ್ಯಂ ಲೋಹಂ ತಥೈವ ಚ ।**
**ಕುರ್ಯಾತ್ಪುಷ್ಕರಿಣೀಂ ರಮ್ಯಾಂ ರಾಜತೀಂ ಚ ತ್ರಿಪಾದಿಕಾಂ ॥ ೨೫೬ ॥**

**ಚತುಷ್ಕೋಣಾಂ ಚ ಸುಷಮಾಂ ದ್ವ್ಯಂಗುಷ್ಠಪರಿಮಂಡಲಾಂ ।**
**ಸುವರ್ಣಪ್ರತಿಮಾಂ ಕುರ್ಯಾದ್ಬಾಲೇನೈಕೇನ ಭೋ ದ್ವಿಜಾಃ ॥ ೨೫೭ ॥**

**ಅಥವಾ ಸ್ವರ್ಣಪತ್ರೇ ಚ ಕುಂಕುಮೇನ ತಲೇ ಲಿಖೇತ್ ।**
**ಬಾಣಶಕ್ತಿಪ್ರಮಾಣೇನ ಸ್ವರ್ಣಪತ್ರಂ ತು ದ್ವ್ಯಂಗುಲಂ ॥ ೨೫೮ ॥**

**ಕಾರಯೇಚ್ಚತುರಸ್ರಂ ಚ ಪೀಠೋಪರಿ ನ್ಯಸೇದ್ಬುಧಃ ।**
**ನೀರಾಜನಾಂತೇ ವಿಪ್ರೇಂದ್ರಾಃ ಸಂಸ್ಮರೇದಮೃತಂ ತರೇತ್ ॥ ೨೫೯ ॥**

---

೨೫೫. ವಿವಾಹಕ್ರಮದಲ್ಲಿ ಹೇಳಿರುವ ವಿಧಿಪ್ರಕಾರ ಸಂಬಂಧಮಾಲಾಧಾರಣ ಮೊದಲಾದುವನ್ನು ಮಾಡಬೇಕು. ಅನಂತರ ಗಂಧ ಪುಷ್ಪ ಇವುಗಳನ್ನೂ ದಕ್ಷಿಣೆ ಸಹಿತವಾಗಿ ಗೋವನ್ನೂ ದಾನಮಾಡಬೇಕು.

೨೫೬. ಎಲೈ ವಿಪ್ರರೇ! ಕೇಳಿ; ಅದರಜತೆ ಚಾಮರ, ಬೀಸಣಿಗೆ, ಛತ್ರಿ, ಕಂಚಿನಕನ್ನಡಿ ಮುಂತಾದ್ದನ್ನು ಕೊಡಬೇಕು. ಅಂದವಾಗಿಯೂ, ತ್ರಿಪಾದವುಳ್ಳ ದಾಗಿಯೂ ಇರುವ ಪುಷ್ಕರಿಣಿಯನ್ನು ಬೆಳ್ಳಿಯಿಂದ ಮಾಡಿಸಬೇಕು.

೨೫೭. ಅಲ್ಲದೆ ಪ್ರತಿಮೆಯನ್ನು ವರುಣ ಚೌಕವಾದುದೂ ಮತ್ತು ಪರಮ ಕಾಂತಿಯುಕ್ತವಾದುದೂ ಎರಡು ಅಂಗುಷ್ಠಪ್ರಮಾಣ ಸುತ್ತಳತೆಯುಳ್ಳದೂ ಆಗಿರು ವಂತೆ ಸುವರ್ಣದಲ್ಲಿ ಮಾಡಿಸಬೇಕು.

೨೫೮. ಬಾಣಶಕ್ತಿ ಮುಂತಾದ ಆಯುಧಗಳನ್ನು ಚಿನ್ನದ ತಗಡಿನಲ್ಲಿ ಕುಂಕು ಮದಿಂದ ಪ್ರಮಾಣಕ್ಕೆ ತಕ್ಕಂತೆ ಬರೆಯಬೇಕು ಆ ಚಿನ್ನದ ರೇಖು ಎರಡುಅಂಗುಲ ವಿರಬೇಕು.

೨೫೯. ಚೌಕನಾದ ಪೀಠವನ್ನು ಮಾಡಿ ಅದರಮೇಲೆ ಆ ತಗಡನ್ನಿಡಬೇಕು. ಮಂಗಳಾರತಿ ಮಾಡಿದಮೇಲೆ ವರುಣನನ್ನು ಸ್ಮರಣಮಾಡಿ ಜಲವನ್ನು ನೌಕಾದಿ ಸಾಧನದಮೂಲಕ ದಾಟಬೇಕು.

**ಅಶಕ್ತೇನ ತಥೈವೈಕಕಾಷ್ಠೇ ವಾ ಪಿಪ್ಪಲಚ್ಛದೇ ।**
**ತಾಮ್ರಪಟ್ಟೇ ಲಿಖೇದ್ವಾಪಿ ಅಲಕ್ತೇನ ಯಥಾವಿಧಿ ॥ ೨೬೦ ॥**

**ಪ್ರಾಣಪ್ರತಿಷ್ಠಾಂ ಕುರ್ಯಾತ್ತು ವರುಣಾಯ ನಿವೇದಯೇತ್ ।**
**ಮಹಂ ತು ವತ್ಸರಂ ಕುರ್ಯಾದ್ವೇದಘೋಷಪುರಸ್ಸರಂ ॥ ೨೬೧ ॥**

**ಅಶೋಕಃ ಖದಿರಃ ಶಾಲೋ ಹ್ಯಶ್ವತ್ಥೋ ಬಿಲ್ವಕಸ್ತಥಾ ।**
**ಧಾತ್ರೀಕುರಬಕಶ್ಚೈವ ಬಕುಲೋ ನಾಗಕೇಶರಃ ॥ ೨೬೨ ॥**

**ಏಷಾಮೇವ ಕಾಷ್ಠಯೂಪಂ ಯಜಮಾನಪ್ರಮಾಣಕಂ ।**
**ಸಮಾದಾಯ ಚ ಸಂಸ್ಥಾಪ್ಯ ವಸ್ತ್ರಾದ್ಯೈಃ ಪರಿಗೃಹ್ಯ ಚ ॥ ೨೬೩ ॥**

**ಯೂಪಂ ರಕ್ಷೇತಿ ಮಂತ್ರೇಣ ಖನಿತ್ವಾ ಚ ಪ್ರದಾಪಯೇತ್ ।**
**ಸ್ಥಿರೋ ಭವೇತಿ ಮಂತ್ರೇಣ ಹಸ್ತಂ ದತ್ವಾ ಪಠೇತ್ತತಃ ॥ ೨೬೪ ॥**

---

೨೬೦. ಚಿನ್ನದಲ್ಲಿ ಮಾಡಿಸಲು ತಕ್ಕಷ್ಟು ಅನುಕೂಲವಿಲ್ಲದವನು ಅರಳಿಮರದ ತೊಗಟೆಯಮೇಲೆ ಒಂದು ಕಡ್ಡಿಯಿಂದಲಾಗಲಿ, ತಾಮ್ರದ ತಗಡಿನಮೇಲೆ ಲಾಕ್ಷಾರಸದಿಂದಲಾಗಲಿ ವಿಧಿಪ್ರಕಾರ ಬರೆಯಬೇಕು

೨೬೧. ಹೀಗೆ ಬರೆದು ಅದರಲ್ಲಿ ಪ್ರಾಣಪ್ರತಿಷ್ಠೆ ಮಾಡಿ, ವರುಣನಿಗೆ ಸಮರ್ಪಿಸಬೇಕು. ಒಂದು ವರ್ಷದವರೆಗೂ ವೇದಘೋಷಪೂರ್ವಕವಾಗಿ ಉತ್ಸವ ನಡೆಸಬೇಕು.

೨೬೨. ಅಶೋಕ, ಕಗ್ಗಲಿ, ಸಾಲವೃಕ್ಷ (ಹಾಲುಮಡ್ಡಿಮರ) ಅರಳಿ, ಬಿಲ್ವಪತ್ರ, ನೆಲ್ಲಿ, ಗೋರಂಟಿ, ಪಗಡೆಗಿಡ, ನಾಗಕೇಸರ ಈ ಮರಗಳಲ್ಲಿ

೨೬೩. ಯಜಮಾನನ ಎತ್ತರದಷ್ಟು ಉದ್ದ ಆಳತೆಯ ಕೊಂಬೆಯನ್ನು ಯೂಪವಾಗಿ ನೆಡುವುದಕ್ಕೆ ತೆಗೆದುಕೊಂಡು ವಸ್ತ್ರ ಮುಂತಾದುವುಗಳಿಂದ ಅದನ್ನು ಅಲಂಕರಿಸಬೇಕು.

೨೬೪. ಬಳಿಕ ಗುಂಡಿತೋಡಿ 'ಯೂಪಂರಕ್ಷ' ಎಂಬ ಮಂತ್ರ ಹೇಳಿ ಆ ಗುಂಡಿಯಲ್ಲಿ 'ಆಯೂಪವನ್ನು' ನೆಡಬೇಕು. ಆ ಮೇಲೆ ಅದರ ನೆತ್ತಿಯಮೇಲೆ ಕೈಯೂರಿ ಸ್ಥಿರೋಭವ ಎಂಬ ಮಂತ್ರ ಹೇಳಬೇಕು.

**ತಡಾಗಸ್ಯ ತಥೈಶಾನ್ಯಾಂ ತಥಾ ಪ್ರಾಸಾದಕಸ್ಯ ಚ ।**
**ಪ್ರಾಪಯೇದ್ದಕ್ಷಿಣೇ ಭಾಗೇ ಆವಾಸಸ್ಯ ಚ ಮಧ್ಯಕೇ ॥ ೨೬೫ ॥**

**ನೌಕಾಂ ಗತ್ವಾ ತತಃ ಪಶ್ಚಾದ್ಯೂಪಮಾದಾಯ ವಾಗ್ಯತಃ ।**
**ಮಧ್ಯದೇಶೇ ತಡಾಗಸ್ಯ ಸಮುಲ್ಲಂಘ್ಯ ತಥೋತ್ತರಂ ॥ ೨೬೬ ॥**

**ಗಂತವ್ಯಂ ಕಲ್ಪ್ಯ ತತ್ರೈವ ಆಪ್ಯಾಯಸ್ವೇತಿ ವೈ ಋಚಾ ।**
**ಶಿಲಾಯಾಂ ಹೋಮಯೇತ್ತತ್ರ ಹುನೇನ್ನೌಕಾಹುತಿತ್ರಯಂ ॥ ೨೬೭ ॥**

**ಅಂಗದಾಯ ಸ್ವಾಹೇತಿ ಭೌಮಾಯ ನಮ ಇತ್ಯತಃ ।**
**ಲಾಜಾಶಕ್ತೌ ದಧಿಮಧೌ ವಾಸವೇ ಪ್ರತಿಹೋಮಯೇತ್ ॥ ೨೬೮ ॥**

**ಕೂರ್ಮಾಯ ನಮ ಇತ್ಯುಕ್ತ್ವಾ ಪೃಥಿವ್ಯೈ ನಮ ಇತ್ಯುತ ।**
**ಸ್ವಾಹೇತ್ಯನಂತಮಂತ್ರೇಣ ದದ್ಯಾದರ್ಘ್ಯಮನಂತರಂ ॥ ೨೬೯ ॥**

---

೨೬೫. ತಟಾಕದ ಈಶಾನ್ಯಭಾಗದಲ್ಲಿ ಪ್ರಾಸಾದ ಪ್ರತಿಷ್ಠೆಯಾದರೆ ಅದರ ದಕ್ಷಿಣಭಾಗದ ಕಡೆ ಹೋಗಿ ಮೌನವಾಗಿ ಯೂಪವನ್ನು ತೆಗೆದುಕೊಂಡು ಕೆರೆಯ ಮಧ್ಯಭಾಗಕ್ಕೆ ನೌಕೆಯಲ್ಲಿ ಹೊರಡಬೇಕು.

೨೬೬-೨೬೭. ಹಾಗೆ ಹೊರಟು ಉತ್ತರದಕಡೆಗೆ ಸಾಗಿ, ಒಂದು ಅನುಕೂಲ ವಾದ ಬಂಡೆ ಇರುವ ಸ್ಥಾನಕ್ಕೆ ಹೋಗಿ ನೌಕೆಯ ಮೇಲಿದ್ದೇ 'ಆಪ್ಯಾಯಸ್ವ ಎಂಬ' ಮೂರು ಆಹುತಿಗಳನ್ನು ಆ ಶಿಲೆಯಮೇಲೆ ಹೋಮಮಾಡಬೇಕು.

೨೬೮. ಅಂಗದಾಯಸ್ವಾಹಾ ಭೌಮಾಯನಮಃ ಎಂಬ ಮಂತ್ರದಿಂದ ಆ ಹೋಮಮಾಡಬೇಕು. ಅರಳನ್ನು ಸಂಪಾದಿಸಿ ಹೋಮಮಾಡಲು ಸಾಧ್ಯವಿಲ್ಲದಿದ್ದರೆ ಮೊಸರು, ಜೇನು ಇವುಗಳಿಂದಲೇ ಇಂದ್ರಪ್ರೀತ್ಯರ್ಥವಾಗಿ ಹೋಮಮಾಡಬೇಕು.

೨೬೯. ಕೂರ್ಮಾಯಸ್ವಾಹಾ ಎಂಬ ಮಂತ್ರ ಹೇಳಿದ ಮೇಲೆ ಕೂರ್ಮಾಯನಮಃ ಎಂದೂ, ಪೃಥಿವ್ಯೈಸ್ವಾಹಾ ಎಂಬ ಮಂತ್ರ ಹೇಳಿದಮೇಲೆ ಪೃಥಿವ್ಯೈನಮಃ ಎಂದೂ ಹೇಳತಕ್ಕದ್ದು.

**ಪಂಚರತ್ನೇನ ಗಂಧೇನ ಶಂಖೇನಾರ್ಘ್ಯಂ ಪ್ರದಾಪಯೇತ್ ।**
**ಚತುರಸ್ರಂ ಸಮಾಕೀರ್ಣಂ ಚತುರ್ದಿಕ್ಷ್ವಧೃತೈರ್ಜನೈಃ ॥ ೨೭೦ ॥**

**ಕಲ್ಪಯೇದ್ರೋಪಯೇತ್ತತ್ರ ಹಸ್ತಂ ದತ್ವಾ ಪಠೇದಿದಂ ।**
**ಸ್ಥಿರೋಭವೇತಿ ಮಂತ್ರೇಣ ಗಂಧಪುಷ್ಪೈಃ ಪ್ರಪೂಜಯೇತ್ ॥ ೨೭೧ ॥**

**ಚಕ್ರಂ ಸದರ್ಪಣಂ ದದ್ಯಾನ್ನಾಗದಂಡಶಿರೋಗತಃ ।**
**ವಿದ್ಯುದತ್ರ ಚ ಕರ್ತಾರಂ ಗ್ರಹದುಃಖಹರಿಪ್ರಿಯಂ ॥ ೨೭೨ ॥**

**ಏವಂ ಚಕ್ರಂ ಪೂಜಯಿತ್ವಾ ಶೂಲಂ ನಾಗಾಂಶ್ಚ ಪೂಜಯೇತ್ ।**
**ಉಚ್ಚೈರ್ಧ್ವಜಂ ತತಃ ಕೃತ್ವಾ ನ ನಾಗೇತಿ ಚ ಸಂಪಠೇತ್ ॥ ೨೭೩ ॥**

**ಗಾಯತ್ರಸ್ವೇತಿ ಮಂತ್ರೇಣ ಪಠೇದ್ದ್ವಾರದ್ವಯಂ ತತಃ ।**
**ದಿಕ್ಪಾಲೇಭ್ಯೋ ಬಲಿಂ ದದ್ಯಾನ್ಮಾಷಭಕ್ತಂ ಗುಡೌದನಂ ॥ ೨೭೪ ॥**

---

೨೭೦. ಅನಂತರ ಪಂಚರತ್ನಗಳನ್ನು ಬಾಯಿಗೆ ತೂಗುಹಾಕಿದ ಶಂಖದಲ್ಲಿ ನೀರುತುಂಬಿ ಗಂಧವನ್ನು ಕದರಿ ಅದರಿಂದ ಅರ್ಘ್ಯಪ್ರದಾನ ಮಾಡಬೇಕು. ಚೌಕ ವಾಗಿ ನಾಲ್ಕುಕಡೆಗಳಲ್ಲಿ ವ್ಯಾಪ್ತವಾಗಿ ಜನಗಳು ಯಾರೂ ಹೋಗಲು ಆಗದೆ ಇರು ವಂತೆ ದುಸ್ತರವಾಗಿಮಾಡಿ

೨೭೧. ಅಲ್ಲಿ ಯೂಪವನ್ನು ರೋಪಣಮಾಡಿ ಆದರ ನೆತ್ತಿಯಮೇಲೆ ಕೈಯಿಟ್ಟು ಸ್ಥಿರೋಭವ ಎಂಬ ಮಂತ್ರವನ್ನು ಹೇಳಬೇಕು. ಅನಂತರ ಗಂಧ ಹೂವು ಇವುಗಳಿಂದ ಪೂಜಿಸಬೇಕು.

೨೭೨. ನಾಗಪ್ರತಿಮೆಯನ್ನೂ, ಶೂಲವನ್ನೂ, ಧ್ವಜದಂಡವನ್ನೂ ನಿಲ್ಲಿಸಿ ಅದರ ನೆತ್ತಿಯಲ್ಲಿ ವಿದ್ಯುತ್ತನ್ನುಂಟುಮಾಡತಕ್ಕುದೂ, ಗ್ರಹಾದಿಗಳಿಗೆ ದುಃಖದಾಯ ಕವೂ ವಿಷ್ಣುಪ್ರಿಯವೂ ಆದ ಚಕ್ರವನ್ನು ಕನ್ನಡಿಸಹಿತವಾಗಿ ಸ್ಥಾಪಿಸಬೇಕು.

೨೭೩. ಈ ರೀತಿ ಚಕ್ರವನ್ನಿಟ್ಟು ಪೂಜೆಮಾಡಿದನಂತರ ಶೂಲವನ್ನೂ, ನಾಗ ಗಳನ್ನೂ ಪೂಜಿಸುವವನಾಗಿ ಆ ಧ್ವಜವನ್ನು ಎತ್ತರಕ್ಕೆ ಏರಿಸಿ ಪೂಜಿಸಬೇಕಲ್ಲದೆ ನನಾಗ ಎಂಬದಾಗಿ ಹೇಳಬೇಕು.

೨೭೪. ಗಾಯತ್ರಸ್ವ ಎಂಬ ಮಂತ್ರಪೂರ್ವಕವಾಗಿ ಎರಡು ಬಾಗಿಲುಗಳಲ್ಲೂ ಹೇಳಬೇಕು. ಅನಂತರ ಉದ್ದಿನಹುಡಿ ಮಿಶ್ರವಾದ ಅನ್ನ, ಬೆಲ್ಲದ ಅನ್ನ, ಇವನ್ನು ಕೆಂಪುಹೂವುಗಳ ಸಮೇತವಾಗಿ ಇರಿಸಿ

**ರಕ್ತಪುಷ್ಪಾನ್ವಿತಂ ಕೃತ್ವಾ ಪ್ರಣಿಪತ್ಯ ಪ್ರಸಾದಯೇತ್ ।**
**ಸಹಸ್ರಂ ವಾ ಧನಂ ದದ್ಯಾದ್ಬ್ರಾಹ್ಮಣಾಯ ಕುಟುಂಬಿನೇ ॥ ೨೭೫ ॥**

**ತತೋ ಭೋಜ್ಯಂ ಸಸರ್ಪಿಶ್ಚ ಸಹಿರಣ್ಯಂ ಯಥಾವಿಧಿ ।**
**ಇಕ್ಷುಸ್ವಸ್ತೀತಿಕಾಂ ದದ್ಯಾಜ್ಜಲೇ ಮಾತೄಶ್ಚ ಪೂಜಯೇತ್ ॥ ೨೭೬ ॥**

**ಮಂಥರಾಂ ವಸುತಾಂ ಕಾನ್ತಾಂ ರಾಕ್ಷಸೀಂ ಚ ಪಿಶಾಚಿಕಾಂ ।**
**ನಾಗಿನೀರ್ನಾಗಪುತ್ರಾಂಶ್ಚ ಮಧ್ಯೇ ಸಂಪೂಜಯೇತ್ತತಃ ॥ ೨೭೭ ॥**

**ಪೂರ್ಣಾಂತೇ ಚ ಪೃಥಗ್ದದ್ಯಾಲ್ಲಾಜಾದ್ಯೈರ್ಗುಡಮಿಶ್ರಿತೈಃ ।**
**ಇಂದ್ರೋ ಬಲವತೀ ಸ್ವಾಹಾ ಯಶೋ ಬಲವತಾಮಪಿ ॥ ೨೭೮ ॥**

**ಬೃಹತ್ಪಕ್ಷಾ ವಿಶೇಷೋಽಯಂ ಮಧ್ಯಮೋ ಚ ಕನೀಯಕೇ ।**
**ಬೃಹಸ್ಪತೇ ಚ ಇಂದ್ರಾಯ ತವ ದೇವಲತಾಮಿತಿ ॥ ೨೭೯ ॥**

---

೨೭೫. ದಿಕ್ಪಾಲಕರಿಗೆ ಬಲಿಪ್ರದಾನಮಾಡಿ ನಮಸ್ಕರಿಸಿ ಅವರ ಅನುಗ್ರಹ ವನ್ನು ಪಡೆಯಬೇಕು. ಈ ಕರ್ಮಾಂಗವಾಗಿ ದಂಪತಿಪೂಜೆ ಮಾಡುವನಾಗಿ ತುಂಬ ಮಕ್ಕಳು, ಹೆಂಡತಿ ಉಳ್ಳ ದೊಡ್ಡಕುಟುಂಬಿಯಾದ ಬ್ರಾಹ್ಮಣನಿಗೆ ಸಾವಿರಾರುಗಟ್ಟಲೆ ಯಾಗಿ ದ್ರವ್ಯವನ್ನು ದಾನಮಾಡಬೇಕು.

೨೭೬. ಅನಂತರ ಕಬ್ಬನ್ನೂ ಘೃತಮಿಶ್ರಮಾಡಿದ ಅನ್ನಾದಿ ಭೋಜ್ಯವಸು ಗಳನ್ನೂ ಸುವರ್ಣದಕ್ಷಿಣೆಯೊಡನೆ ವಿಧಿಪೂರ್ವಕವಾಗಿ ಸ್ವಸ್ತ್ಯಸ್ತು ಎಂದು ಹೇಳಿ ಆ ಜಲದಲ್ಲಿ ಹಾಕಬೇಕು ಅನಂತರ ಮಾತೃಪೂಜೆಯನ್ನು ಮಾಡಬೇಕು.

೨೭೭. ಅನಂತರ ಮಧ್ಯಭಾಗದಲ್ಲಿ ಮಂಥರೆ, ವಸುತೆ, ಕಾಂತಾ, ರಾಕ್ಷಸಿ, ಪಿಶಾಚೀ, ನಾಗಿನೀ, ನಾಗಪುತ್ರರು ಇವರನ್ನು ಪೂಜಿಸಬೇಕು.

೨೭೮. ಪೂರ್ಣಾಹುತಿಯಾದ ಮೇಲೆ ಈ ದೇವತೆಗಳಿಗೆ ಬೆಲ್ಲಮಿಶ್ರವಾದ ಲಾಜೆಯಿಂದ ಪ್ರತ್ಯೇಕಪ್ರತ್ಯೇಕವಾಗಿ ಆಹುತಿಕೊಡಬೇಕು.

೨೭೯. ಬಲಶಾಲಿಗಳಿಗೂ ಕೂಡ ಯಶಸ್ಸೇ ಮುಖ್ಯ. ಆದ್ದರಿಂದ ಇಂದ್ರನಿಗೇ ಹವಿಸ್ಸನ್ನು ಸ್ವಾಹಾಕಾರದಿಂದ ಅರ್ಪಿಸುವುದರಲ್ಲಿ ಹೆಚ್ಚು ಬಲವು ಹೀಗೆ ಮಾಡುವುದು ಉತ್ತಮಪಕ್ಷದ ಕ್ರಮವಾಯಿತು ಮಧ್ಯಮಪಕ್ಷ, ಕನಿಷ್ಠಪಕ್ಷದಲ್ಲಿ ಇಂದ್ರನಿಗೂ, ಬೃಹಸ್ಪತಿಗೂ 'ತವದೇವಲತಾ' ಎಂಬ ಮಂತ್ರದಿಂದ ಸ್ವಾಹಾಪೂರ್ವಕವಾಗಿ ಹೋಮ ಮಾಡಬೇಕು.

**ಸ್ವಾಹೇತಿ ಜುಹುಯಾತ್ಪಶ್ಚಾತ್ಪ್ರಣೀತಾಂ ಚಾಲಯೇತ್ತತಃ ।**
**ಕನಿಷ್ಠಪಕ್ಷೇ ಪ್ರಾಸಾದೇ ತಥಾ ಚೈವ ಜಲಾಶಯೇ ॥ ೨೮೦ ॥**

**ಮಂದರೇ ತೋರಣಸ್ಯೈವ ವಿಷ್ವಕ್ಸೇನಂ ಪ್ರಕಲ್ಪಯೇತ್ ।**
**ಆರಾಮೇ ಚ ತಥಾ ಸೇತೌ ವಿಶೇಷಃ ಪಂಚಮೋ ದ್ವಿಜಾಃ ॥ ೨೮೧ ॥**

**ಪೂಜಾಂತರೇಣ ಯಃ ಕಸ್ಯ ಜಪೇನ್ಮಂತ್ರಸಹಸ್ರಕಂ ।**
**ಸ್ತುತಿಂ ಸಮಾಪ್ಯ ವಿಧಿವದಿಮಂ ಮಂತ್ರಮುದಾಹರೇತ್ ॥ ೨೮೨ ॥**

**ಸರ್ವಸತ್ವೇಭ್ಯ ಉಚ್ಛಿಷ್ಟಂ ಅಪಿ ತಜ್ಜಲಮುದ್ಧೃತಂ ।**
**ಇತಿ ಪಠಿತ್ವಾ ಪುಷ್ಕರಿಣೀಜಲಂ ಹಸ್ತೇ ಗೃಹೀತ್ವಾ ಜಲೇ ಕ್ಷಿಪೇತ್ ॥ ೨೮೩॥**

**ತತೋ ಜಲಮಾತೃಭ್ಯೋ ನಮ ಇತಿ ಜಲಮಾತ್ಯಃ ಪ್ರಪೂಜಯೇತ್ ।**
**ತ್ರೈಲೋಕ್ಯೇ ಯಾನಿ ಸ್ಥಾನಾನಿ ಸ್ಥಾವರಾಣಿ ಚರಾಣಿ ಚ ॥ ೨೮೪ ॥**

---

೨೮೦. ಅನಂತರ ಪ್ರಣೀತಾಪಾತ್ರೆಯನ್ನು ಕದಲಿಸಬಹುದು. ಪ್ರಾಸಾದ ಪ್ರತಿಷ್ಠೆ, ಜಲಾಶಯಪ್ರತಿಷ್ಠೆ ಇವುಗಳ ಕನಿಷ್ಠಪಕ್ಷಯಾಗ ಕ್ರಮವು ಬೇರೆಯಿದೆ.

೨೮೧ ಆಗ ಜಲಾಶಯ ಪ್ರಾಸಾದ ಇವುಗಳ ಬಹಿರ್ಭಾಗದಲ್ಲಿ ವಿಷ್ವಕ್ಸೇನನ್ನು ಕಲ್ಪಿಸಬೇಕು. ಎಲೈ ಬ್ರಾಹ್ಮಣರೇ! ಆರಾಮಪ್ರತಿಷ್ಠೆ ಸೇತುಪ್ರತಿಷ್ಠಾ ವಿಷಯದಲ್ಲಿ ಇವೆಲ್ಲಕ್ಕಿಂತಲೂ ಬೇರೆಯಾಗಿ ಐದನೆಯ ವಿಶೇಷವಿಧಿಯಿದೆ.

೨೮೨. ಯಾವನು ಪೂಜಾಮಂತ್ರವನ್ನು ಸಾವಿರಸಾರಿ ಜಪಿಸುತ್ತಾನೆಯೋ ಅವನು ವಿಧಿಯಪ್ರಕಾರ ಆ ಸ್ತುತಿಯನ್ನು ಪೂರ್ತಿಮಾಡಿ ಮುಂದೆ ಕಾಣಿಸಿದ ಈ ಮಂತ್ರವನ್ನು ಹೇಳಬೇಕು.

೨೮೩. ಉಚ್ಛಿಷ್ಟವಾದಾಗ್ಯೂ ಈಜಲವು ಎಲ್ಲಾ ಪ್ರಾಣಿಗಳ ಉಪಯೋಗಾರ್ಥವಾಗಿ ಉದ್ಧರಿಸಟ್ಟಿದೆ ಎಂಬದಾಗಿ ಹೇಳಿ ರಜತಪುಷ್ಕರಿಣಿಯಲ್ಲಿ ಪೂಜಿಸಿದ ಆ ನೀರನ್ನು ಕೆರೆಯ ನೀರಿನಲ್ಲಿ ಬೆರಸತಕ್ಕದ್ದು.

೨೮೪. ಅನಂತರ ಜಲಮಾತೃದೇವತೆಗಳಿಗೆ ನಮಸ್ಕಾರ ಎಂದು ಹೇಳಿ: ಜಲ ದೇವತೆಗಳನ್ನು ಪೂಜಿಷಬೇಕು. ಮೂರು ಲೋಕಗಳಲ್ಲಿ ಯಾವ ಯಾವ ಸ್ಥಾವರ ಜಂಗಮವ್ಯಕ್ತಿಗಳುಂಟೋ

ತೇಷಾಮಾಪ್ಯಾಯನಾಯೈತಜ್ಜಲಮುತ್ಸೃಜತೆ ಮಯಾ ।
ಮಾತ್ರೇ ತು ಕೃತಮೇತತ್ತೇ ಜಗದಾನಂದಕಾರಕಂ ॥ ೨೮೫ ॥

ಶಿವಾಯ ಸರ್ವಭೂತಾನಾಂ ಸದಾ ಪಾಹಿ ಜಲಾಶಯಂ ।
ಪಿಬಂತೋ ಹ್ಯವಗಾಹಂತಃ ಸುಖಿನಃ ಸರ್ವಜಂತವಃ ॥ ೨೮೬ ॥

ಜಲಂ ವಿಶ್ವೋಪಕಾರಾಯ ಕೃತಮೇತನ್ಮಯಾ ಸದಾ ।
ಕೀರ್ತಿಸ್ತಿಷ್ಠತು ಮೇ ದೇವಾಚ್ಚಿರಾಯ ಧರಣೀತಲೇ ॥ ೨೮೭ ॥

ತ್ವತ್ಪ್ರಸಾದಾನ್ಮಹಾಭಾಗ ನಾಗರಾಜ ನಮೋಽಸ್ತು ತೇ ।
ಯೇಽತ್ರ ಕೇಚಿದ್ವಿಪದ್ಯಂತೇ ಸ್ವಕರ್ಮಫಲಭೋಜನಾಃ ॥ ೨೮೮ ॥

ತೇಷಾಂ ದೋಷೈರ್ನ ಲಿಪ್ಯೇಽಹಂ ಸ್ವಂಸ್ವಂ ಗನುಮವಾಪ್ನುಯಾತ್ ।
ನಾರಾಯಣೋ ಜಗತ್ಪ್ರಾಣಃ ಸರ್ವಕಾಮಪ್ರದಾಯಕಃ ॥ ೨೮೯ ॥

---

೨೮೫. ಅವುಗಳ ಆನಂದಕ್ಕಾಗಿ ನಾನು ಈ ಜಲಾಶಯವನ್ನು ಬಿಟ್ಟುಕೊಟ್ಟಿದ್ದೇನೆ. ನಾನು ಮಾಡಿದ ಈ ಕೆಲಸವು ಜಗತ್ತಿಗೆ ಆನಂದಕರವೂ, ಮಾತೃವಿಗೆ ಸಂತೋಷಕರವೂ ಆಗಲಿ. ಎಂದು ಉತ್ಸರ್ಜನಮಾಡಬೇಕು.

೨೮೬. ಈ ಜಲಾಶಯವು ಸರ್ವಭೂತಗಳಿಗೂ, ಮಂಗಳಕರವಾಗಿ ಪರಿಣಮಿಸುವಂತೆ ಮಾಡಿ ಕಾಪಾಡು. ಈ ಜಲಾಶಯದ ನೀರನ್ನು ಪಾನಮಾಡಿದ ಜಂತುಗಳಿಗೂ ಈ ಜಲದಲ್ಲಿಳಿದು ಮುಳುಗುಹಾಕಿದ ಜಂತುಗಳಿಗೂ ಸುಖವುಂಟಾಗಲಿ.

೨೮೭. ಇದರ ಜಲವು ಸದಾ ಪ್ರಪಂಚದ ಉಪಕಾರಾರ್ಥವಾಗಿರಲಿ ಎಂಬದಾಗಿ ನಾನು ಮಾಡಿಸಿದ್ದೇನೆ. ಇದರಿಂದ ಭೂಮಂಡಲದಲ್ಲಿ ನನ್ನ ಕೀರ್ತಿಯು ಬಹಳ ಕಾಲ ಸ್ಥಿರವಾಗಿ ನಿಲ್ಲಲಿ.

೨೮೮. ಪೂಜ್ಯನಾದ ನಾಗರಾಜನೇ! ನಿನ್ನ ಅನುಗ್ರಹದಿಂದ ಹೀಗೆ ಆಗಲಿ ನಿನಗೆ ನಮಸ್ಕಾರ. ಯಾರಾದರೂ ತಮ್ಮ ಪ್ರಾರಬ್ಧಕರ್ಮವನ್ನು ಅನುಭವಿಸಲೇಬೇಕಾಗಿ ಈ ಜಲಾಶಯದಿಂದ ವಿಪತ್ತನ್ನು ಹೊಂದಬಹುದು.

೨೮೯. ಅವರವರು ಹೊಂದಬೇಕಾದ ಗತಿಯನ್ನು ಅವರು ಹೊಂದುತ್ತಾರೆಯಾಗಿ ಅಂಥವರ ದೋಷಕ್ಕೂ ನನಗೂ ಯಾವ ಸಂಬಂಧವೂ ಇಲ್ಲದಿರಲಿ. ಸಮಸ್ತ

ಅಪೇಯಾ ಮಾತರಃ ಸಂತು ಜಗತಾಂ ವೃಕ್ಷಯೋನಯಃ ।
ಅಪಾಂಪತೇ ರಸಾಯಾತ್ರ ಯಾದಸಾಮೀಶ್ವರ ಪ್ರಭೋ ॥ ೨೯೦ ॥

ವರುಣಾಸ್ಯಸನೇ ಕೀರ್ತಿಂ ಸನಾತನ ನಮೋಽಸ್ತು ತೇ ।
ತತೋಽಯಂ ವಿಧಿವದ್ದದ್ಯಾದ್ದಕ್ಷಿಣಾರ್ಥಂ ದ್ವಿಜನ್ಮನೇ ॥ ೨೯೧ ॥

ಸುವರ್ಣಂ ರಜತಂ ದದ್ಯಾದನಡ್ವಾಹಂ ಪಯಸ್ವಿನೀಂ ।
ದದ್ಯಾದ್ಧೇನುದ್ವಯಂ ಪಶ್ಚಾತ್ಕುರ್ಯಾದ್ಬ್ರಾಹ್ಮಣತರ್ಪಣಂ ॥ ೨೯೨ ॥

ವಹ್ನಿಪೂಜಾಂ ಪುರಸ್ಕೃತ್ಯ ಮಂತ್ರೇಣ ಪ್ರಾಶಯೇತ್ತತಃ ।
ಪಿತೄಣಾಂ ದಾಪಯೇದರ್ಘ್ಯಂ ತತೋ ದೇವಂ ಪ್ರಸಾದಯೇತ್ ॥ ೨೯೩ ॥

ಬಿಂಬಮುದ್ರಾಂ ಪದ್ಮಮುದ್ರಾಂ ನಾಗಮುದ್ರಾಂ ಪ್ರದರ್ಶಯೇತ್ ।
ವೈಶ್ವಾನರಾ ಇತಿ ಋಚಾ ಪೂಜಾಂ ಕೃತ್ವಾ ವಿಸರ್ಜಯೇತ್ ॥ ೨೯೪ ॥

---

ಇಷ್ಟಾರ್ಥಗಳನ್ನು ಕೊಡತಕ್ಕವನೂ ಜಗತ್ತಿಗೆ ಪ್ರಾಣಸ್ವರೂಪನೂ ಆದ ನಾರಾಯಣನೂ ಜಲದೇವತೆಯೂ ಈ ಇಬ್ಬರೂ

೨೯೦.-೨೯೩. ಲೋಕದಲ್ಲಿ ಹುಟ್ಟುವ ವೃಕ್ಷಾದಿಗಳಿಗೆ ತಾಯಂದಿರು ಆದುದರಿಂದ ವರುಣನು ಇಲ್ಲಿ ನೆಲಸುವುದಕ್ಕಾಗಿ 'ಜಲಜಂತುಗಳಿಗೆ ಒಡೆಯನೂ, ಜಲಾಧಿಪನೂ ಆದ ಪ್ರಭುವೇ! ಇಲ್ಲಿ ಸರ್ವದಾ ನೀರಿರುವಂತೆ ಅನುಗ್ರಹಮಾಡು. ಪುರಾತನನೇ' ನಿನಗೆ ನಮಸ್ಕಾರ! ಎಂದು ಕೀರ್ತಿಸಬೇಕು. ಆ ಜಲವನ್ನು ವಿಧಿಪ್ರಕಾರ ದಕ್ಷಿಣೆಯೊಡನೆ ಬ್ರಾಹ್ಮಣನಿಗೆ ಕೊಡಬೇಕು. ಈ ಪ್ರತಿಷ್ಠಾಕಾರ್ಯ ಸಾಂಗವಾಗಿ ಸಿದ್ಧಿಸುವುದಕ್ಕಾಗಿ ಹಾಲುಕರೆಯುವ ಎರಡು ಹಸುವನ್ನೂ ಒಂದು ಎತ್ತನ್ನೂ ಬ್ರಾಹ್ಮಣನಿಗೆ ದಾನಕೊಡಬೇಕು. ಮತ್ತು ಇತರ ಬ್ರಾಹ್ಮಣರನ್ನು ಶಕ್ತಿಯಿದ್ದಷ್ಟುಮಟ್ಟಿಗೆ ತೃಪ್ತಿಪಡಿಸಬೇಕು. ಅಗ್ನಿಪೂಜೆಯನ್ನು ಮಾಡಿ ಅನಂತರ ಮಂತ್ರಪೂರ್ವಕವಾಗಿ ಆ ಜಲವನ್ನು ಪ್ರಾಶನಮಾಡಬೇಕು. ಆ ಮೇಲೆ ಪಿತೃಗಳಿಗೆ ಅರ್ಘ್ಯವನ್ನು ಕೊಡಬೇಕು. ಅನಂತರ ದೇವರನ್ನು ಪೂಜಿಸಿ ಒಲಿಸಿಕೊಳ್ಳಬೇಕು.

೨೯೪. ಬಿಂಬಮುದ್ರೆ, ಪದ್ಮಮುದ್ರೆ, ನಾಗಮುದ್ರೆಗಳನ್ನು ತೋರಿಸಬೇಕು. ವೈಶ್ವಾನರಾಯ ಎಂಬ ಮಂತ್ರ ಹೇಳಿ ಪೂಜೆಮಾಡಿ ಉತ್ಸರ್ಜನಮಾಡಬೇಕು.

**ಯಸ್ತೇ ಪ್ರಾಣಾ ಜಪನ್ಪಶ್ಚಾತ್ಪ್ರಕುರ್ಯಾದಥ ವಂದನಂ ।**
**ಪ್ರದಕ್ಷಿಣಂ ತತಃ ಪಶ್ಚಾತ್ತಡಾಗಸ್ಯ ಶೃಣು ದ್ವಿಜಾಃ ॥ ೨೯೫ ॥**

**ಬ್ರಾಹ್ಮಣಾ ಪುರತಃ ಕೃತ್ವಾ ವೇದಘೋಷಂ ಸಮುಚ್ಚರನ್ ।**
**ಮಹಾಮಂಗಲಪೂರ್ವೇಣ ಪ್ರವಿಶೇದ್ಭವನಂ ಸುಧೀಃ ॥ ೨೯೬ ॥**

**ತತೋ ಗೃಹಾರ್ಚನಂ ಕುರ್ಯಾದ್ಬ್ರಾಹ್ಮಣಾನಾಂ ಚ ಭೋಜನಂ ।**
**ದೀನಾನಾಂ ಕೃಪಣಾನಾಂ ಚ ಸವಿತ್ರೇಽರ್ಘ್ಯಂ ನಿವೇದಯೇತ್ ॥ ೨೯೭ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ದ್ವಿತೀಯಭಾಗೇ ವಿಂಶೋಽಧ್ಯಾಯಃ.**



---

೨೯೫-೨೯೬. ಓ ಬ್ರಾಹ್ಮಣರೇ! ಕೇಳಿ; 'ಯಸ್ತೇಪ್ರಾಣಾ' ಎಂಬ ಮಂತ್ರವನ್ನು ಜಪಿಸುತ್ತಾ ವಂದನಸಮರ್ಪಣ ಮಾಡಬೇಕು. ಅನಂತರ ಬ್ರಾಹ್ಮಣರವೃಂದವನ್ನು ಮುಂದೆ ಮಾಡಿಕೊಂಡು ವೇದಘೋಷ ಮಾಡುತ್ತಾ ಕೆರೆಯಸುತ್ತಲೂ ಪ್ರದಕ್ಷಿಣೆಮಾಡಬೇಕು. ಗೃಹಪ್ರತಿಷ್ಠಾ ಸಂದರ್ಭವಾದರೆ ಮಂಗಳವಾದ್ಯ ಸಮೇತ ಮನೆಯನ್ನು ಪ್ರವೇಶಮಾಡಬೇಕು.

೨೯೭. ಆಮೇಲೆ ಗೃಹದ ದೇಹಳಿಯನ್ನು (ಹೊಸಲು) ಪೂಜೆಮಾಡಿ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ದೀನರಿಗೂ, ಕೃಪಣರಿಗೂ ಅನ್ನದಾನ ಮಾಡಿ ತೃಪ್ತಿಪಡಿಸಿ ಸೂರ್ಯನಿಗೆ ಅರ್ಘ್ಯಪ್ರದಾನಮಾಡಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಎರಡನೆಯ ಭಾಗದಲ್ಲಿ ಇಪ್ಪತ್ತನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮ ಪರ್ವಣಿ ದ್ವಿತೀಯಭಾಗೇ
## ಏಕವಿಂಶೋಽಧ್ಯಾಯಃ

---

॥ ಸೂತ ಉವಾಚ ॥

ಸಪ್ತಾಗ್ನಿಷ್ಟೋಮಕೋ ನಾಮ ಹ್ಯುತ್ತಮಃ ಕಥಿತೋ ವಿಧಿಃ ।
ಮಧ್ಯಮೋ ಮಧ್ಯಮಫಲಂ ಕನಿಷ್ಠೇ ತು ಕನಿಷ್ಠಕಂ ॥ ೧ ॥

ಅಧುನಾ ಮಧ್ಯಮಂ ವಕ್ಷ್ಯೇ ವಿಧಿಂ ಶಾಸ್ತ್ರಾನುಸಾರತಃ ।
ಯಥಾ ವಿಭವಯೋಗೇನ ಯತ್ಕರ್ತವ್ಯಂ ನರೇಣ ವೈ ॥ ೨ ॥

ಸದ್ಯೋಽಧಿವಾಸಕಲ್ಪೇನ ಯೂಪಾದೀನಧಿವಾಸ್ಯ ಚ ।
ಪೂರ್ವಸ್ಮಿನ್ನೇವ ದಿವಸೇ ದೈವಜ್ಞಕಥಿತೇ ಶುಭೇ ॥ ೩ ॥

---

### ಇಪ್ಪತ್ತೊಂದನೆಯ ಅಧ್ಯಾಯ

೧ ಸೂತರು ಮುಂದುವರಿಸಿ ಹೇಳುತ್ತಾರೆ—ಸಪ್ತಾಗ್ನಿಷ್ಟೋಮವೆಂಬ ಹೋಮದ ಉತ್ತಮ ವಿಧಾನವನ್ನು ಹೇಳಿ ಆಯಿತು. ಇದನ್ನು ಮಧ್ಯಮವಿಧಿಯಲ್ಲಿ ಮಾಡಿದವರಿಗೆ ಮಧ್ಯಮಪ್ರಕಾರದ ಫಲವೂ ಕನಿಷ್ಠವಿಧಿಯಲ್ಲಿ ಮಾಡಿದರೆ ಕನಿಷ್ಠ ದರ್ಜೆಯ ಫಲವೂ ಲಭಿಸುವುದು.

೨. ಈಗ ಶಾಸ್ತ್ರಾನುಸಾರವಾಗಿ ಮಾಡಬಹುದಾದ ಮಧ್ಯಮವಿಧಾನವನ್ನು ಹೇಳುತ್ತೇನೆ. ಈ ಪ್ರತಿಷ್ಠಾಯಾಗ ಮಾಡುವವನು ವಿಭವಪೂರ್ವಕವಾಗಿ ಉತ್ತಮ ವಿಧಾನದಲ್ಲಿ ನಡೆಸುವಾಗ

೩. ಜ್ಯೋತಿಷ್ಕನು ಪ್ರತಿಷ್ಠೆಗೆ ನಿಷ್ಕರ್ಷೆಮಾಡಿದ ಶುಭಮುಹೂರ್ತದ ದಿವಸದ ಹಿಂದಿನ ದಿನ ಯೂಪ ಮೊದಲಾದುವನ್ನು ಯಾವ ಕಲ್ಪದ ರೀತಿ ಅಧಿವಾಸ ಮಾಡಲಾಗಿತ್ತೋ ಅದೇರೀತಿ ಸದ್ಯಃ ಅಧಿವಾಸಮಾಡಬೇಕು.

**ಮುಹೂರ್ತೇ ಕಲಶಂ ಸ್ಥಾಪ್ಯ ಸಂಗೃಹ್ಯ ಗಣನಾಯಕಂ ।**
**ಸ್ಥಾಪಯೇತ್ಪ್ರಥಮಂ ಯೂಪಮಾಪೋಹಿಷ್ಠೇತಿ ಮಂತ್ರಕೈಃ ॥ ೪ ॥**

**ಶನ್ನೋ ದೇವ್ಯಾಸ್ತತಃ ಪಶ್ಚಾದ್ಗಂಧದ್ವಾರೇತಿ ಗಂಧಕಂ ।**
**ಶ್ರೀಸೂಕ್ತೇನ ತತೋ ದದ್ಯಾತ್ಪುಷ್ಪಂ ದೂರ್ವಾಕ್ಷತಂ ತತಃ ॥ ೫ ॥**

**ಕಾಂಡಾದಿತಿ ಚ ಮಂತ್ರೇಣ ತತೋ ಧೂಪಂ ನಿವೇದಯೇತ್ ।**
**ಯೋ ಗೃಹ್ಣಾಮೀತಿ ಚ ಋಚಾ ಪೂಜಾಯಾಂ ಸ್ಥಾಪಯೇತ್ತತಃ ॥ ೬ ॥**

**ವಿವಾಹವಿಧಿನಾ ಸರ್ವಂ ಕಾರ್ಯಂ ಚೈವಾಧಿವಾಸನಂ ॥ ೭ ॥**

**ಸರ್ವಮೇವ ಪ್ರಯುಂಜೀತ ತಡಾಗಾದಿಷು ಪಂಡಿತಃ ।**
**ಅಧಿವಾಸ್ಯ ತಡಾಗಾದೀನ್ ಆಚಾರ್ಯಾದೀಂಶ್ಚ ಸರ್ವಶಃ ॥ ೮ ॥**

---

೪. ಶುಭಮುಹೂರ್ತದಲ್ಲಿ ಕಲಶ ಸ್ಥಾಪನೆ ಮಾಡಬೇಕು. ಗಣಪತಿಯನ್ನು ಆವಾಹನಾದಿಗಳಿಂದ ಪೂಜಿಸಬೇಕು. ಆ ಮೇಲೆ ಯೂಪವನ್ನು 'ಆಪೋಹಿಷ್ಠಾ' ಎಂಬ ಮಂತ್ರಪೂರ್ವಕವಾಗಿಯೂ

೫-೭. ಆಮೇಲೆ 'ಶನ್ನೋದೇವೀ' ಎಂಬ ಮಂತ್ರದಿಂದಲೂ ಪ್ರೋಕ್ಷಣಮಾಡಬೇಕು ಅನಂತರ 'ಗಂಧದ್ವಾರಾಂ' ಎಂಬ ಮಂತ್ರದಿಂದ ಗಂಧವನ್ನು ಹಚ್ಚಬೇಕು. ಶ್ರೀಸೂಕ್ತಮಂತ್ರದಿಂದ ಪುಷ್ಪವನ್ನೂ ಕಾಂಡಾತ್ಕಾಂಡಾ ಎಂಬ ಮಂತ್ರದಿಂದ (ದೂರ್ವಾಸಮೇತ ಅಕ್ಷತೆಯನ್ನೂ ಬಳಿಕ) ಧೂಪವನ್ನೂ ಸಮರ್ಪಿಸಿ ಅನಂತರ 'ಯೋಗೃಹ್ಣಾಮಿ' ಎಂಬ ಮಂತ್ರಪೂರ್ವಕವಾಗಿ ಪೂಜಾಸ್ಥಳದಲ್ಲಿ ಸ್ಥಾಪಿಸಬೇಕು. ಈ ಅಧಿವಾಸಕಾರ್ಯವೆಲ್ಲವನ್ನೂ ವಿವಾಹವಿಧಿಯಿಂದಲೇ ನಡೆಯಿಸಬೇಕು.

೮. ಪಂಡಿತನಾದವನು ತಡಾಗ ಮುಂತಾದುವುಗಳ ಪ್ರತಿಷ್ಠೆಯಲ್ಲಿ ಎಲ್ಲ ಕಾರ್ಯವನ್ನೂ ಅದೇ ವಿಧಿಯಲ್ಲಿ ಪ್ರಯೋಗಿಸಬೇಕು. ಆಚಾರ್ಯ, ಋತ್ವಿಜರು ಮೊದಲಾದವರನ್ನು ಸಿದ್ಧಪಡಿಸಿಕೊಂಡು ಹಿಂದಿನ ರಾತ್ರಿಯೇ ತಟಾಕ ಪ್ರತಿಮಾದಿಗಳನ್ನು ಅಧಿವಾಸಮಾಡಿಸಿ

ಸಂಗೃಹ್ಯ ಗಂಧಪುಷ್ಪಾದ್ಯೈರ್ಧೂಪೈರ್ದೀಪೈಃ ಸುಶೋಭನೈಃ ।
ತತಃ ಪ್ರಭಾತಸಮಯೇ ನಿತ್ಯಂ ನಿರ್ವರ್ತ್ಯ ಶಾಸ್ತ್ರತಃ ॥ ೯ ॥

ವೃದ್ಧಿಶ್ರಾದ್ಧಂ ತತಃ ಕುರ್ಯಾನ್ಮಾತೃಪೂಜಾಪುರಸ್ಸರಂ ।
ಅಲಂಕೃತ್ಯ ಯಥಾಶಕ್ತಿ ಆಚಾರ್ಯಾದೀಂಶ್ಚರೇದ್ಬುಧಃ ॥ ೧೦ ॥

ವೃಣುಯಾತ್ಪಶ್ಚಿಮೇ ಭಾಗೇ ಮಂಡಪಸ್ಯ ಸಮೀಪತಃ ।
ಮಧ್ಯದೇಶೇ ಸಮುದ್ಭೂತಂ ಯಜ್ಞಪಾತ್ರಂ ಪ್ರಶಸ್ಯತೆ ॥ ೧೧ ॥

ಅಥವಾ ತತ್ರ ದೇಶೀಯಂ ಗುರುಂ ವಾ ಶ್ರೋತ್ರಿಯೋದ್ಭವಂ ।
ಯಜ್ಞೇ ಪ್ರಧಾನದ್ವಿತೀಯಮೃತ್ವಿಗಾಚಾರ್ಯಮೇವ ಹಿ ॥ ೧೨ ॥

ವೈತಾನಕಲ್ಪೇ ಸಂಪನ್ನಂ ಶಕ್ತಿಕಲ್ಪಪರಾಯಣಂ ।
ನಿಗಮಜ್ಞಾನಸಂಪನ್ನಂ ಯಜ್ಞೇ ಪಾತ್ರಂ ಪ್ರಶಸ್ಯತೆ ॥ ೧೩ ॥

---

೯. ಬಳಿಕ ಗಂಧ, ಪುಷ್ಪ, ಧೂಪ, ದೀಪ ಮೊದಲಾದುವುಗಳಿಂದಲೂ, ಮಂಗಳದ್ರವ್ಯಗಳಿಂದಲೂ ಅರ್ಚಿಸಬೇಕು. ಮಾರನೆಯದಿನ ಉಷಃಕಾಲಕ್ಕೆದ್ದು ಶಾಸ್ತ್ರಪ್ರಕಾರ ನಿತ್ಯಕರ್ಮಗಳನ್ನು ನೆರವೇರಿಸಬೇಕು.

೧೦. ಬಳಿಕ ನಾಂದೀ ಮಾತೃ ಪೂಜಾದಿಗಳನ್ನೂ ವೃದ್ಧಿಶ್ರಾದ್ಧವನ್ನೂ ಮಾಡಬೇಕು. ಪ್ರಾಜ್ಞನಾದವನು ಆಚಾರ್ಯರು ಮುಂತಾದವರನ್ನು ತನ್ನ ಅನುಕೂಲವಿದ್ದಷ್ಟುಮಟ್ಟಿಗೆ ವಸ್ತ್ರಾದಿಗಳಿಂದ ಅಲಂಕರಿಸಿ ಕರೆದೊಯ್ಯಬೇಕು.

೧೧–೧೩. ತಾನು ಮಂಟಪದ ಪಶ್ಚಿಮಭಾಗದಲ್ಲಿ ಸ್ಥಾನಕಲ್ಪಿಸಿಕೊಂಡು ತನ್ನ ಗ್ರಾಮದ ಸಮೀಪದಲ್ಲೋ, ಮಧ್ಯದೇಶದಲ್ಲೋ ಜನ್ಮವೆತ್ತಿದವನೂ ಯಜ್ಞಪಾತ್ರನೂ ಶ್ರೇಷ್ಠನೂ ಆದವನನ್ನೋ ಅಥವಾ ಆ ಪ್ರಾಂತದವನಾಗಿ ಬೇರೆಕಡೆ ವಾಸಿಸುತ್ತಿರುವ ಶ್ರೋತ್ರಿಯಕುಲೋತ್ಪನ್ನನಾದವನನ್ನೋ ಯಜ್ಞದಲ್ಲಿ ಪ್ರಧಾನ (ಆಚಾರ್ಯ) ನನ್ನಾಗಿಯೂ, ಇನ್ನೊಬ್ಬನನ್ನು ಋತ್ವಿಗಾಚಾರ್ಯನನ್ನಾಗಿಯೂ ಸ್ವೀಕರಿಸಬೇಕು. ಯಜ್ಞದಲ್ಲಿ ಪಾತ್ರನೆನಿಸುವಾತನು ಯಾಗಕಲ್ಪವನ್ನು ತಿಳಿದವನೂ, ಶಕ್ತಿಪೂಜಾಕಲ್ಪದಲ್ಲಿ ಆಸಕ್ತನೂ, ಶಾಸ್ತ್ರಜ್ಞಾನಪೂರ್ಣನೂ ಆಗಿದ್ದರೆ ಉತ್ತಮ.

**ಪತ್ನೀಹೀನಮಪುತ್ರಂ ಚ ಶ್ಯಾವದಂತಮದಂತಕಂ ।**
**ಗಣಾನಾಂ ಯಾಜಕಂ ಷಂಡಂ ಸ್ವಗೋತ್ರಂ ಪರಿವರ್ಜಯೇತ್ ॥ ೧೪ ॥**

**ಅಪ್ರಧಾನೇಷು ಯಜ್ಞೇಷು ದಾನಯಜ್ಞೇಷು ಸತ್ತಮಾಃ ।**
**ನಿಯೋಜಯೇತ್ಸ್ವಗೋತ್ರಂ ಚ ಹೋಮೇ ನಾಸ್ತಿ ವಿಚಾರಣಾ ॥ ೧೫ ॥**

**ಕುಶಪ್ರತಿಕೃತೌ ಚಾಪಿ ತತಃ ಸ್ವರ್ಗಂ ಸ ಗಚ್ಛತಿ ।**
**ಧನಮಾದೌ ಚ ಸಂಶೋಧ್ಯ ತತೋ ಯಜ್ಞಂ ಸಮಾಚರೇತ್ ॥ ೧೬ ॥**

**ಅಯಾಜ್ಯಯಾಜನೋದ್ಭೂತಂ ಪಲ್ಲವಂ ವ್ಯವಹಾರಕೇ ।**
**ಕೂಟಸಾಕ್ಷ್ಯೇಣ ಪಲ್ಲವೇ ಸ್ಥಾಪ್ಯ ಹಾರಕಮೇವ ಚ ॥ ೧೭ ॥**

**ದೇವಸ್ವಂ ಬ್ರಾಹ್ಮಣಸ್ವಂ ಚ ಲೋಹವಿಕ್ರಯಣಂ ಧನಂ ।**
**ಹವಿರ್ವಿಕ್ರಯಣಂ ಕೃತ್ವಾ ಪುತ್ರಭಾರ್ಯಾದಿವಿಕ್ರಯಾ ॥ ೧೮ ॥**

---

೧೪. ಹೆಂಡತಿಯಿಲ್ಲದವನು, ಮಕ್ಕಳಿಲ್ಲದವನು, ಕಪ್ಪು ಹಲ್ಲಿನವನು, ಹಲ್ಲು ಬಿದ್ದು ಹೋದವನು, ಕ್ಷುದ್ರದೇವತೆಗಳನ್ನು ಉದ್ದೇಶಿಸಿ ಯಾಗಮಾಡುವವನು, ನಪುಂಸಕನು, ತನ್ನ ಗೋತ್ರಕ್ಕೆ ಸೇರಿದವನು, ಇಂಥವರನ್ನು ಯಜ್ಞಪಾತ್ರನನ್ನಾಗಿ ನೇಮಿಸಬಾರದು.

೧೫-೧೬. ಓ ಬ್ರಾಹ್ಮಣಶ್ರೇಷ್ಠರೇ! ಕೇಳಿ; ಅಪ್ರಧಾನವಾದ ಯಜ್ಞಗಳಲ್ಲಿಯೂ, ದಾನರೂಪವಾದ ಯಜ್ಞಗಳಲ್ಲಿಯೂ ಹೋಮಮಾಡುವುದಕ್ಕೆ ಸ್ವಗೋತ್ರದವರನ್ನು ನೇಮಿಸಬಹುದು ಹೋಮದಲ್ಲಿ ಬ್ರಾಹ್ಮಣನಿಗೆ ಪ್ರತಿನಿಧಿಯಾಗಿ ಕೂರ್ಚವನ್ನು ಕಟ್ಟಿಹಾಕಿ ಕಾರ್ಯ ನಡೆಸುವುದಕ್ಕಿಂತ ಸ್ವಗೋತ್ರದವರನ್ನಾದರೂ ನೇಮಕ ಮಾಡಬಹುದು. ಈ ವಿಷಯದಲ್ಲಿ ವಿಚಾರಮಾಡಬೇಕಾಗಿಲ್ಲ. ಅದರಿಂದ ಯಜಮಾನನ ಸ್ವರ್ಗಪ್ರಾಪ್ತಿಗೆ ಸಹಾಯವೇ ಆಗುವುದು.

೧೭. ಮೊದಲು ಧನದ ಆನುಕೂಲ್ಯವನ್ನು ನೋಡಿಕೊಂಡು ಯಜ್ಞವನ್ನು ಆಚರಿಸಬೇಕು. ಯಾಗಾನರ್ಹರಿಗೆ ಯಾಗ ಮಾಡಿಸುವುದು, ವಿಟ, ವ್ಯವಹಾರ ಸಂದರ್ಭದಲ್ಲಿ ಸುಳ್ಳುಸಾಕ್ಷ್ಯ ಹೇಳುವವನು, ವಿಟನ ಜೊತೆಯಲ್ಲಿರುತ್ತಾ ಕಳವು ಮಾಡುವವನು, ಇವರನ್ನು ನೇಮಿಸಿಕೊಂಡು ಯಜ್ಞಮಾಡುವುದು ಸಾಧುವಲ್ಲ.

೧೮. ದೇವಾಲಯದಸ್ವತ್ತು, ಬ್ರಾಹ್ಮಣನಸ್ವತ್ತು ಇವನ್ನು ಹರಣಮಾಡಿದವನು, ಲೋಹವನ್ನು ಮಾರಿ ಹಣ ಸಂಪಾದನೆ ಮಾಡಿದವನು, ಹವಿಸ್ಸನ್ನು ಮಾರಿ

ನಿಂದಿತಾನಿ ಪುರಾಣೇಷು ಯತ್ಕೃತಂ ತತ್ರ ತತ್ಫಲಂ ।
ಯಜ್ಞಸದ್ಮನಿ ವಿಪ್ರಾಂಶ್ಚ ನ ಶ್ರಾದ್ಧಾರ್ಥೇ ಭೋಜಯೇತ್ಕ್ವಚಿತ್ ॥
ನ ದದ್ಯಾತ್ತಸ್ಯ ದಾನಂ ಚ ಯಾವನ್ನೈವ ಸಮಾಪಯೇತ್ ॥ ೧೯ ॥

ಬ್ರಹ್ಮನ್ನಾಚಾರ್ಯಮುಖ್ಯೋಽಸಿ ಸಂಸಾರಾತ್ತ್ರಾಹಿ ಮಾಂ ವಿಭೋ ।
ತ್ವತ್ಪ್ರಸಾದಾದ್ಗುರೋ ಯಜ್ಞೇ ಪ್ರಾಪ್ನುಯಾಂ ಮನಸೇಪ್ಸಿತಂ ॥ ೨೦ ॥

ಚಿರಂ ಮೇ ಶಾಶ್ವತೀ ಕೀರ್ತಿರ್ಯಾವಲ್ಲೋಕಾಶ್ಚರಾಚರಾಃ ।
ಪ್ರಸೀದ ತ್ವಂ ಮಹೇಶಾನ ಪ್ರತಿಷ್ಠಾಕರ್ಮಸಿದ್ಧಯೇ ॥ ೨೧ ॥

ತ್ವಮಾದಿಃ ಸರ್ವಭೂತಾನಾಂ ಸಂಸಾರಾರ್ಣವತಾರಕ ।
ಜ್ಞಾನಾಮೃತಪ್ರದಾಚಾರ್ಯ ವಿಷ್ಣುರೂಪ ನಮೋಽಸ್ತು ತೇ ॥ ೨೨ ॥

---

ಸಂಪಾದಿಸಿದವನು, ಇಂಥವರು ಯಜ್ಞಮಾಡುವುದು ದೂಷ್ಯವೆಂದೂ, ಮಾಡಿದರೂ ಉಕ್ತಫಲಗಳನ್ನು ಕೊಡುವುದಿಲ್ಲವೆಂದೂ ಪುರಾಣಗಳಲ್ಲಿ ಹೇಳಿದೆ.

೧೯. ವೃದ್ಧಿಶ್ರಾದ್ಧಾಂಗವಾಗಿ ಮಾಡಿಸುವ ವಿಪ್ರಭೋಜನವನ್ನು ಯಜ್ಞಶಾಲೆಯಲ್ಲಿ ಮಾಡಿಸಬಾರದು. ಯಜ್ಞವು ಮುಗಿಯುವವರೆಗೂ ದಾನವನ್ನು ಕೊಡಬಾರದು.

೨೦. ಆಚಾರ್ಯನನ್ನು ಗೊತ್ತುಮಾಡಿಕೊಂಡು ಆತನನ್ನು ಕುರಿತು ಈ ರೀತಿ ಹೇಳಬೇಕು. " ಎಲೈ ವಿಭುವಾದ ಬ್ರಾಹ್ಮಣನೇ ! ನೀನು ಆಚಾರ್ಯ ಪ್ರಮುಖನಾಗಿದ್ದೀ; ನನ್ನನ್ನು ಭವಬಂಧನದಿಂದ ರಕ್ಷಿಸು, ಎಲೈ ಗುರುವೇ! ನಿನ್ನ ಅನುಗ್ರಹವಿರಲಾಗಿ ಈ ಯಜ್ಞದ ಮೂಲಕವಾಗಿ ನನ್ನ ಇಷ್ಟಾರ್ಥವನ್ನು ಹೊಂದುತ್ತೇನೆ. "

೨೧. " ಓ ಪರಮೇಶ್ವರಸ್ವರೂಪನೇ ! ಚರಾಚರಾತ್ಮಕವಾದ ಈ ಲೋಕವಿರುವವರೆಗೂ ನನಗೆ ಕೀರ್ತಿಯು ಸ್ಥಿರವಾಗಿರುವಂತೆಯೂ, ನಾನು ಮಾಡುವ ಈ ಪ್ರತಿಷ್ಠಾಕಾರ್ಯವು ಸಿದ್ಧಿಸುವಂತೆಯೂ ಅನುಗ್ರಹಿಸು. "

೨೨. " ನೀನು ಸಂಸಾರವೆಂಬ ಸಮುದ್ರವನ್ನು ದಾಟಿಸತಕ್ಕವನೂ, ಸಮಸ್ತ ಭೂತಗಳಿಗೂ ಆದಿಸ್ವರೂಪನೂ, ಆಗಿದ್ದೀ. ಅಮೃತಸದೃಶವಾದ ಜ್ಞಾನವನ್ನುಂಟುಮಾಡುವ ಆಚಾರ್ಯನೂ, ಮಹಾವಿಷ್ಣುಸ್ವರೂಪನೂ ಆದ ನಿನಗೆ ನಮಸ್ಕಾರ. "

ಬ್ರಹ್ಮಾನನಸಮುದ್ಭೂತಂ ಪ್ರಕಾಶಿತದಿಗಂತರಂ ।
ತ್ವಂ ಚ ಜಾಂಬೂನದಪ್ರಖ್ಯ ಯಜುರ್ವೇದ ನಮೋಽಸ್ತು ತೇ ॥ ೨೩ ॥

ಪ್ರಫುಲ್ಲಕಮಲೋದ್ಭಾಸಿ ಭಾಸ್ವರಾಂಬರಭೂಷಿತ ।
ಪ್ರಕೀರ್ಣಶಾಸ್ತ್ರಸಂಭಾರ ವಿಧಿಜ್ಞ ಪ್ರಣತೋಽಸ್ಮಿ ತೇ ॥ ೨೪ ॥

ಜ್ವಲದ್ವೈಶ್ವಾನರಪ್ರಖ್ಯ ಧೂಮಶ್ಯಾಮಲಿತಾನನ ।
ಷಡಂಗವೇದತತ್ವಜ್ಞ ಋತ್ವಿಜ್ಮೋಕ್ಷಂ ಸಮಾಚರ ॥ ೨೫ ॥

ತತಸ್ತೂರ್ಯಾದಿಘೋಷೇಣ ಪುರಸ್ಕೃತ್ಯ ದ್ವಿಜೋತ್ತಮಾನ್ ।
ಯಜಮಾನಃ ಸಪತ್ನೀಕಃ ಪ್ರವಿಶೇದ್ಯಾಗಮಂಡಪಂ ॥ ೨೬ ॥

ಸ್ವಸ್ಥಾನೇ ಸ್ಥಾಪಯೇದ್ವಿಪ್ರಾನ್ಮಖೇ ಧರ್ಮ್ಯೈರ್ಯಥಾಕ್ರಮಂ ।
ಪೂಜಯೇದ್ಗಂಧಮಾಲ್ಯಾದ್ಯೈರ್ಗಂಧಾದ್ಯೈಃ ಸುಮನೋಹರೈಃ ॥ ೨೭ ॥

---

೨೩. " ಬ್ರಹ್ಮನ ಮುಖದಿಂದ (ಬಾಯಿಯಿಂದ) ಹೊರಟುದೂ, ದಿಕ್ಕುಗಳನ್ನೆಲ್ಲಾ ಪ್ರಕಾಶಪಡಿಸುತ್ತಾ ಇರುವುದೂ, ಬಂಗಾರದಂತೆ ತೇಜೋಮಯವಾದುದೂ ಆದ ಯಜುರ್ವೇದಸ್ವರೂಪವಾದ ನಿನಗೆ ನಮಸ್ಕಾರ. "

೨೪. " ವಿಕಸಿತವಾದ ಕಮಲದ ಕಾಂತಿಯಂತೆ ಪ್ರಕಾಶಿಸುವ ವಸ್ತ್ರಗಳಿಂದ ಅಲಂಕೃತನೂ, ವಿಸ್ತಾರವಾಗಿ ಸರ್ವಶಾಸ್ತ್ರಗಳ ವಿಧಿಯನ್ನು ತಿಳಿದವನೂ ಆದ ನಿನಗೆ ನಮಸ್ಕಾರ. "

೨೫. "ಪ್ರಜ್ವಲಿಸುತ್ತಿರುವ ಅಗ್ನಿಯಂತೆ ಕಾಂತಿಯುಕ್ತನೇ! ಹೊಗೆಯಿಂದ ಶ್ಯಾಮಲವರ್ಣವಾದ ಮುಖವುಳ್ಳವನೇ! ವೇದವೇದಾಂಗಗಳ ತತ್ವವನ್ನು ತಿಳಿದವನೇ! ನೀನು ಈ ಋತ್ವಿಕ್ಕುಗಳಿಗೂ ಮೋಕ್ಷ ದೊರಕುವಂತೆ ಮಾಡು."

೨೬. ಈ ಪ್ರಕಾರ ಹೇಳಿ ಅವನ ಅನುಗ್ರಹ ಪಡೆದು ಯಜಮಾನನು ಪತ್ನೀಸಮೇತನಾಗಿ ಆ ಬ್ರಾಹ್ಮಣೋತ್ತಮರನ್ನು ಮುಂದುಮಾಡಿಕೊಂಡು ಮಂಗಳವಾದ್ಯಗಳು ಮೊಳಗುತ್ತಿರುವಲ್ಲಿ ಯಾಗಮಂಟಪವನ್ನು ಪ್ರವೇಶಿಸಬೇಕು.

೨೭. ಯಜ್ಞದಲ್ಲಿ ಆ ವಿಪ್ರರು ಧರ್ಮತಃ ಎಲ್ಲೆಲ್ಲಿ ಕುಳಿತುಕೊಳ್ಳಬೇಕೋ ಆಯಾಸ್ಥಳದಲ್ಲಿ ಕ್ರಮವರಿತು ಕುಳ್ಳಿರಿಸಬೇಕು. ಮತ್ತು ಮನೋಹರವಾದ ಗಂಧ ಪುಷ್ಪ ಇವುಗಳಿಂದ ಅವರನ್ನು ಪೂಜಿಸಿ ಬಳಿಕ ಹೀಗೆ ಪ್ರಾರ್ಥಿಸಬೇಕು.

ಯಜ್ಞೇ ಸು ವಿತತೇ ಯೋಽಸೌ ಪೂಜ್ಯತೇ ಪುರುಷಃ ಸದಾ ।
ನಾರಾಯಣಸ್ವರೂಪೋಽಸೌ ಯಜ್ಞಂ ಮೇ ಸಫಲಂ ಕುರು ॥ ೨೮ ॥

ಮಖಶ್ರೇಷ್ಠೇಷು ಸರ್ವೇಷು ಯೇನ ಮಂತ್ರಾಃ ಸುವಿಸ್ತೃತಾಃ ।
ಯಜುರ್ವೇದಾರ್ಥತತ್ವಜ್ಞ ಬ್ರಹ್ಮರೂಪ ನಮೋಽಸ್ತುತೇ ॥ ೨೯ ॥

ಯಜ್ಞೇಷು ಸಾಕ್ಷೀ ಸರ್ವೇಷು ವೇದವೇದಾರ್ಥತತ್ವವಿತ್ ।
ಋಗ್ವೇದಜ್ಞ ಮಹಾಪ್ರಾಜ್ಞ ವಿಶ್ವರೂಪ ನಮೋಽಸ್ತು ತೇ ॥ ೩೦ ॥

ಮಾಂಗಲ್ಯಂ ಕರ್ಮಣಾಂ ನಿತ್ಯಂ ಶಾಶ್ವತಂ ಬ್ರಹ್ಮರೂಪಿಣಂ ।
ಸಿದ್ಧಯೇ ಮಮ ಯಜ್ಞಸ್ಯ ನಮಾಮಿ ಶಿವರೂಪಿಣಂ ॥ ೩೧ ॥

ಪಾಲಯಂತಿ ದಿಶಾಃ ಸರ್ವಾ ವಿದಿಶಶ್ಚ ತಥಾ ಇಮಾಃ ।
ದಿಕ್ಪಾಲರೂಪಿಣಂ ನಿತ್ಯಂ ಯಜ್ಞಸಿದ್ಧ್ಯೈ ನಮಾಮ್ಯಹಂ ॥
ಪಾತಯೇದ್ದಕ್ಷಿಣಂ ಜಾನು ವಿಕಿರಾನ್ವಿಕಿರೇತ್ತತಃ ॥ ೩೨ ॥

---

೨೮. "ವಿಸ್ತಾರವಾದ ಈ ಮಹಾಯಜ್ಞದಲ್ಲಿ ಯಾವಾಗಲೂ ಪೂಜಿತನಾಗುವ ನಾರಾಯಣಸ್ವರೂಪಿಯಾದ ಪುರುಷನೇ! ನಾನು ಮಾಡುವ ಯಜ್ಞವನ್ನು ಫಲಕಾರಿಯಾಗಿ ಮಾಡು."

೨೯. "ಶ್ರೇಷ್ಠಗಳಾದ ಯಜ್ಞಗಳಲ್ಲೆಲ್ಲಾ ಮಂತ್ರಗಳನ್ನು ವಿಸ್ತಾರವಾಗಿ ಹೇಳತಕ್ಕವನೂ, ಯಜುರ್ವೇದದ ಅರ್ಥವನ್ನೂ ತತ್ವವನ್ನೂ ತಿಳಿದವನೂ, ಆದ ಬ್ರಹ್ಮಸ್ವರೂಪನೇ! ನಿನಗೆ ನಮಸ್ಕಾರ."

೩೦. "ವೇದಗಳು, ವೇದಾರ್ಥಗಳು ಇವುಗಳ ತತ್ವವನ್ನು ತಿಳಿದವನೂ, ಸಮಸ್ತಯಜ್ಞಗಳಿಗೂ ಸಾಕ್ಷಿಸ್ವರೂಪನೂ, ಮಹಾಪ್ರಾಜ್ಞನೂ, ವಿಶ್ವರೂಪನೂ ಆದ ಋಗ್ವೇದಜ್ಞನೇ! ನಿನಗೆ ನಮಸ್ಕಾರ."

೩೧-೩೨. ಸಮಸ್ತಕಾರ್ಯಗಳಿಗೂ ಮಂಗಳಸ್ವರೂಪನೂ, ಶಾಶ್ವತನೂ, ಪರಬ್ರಹ್ಮಸ್ವರೂಪನೂ ಆದ ಪರಮೇಶ್ವರನನ್ನು ನನ್ನ ಯಜ್ಞವು ಸಿದ್ಧಿಯಾಗುವುದಕ್ಕೆ ನಮಸ್ಕರಿಸುತ್ತೇನೆ. ಯಜ್ಞವು ಸಿದ್ಧಿಸುವುದಕ್ಕಾಗಿ ಸಮಸ್ತ ದಿಕ್ಕುಗಳನ್ನೂ ವಿದಿಕ್ಕುಗಳನ್ನೂ ರಕ್ಷಿಸುವವರಾದ ಅಷ್ಟದಿಕ್ಪಾಲಕರನ್ನು ನಿತ್ಯವೂ ನಮಸ್ಕರಿಸುತ್ತೇನೆ. ಎಂದು ಹೇಳಿ ಅನಂತರ ಬಲಮಂಡಿಯನ್ನೂರಿ ಅಡ್ಡಬೀಳಬೇಕು.

ತ್ರೈಲೋಕ್ಯೇ ಯಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ ।
ಬ್ರಹ್ಮವಿಷ್ಣುಶಿವಾಃ ಸರ್ವೇ ರಕ್ಷಾಂ ಕುರ್ವಂತು ತಾನಿ ವೈ ॥ ೩೩ ॥

ವೇದ್ಯಾವೇದೀತಿ ಮಂತ್ರೇಣ ಪಠೇದ್ವೇದಿಂ ಪ್ರಣಮ್ಯ ಚ ।
ಸಂಪೂಜ್ಯ ಗಂಧಪುಷ್ಪಾದ್ಯೈರಿಮಂ ಮಂತ್ರಮುದಾಹರೇತ್ ॥ ೩೪ ॥

ಯಾಜನಂ ಯಜಮಾನಶ್ಚ ಶ್ರೇಯಸಾ ತತ್ರ ಯಾಜಕಃ ।
ಇದಮರ್ಘ್ಯಮಿದಂ ಪಾದ್ಯಂ ಧೂಪೋಽಯಂ ಪ್ರತಿಗೃಹ್ಯತಾಂ ॥ ೩೫ ॥

ಐಶಾನ್ಯಾಂ ಕಲಶೇ ದೇವಂ ಸಂಪೂಜ್ಯ ಗಣನಾಯಕಂ ।
ಬ್ರಹ್ಮಾಣಂ ವಾಸುದೇವಂ ಚ ದ್ವಿತೀಯಕಲಶೇ ಯಜೇತ್ ॥ ೩೬ ॥

ಮಂಡಲಂ ಚೈವ ವಿಷ್ಣೋರ್ದ್ವಾರಕಾರೂಪಮಾಸ್ಥಿತಃ ।
ತೇನ ತ್ವಾಂ ಪೂಜಯಾಮ್ಯದ್ಯ ಸ್ವರ್ಗಪ್ರಾಪ್ತಿಂ ಕುರುಷ್ವ ಮೇ ॥ ೩೭ ॥

---

೩೩. ಆ ಮೇಲೆ ಈ ಮಂತ್ರಪೂರ್ವಕವಾಗಿ ವಿಕಿರವನ್ನು ಹಾಕಬೇಕು. "ಮೂರುಲೋಕದಲ್ಲಿ ಚೇತನಯುಕ್ತವಾಗಿರುವ ಮತ್ತು ಅಚೇತನಗಳಾಗಿರುವ ಭೂತಗಳೂ, ಬ್ರಹ್ಮ. ವಿಷ್ಣು, ಶಿವ ಮುಂತಾದ ಎಲ್ಲರೂ ಈ ಯಜ್ಞಕ್ಕೆ ರಕ್ಷಣೆಯುಂಟು ಮಾಡಲಿ." ಎಂದು ಬೇಳಬೇಕು.

೩೪. ಅನಂತರ 'ವೇದ್ಯಾವೇದಿ' ಎಂಬ ಮಂತ್ರಪೂರ್ವಕವಾಗಿ ಯಜ್ಞವೇದಿಯನ್ನು ಪ್ರದಕ್ಷಿಣಮಾಡಿ ನಮಸ್ಕರಿಸಿ ಗಂಧ ಪುಷ್ಪ ಮೊದಲಾದುವುಗಳಿಂದ ಪೂಜಿಸಬೇಕು.

೩೫. ಬಳಿಕ ಓ ಯಜ್ಞಪುರುಷನೇ! ಯಜ್ಞಮಾಡಿದವನು, ಯಜ್ಞಮಾಡಿಸಿದವನು ನೆರವೇರಿಸಿದಯಜ್ಞ ಇವೆಲ್ಲಕ್ಕೂ ಶ್ರೇಯಸ್ಸುಂಟಾಗುವುದಕ್ಕಾಗಿ ಈ ಅರ್ಘ್ಯ, ಪಾದ್ಯ, ಧೂಪ ಇವುಗಳನ್ನು ಸ್ವೀಕರಿಸು. ಎಂಬ ಈ ಮಂತ್ರವನ್ನು ಹೇಳಬೇಕು.

೩೬. ಈಶಾನ್ಯದಿಕ್ಕಿನಲ್ಲಿ ಕಲಶವೊಂದನ್ನಿಟ್ಟುಕೊಂಡು ಅದರಲ್ಲಿ ಗಣಾಧಿಪನನ್ನು ಆವಾಹಿಸಿ ಪೂಜಿಸಬೇಕು. ಎರಡನೆಯ ಕಲಶದಲ್ಲಿ ಬ್ರಹ್ಮ, ವಿಷ್ಣು ಇವರನ್ನು ಆವಾಹಿಸಿ ಪೂಜಿಸಬೇಕು.

೩೭. "ಮಂಡಲವೇ ಸ್ವಾಮಿಯ ಆವಾಸಸ್ಥಾನವಾದ ದ್ವಾರಕೆಯಾಗಿದೆ. ಆದ ಕಾರಣ ಈಗ ನಾನು ಇಲ್ಲಿ ವಿಷ್ಣುರೂಪಿಯಾದ ನಿನ್ನನ್ನು ಪೂಜಿಸುವೆನು. ನನಗೆ ಸ್ವರ್ಗವು ಲಭಿಸುವಂತೆ ಮಾಡು." (ಎಂದು ಹೇಳಬೇಕು)

**ಪೂರ್ವಾದಿ ದಿಕ್ಷು ಕಲಶಾನ್ ಸಂಸ್ಥಾಪ್ಯ ಚ ತ್ರಯಂತ್ರಯಂ ।**
**ಅರ್ಧಪಾದಸುವರ್ಣೇನ ನಿರ್ಮಿತಂ ತೋರಣಂ ಬುಧಃ ॥ ೩೮ ॥**

**ಗಂಗಾಮೃತ್ತಿಕಯಾ ಯುಕ್ತೇ ಪಲ್ಲವೇ ಸನ್ನಿವೇದಯೇತ್ ।**
**ಮಂದರಂ ಕಲ್ಪಯಿತ್ವಾ ತು ಗೋಪೀನಾಂ ಚ ಕುಲೇನ ವಾ ॥ ೩೯ ॥**

**ಕಲಶೋಪರಿ ಸಂಸ್ಥಾಪ್ಯ ಮಂದರಂ ಸಂಪ್ರಪೂಜಯೇತ್ ।**
**ಸ್ಯೋನಾಪೃಥಿವೀತಿ ಮಂತ್ರೇಣ ಗಂಧಪುಷ್ಪೈಃ ಪೃಥಗ್ವಿಧೈಃ ॥ ೪೦ ॥**

**ಸ್ಯೋನಾಪೃಥಿವೀತಿ ಮಂತ್ರಸ್ಯ ಸುಮಂತ ಋಷಿಃ ಜಗತೀ ಛಂದಃ**
**ಹರೋ ದೇವತಾ ಮಂದರ ಪ್ರೀತಯೇ ವಿನಿಯೋಗಃ ।**
**ಏವಂ ದಕ್ಷಿಣದಿಗ್ಭಾಗೇ ನವತೋಲಕನಿರ್ಮಿತಂ ॥**

---

೩೮. ವಿದ್ವಾಂಸನಾದವನು ಪೂರ್ವ, ಪಶ್ಚಿಮ ಮೊದಲಾದ ದಿಕ್ಕುಗಳಲ್ಲಿ ಮೂರು ಮೂರು ಕಲಶಗಳನ್ನು ಸ್ಥಾಪಿಸಿ, ಅರ್ಧದಷ್ಟೋ ಅಥವಾ ಆದರ ಕಾಲುಭಾಗ ದಷ್ಟೋ ಪರಿಮಾಣದಲ್ಲಿ ಅದೇ ವರ್ಣದಿಂದ ತೋರಣ ಪರ್ವತಾಕೃತಿಯನ್ನು ರಚಿಸಬೇಕು

೩೯-೪೦. ಗಂಗಾತೀರದ ಮಣ್ಣಿನಿಂದಲಾಗಲಿ, ಗೋಪೀಚಂದನದಿಂದಾಗಲಿ, ಸುಂದರ ಪರ್ವತಾಕೃತಿಯನ್ನು ಪಲ್ಲವದಿಂದ ಕೂಡಿರುವಂತೆ ರಚಿಸಿ, ಕಲಶದ ಮೇಲುಗಡೆ ಇರಿಸಿ ಅದನ್ನು 'ಸ್ಯೋನಾ ಪೃಥಿವೀ' ಎಂಬ ಮಂತ್ರಪೂರ್ವಕವಾಗಿ ಗಂಧ, ಪುಷ್ಪಾದಿಗಳಿಂದ ಬೇರೆ ಬೇರೆಯಾಗಿ ಪೂಜಿಸಬೇಕು.

೪೧. 'ಸ್ಯೋನಾ ಪೃಥಿವೀ' ಎಂಬ ಮಂತ್ರಕ್ಕೆ ಸುಮಂತನು ಋಷಿ, ಜಗತೀ ಎಂಬುದು ಛಂದಸ್ಸು, ಹರನೇ ದೇವತೆ. ಮಂದರದ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

ಇದೇ ಪ್ರಕಾರ ಬೆಳ್ಳಿಯಿಂದಲೋ, ಅಥವಾ ಇತರ ಲೋಹದಿಂದಲೋ ಒಂದು ಚೋಟು ಉದ್ದವೂ ಒಂಭತ್ತುತೊಲ ತೂಕವೂ ಇರುವಂತೆ ಗಂಧ, ಮಾದನ ಪರ್ವತಾಕೃತಿಯನ್ನು ರಚಿಸಿ ಅಥವಾ ಮಣ್ಣಿನಿಂದಲೋ 'ಕದಾಚನ' ಎಂಬ ಮಂತ್ರಪೂರ್ವಕವಾಗಿ ಪೂಜಿಸಬೇಕು.

**ಪ್ರಾದೇಶಮಾತ್ರಲೋಹಂ ತು ರೌಪ್ಯೇಣ ಗಂಧಮಾದನಂ ।**
**ಮೃದಾ ಸಂಘಟಿತೈಃ ಪಶ್ಚಾತ್ಕದಾಚನ ಋಚಾ ಯಜೇತ್ ॥ ೪೧ ॥**

**ಕದಾಚನೇತಿ ಮಂತ್ರಸ್ಯ ಸೂರ್ಯಋಷಿಃ ತ್ರಿಷ್ಟುಪ್ ಛಂದಃ ।**
**ಸೂರ್ಯೋ ದೇವತಾ ಗಂಧಮಾದನಪ್ರೀತಯೇ ವಿನಿಯೋಗಃ ॥**
**ಉತ್ತರೇ ತೋರಣತೋದ್ರೇರಂಗುಷ್ಟದ್ವಯಮಾನಕೇ ।**
**ತೋಲಕದ್ವಯಮಾನೇನ ಯವಾನಾಂ ಪಿಷ್ಟಕೋಪರಿ ॥ ೪೨ ॥**

**ಆಪ್ಯಾಯಸ್ವೇತಿ ಮಂತ್ರಸ್ಯ ಕರ್ದಮ ಋಷಿಃ ಜಗತೀ ಛಂದಃ**
**ಶಚೀದೇವತಾ ಸುಪಾರ್ಶ್ವಪ್ರೀತಯೇ ವಿನಿಯೋಗಃ ।**
**ಪೂಜಯೇತ್ಪಾರ್ಶ್ವಕಲಶೇ ಧಾತ್ರಾದೀನ್ ಪೂರ್ವದಿಕ್ಕ್ರಮಾತ್ ॥**
**ಶ್ರೀಸೂಕ್ತೇನೈವ ಮಂತ್ರೇಣ ಯಜೇದ್ವಿಜಯಸಪ್ತಕಂ ।**
**ಪೂಜಯೇತ್ಪರಯಾ ಭಕ್ತ್ಯಾ ಗಂಧಪುಷ್ಪಾಕ್ಷತಾದಿನಾ ॥ ೪೩ ॥**

---

ಈ 'ಕದಾಚನ' ಎಂಬ ಮಂತ್ರಕ್ಕೆ ಸೂರ್ಯನೇ ಋಷಿ, ತ್ರಿಷ್ಟುಪ್ ಎಂಬುದು ಛಂದಸ್ಸು, ಸೂರ್ಯನು ದೇವತೆ, ಗಂಧಮಾದನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೪೨. ಎರಡು ಅಂಗುಷ್ಟದಷ್ಟು ಗಾತ್ರವೂ, ಎರಡು ತೊಲ ಪ್ರಮಾಣವೂ ಉಳ್ಳಹಾಗೆ ಯವಧಾನ್ಯದ ಹಿಟ್ಟಿನಿಂದ ಉತ್ತರದಿಕ್ಕಿನ ಕಡೆ ತೋರಣಾದ್ರಿಯನ್ನು ರಚಿಸಿ 'ಆಪ್ಯಾಯಸ್ವ' ಎಂಬ ಮಂತ್ರದಿಂದ ಆವಾಹಿಸಿ ಪೂಜಿಸಬೇಕು.

ಈ 'ಆಪ್ಯಾಯಸ್ವ' ಎಂಬ ಮಂತ್ರಕ್ಕೆ ಕರ್ದಮನೆಂಬವನು ಋಷಿ, ಜಗತೀ ಎಂಬುದು ಛಂದಸ್ಸು, ಶಚಿಯು ದೇವತೆಯು, ಸುಪಾರ್ಶ್ವಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೪೩. ಪಾರ್ಶ್ವದಲ್ಲಿರುವ ಕಲಶದಲ್ಲಿ ಪೂರ್ವದಿಕ್ಕು ಮೊದಲು ಮಾಡಿಕೊಂಡು ಕ್ರಮವಾಗಿ ಧಾತೃ ಮುಂತಾದವರನ್ನೂ, ವಿಜಯಸಪ್ತಕವನ್ನೂ ಶ್ರೀ ಸೂಕ್ತಮಂತ್ರ ಪೂರ್ವಕವಾಗಿ ಆವಾಹಿಸಿ ಪರಮಭಕ್ತಿಯಿಂದ ಗಂಧ, ಪುಷ್ಪ, ಅಕ್ಷತೆ ಮುಂತಾದುವುಗಳಿಂದ ಪೂಜಿಸಬೇಕು.

**ಅಂಬಾಅಂಬಿಕೇತಿ ಮಂತ್ರಸ್ಯ ನಲಿನ ಋಷಿಃ ಗಾಯತ್ರೀ ಛಂದಃ**
**ಶಂಭುರ್ದೇವತಾ ಜಯಪ್ರೀತಯೇ ವಿನಿಯೋಗಃ ।**
**ಗಾಯತ್ರ್ಯಾ ಪೂಜಯೇದ್ದಕ್ಷೇ ಪಶ್ಚಿಮಂ ಕಲಶದ್ವಯಂ ॥ ೪೪ ॥**

**ಗಾಯತ್ರ್ಯಾ ವಿಶ್ವಾಮಿತ್ರ ಋಷಿಃ ಸವಿತಾ ದೇವತಾ**
**ವಿಜಯಪ್ರೀತಯೇ ವಿನಿಯೋಗಃ**
**ಭದ್ರಂ ಚೈವ ಸುಭದ್ರಂ ಚ ಪ್ರಯತಃ ಸಂಯಜೇದ್ಬುಧಃ ॥ ೪೫ ॥**

**ಉತ್ತರೇ ಯುಗ್ಮಕಲಶೇ ಮನೋನ್ನಾ ಇತಿ ಮಂತ್ರಸ್ಯ**
**ಅಂತಕಋಷಿಃ ಬೃಹತೀ ಛಂದಃ ನಿಋುಋುತಿರ್ದೇವತಾ**
**ಭೂತಪ್ರೀತಯೇ ವಿನಿಯೋಗಃ ।**
**ಭೂತಶುದ್ಧಿಂ ತತಃ ಕೃತ್ವಾ ನ್ಯಾಸಂ ಕೃತ್ವಾ ವಿಧಾನತಃ ॥**
**ವಿಧಾಯಾರ್ಘ್ಯಾದಿಕಂ ಚೈವ ಧರ್ಮಾದಿಮಂಡಲೇ ಯಜೇತ್ ॥ ೪೬ ॥**

---

೪೪. "ಅಂಬಾಅಂಬಿಕಾ" ಎಂಬ ಮಂತ್ರಕ್ಕೆ ನಲಿನನು ಋಷಿ, ಗಾಯತ್ರಿ ಎಂಬುದು ಛಂದಸ್ಸು, ಶಂಭುವೇ ದೇವತೆ, ಜಯದೇವತಾ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

ದಕ್ಷಿಣದಕಡೆ, ಪಶ್ಚಿಮದಕಡೆ ಇರುವ ಎರಡು ಕಲಶಗಳಲ್ಲೂ ವಿಜಯ ದೇವತೆಯನ್ನು ಗಾಯತ್ರೀ ಮಂತ್ರಪೂರ್ವಕವಾಗಿ ಆವಾಹಿಸಿ ಪೂಜಿಸಬೇಕು. ಈ ಮಂತ್ರಕ್ಕೆ ವಿಶ್ವಾಮಿತ್ರನು ಋಷಿ,ಸೂರ್ಯನು ದೇವತೆ, ಗಾಯತ್ರಿಯು ಛಂದಸ್ಸು,ವಿಜಯದೇವತಾ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೪೫-೪೬. ಜ್ಞಾನಿಯಾದವನು ನಿಯಮಯುಕ್ತನಾಗಿ ಉತ್ತರ ದಿಕ್ಕಿನಲ್ಲಿರುವ ಎರಡು ಕಲಶಗಳಲ್ಲಿ ಭದ್ರ, ಸುಭದ್ರ ಎಂಬ ದೇವತೆಗಳನ್ನು 'ಮನೋನ್ನಾ' ಮಂತ್ರದಿಂದ ಆವಾಹಿಸಿ ಪೂಜಿಸಬೇಕು. 'ಮನೋನ್ನಾ' ಎಂಬ ಮಂತ್ರಕ್ಕೆ ಅಂತಕನು ಋಷಿ, ಬೃಹತೀ ಎಂಬುದು ಛಂದಸ್ಸು, ನಿಋುಋುತಿಯು ದೇವತೆ, ಭೂತದೇವತಾ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು. ಆ ಮೇಲೆ ಶರೀರಸ್ಥವಾದ ಭೂತಶುದ್ಧ್ಯರ್ಥವಾದ ಪ್ರಾಣಾಯಾಮ ಮಾಡಿ, ವಿಧಾನದಂತೆ ಧರ್ಮ ಜ್ಞಾನ ಮುಂತಾದ್ದನ್ನು ಮಂಡಲದಲ್ಲಿ ನ್ಯಾಸಮಾಡಿ, ಅರ್ಘ್ಯ ಮೊದಲಾದುವನ್ನು ಸಮರ್ಪಿಸಬೇಕು.

**ಮಧ್ಯೇ ಆಧಾರಶಕ್ತ್ಯಾದೀನ್ ವರುಣಂ ಮಧ್ಯತೋ ಯಜೇತ್ ।**
**ಪೂರ್ವಾದಿಕ್ರಮತಶ್ಚೈವ ಇಂದ್ರಾದೀನ್ ಕುಲದೇವತಾಃ ॥ ೪೭ ॥**

**ಪಾರ್ಶ್ವದ್ವಯೇ ಕರ್ಣಿಕಾಯಾ ಬ್ರಹ್ಮಾಣಂ ಚಾಪ್ಯನಂತಕಂ ।**
**ಸ್ವೈಸ್ಸ್ವೈರ್ಮಂತ್ರೈರ್ಯಥೋಕ್ತೈಶ್ಚ ಬಲಿಭಿರ್ಗಂಧಪುಷ್ಪಕೈಃ ॥ ೪೮ ॥**

**ಇಂದ್ರಾಭಿಷೇಕಮಂತ್ರಸ್ಯ ವಾದ್ಯಂ ಗಾಂಧಾರರಾಗಕಂ ।**
**ಅಗ್ನೇಸ್ತೇಜೋಸೀತಿ ವಾದ್ಯಂ ರಾಗಂ ಚೈವ ವರಾಟಕಂ ॥ ೪೯ ॥**

**ಘನಕಂಟಕಮಸ್ಯಾಪಿ ವಾದ್ಯಂ ರಾಗಂ ತು ಗುರ್ಜರಂ ।**
**ರಕ್ಷೋಧಿಪಸ್ಯ ಸಂಗ್ರಾಮಂ ವೈತಾಲಂ ವಾದ್ಯಮುಚ್ಯತೆ ॥ ೫೦ ॥**

**ನಾಟಿಕಾಖ್ಯಂ ತಥಾ ರಾಗಂ ವರುಣಸ್ಯಾಪಿ ಮೇ ಶೃಣು ।**
**ವಾದ್ಯಂ ರಾಜ್ಯಾಭಿಷೇಕಾಖ್ಯಂ ರಾಗೋ ವಸಂತಸಂಜ್ಞಕಃ ॥ ೫೧ ॥**

---

೪೭. ಮಧ್ಯಭಾಗದಲ್ಲಿ ಕೆಳಗೆ ಆಧಾರಶಕ್ತಿ ಮೊದಲಾದುವುಗಳನ್ನೂ, ಮಧ್ಯದಲ್ಲಿ ವರುಣನನ್ನೂ ಪೂಜಿಸಬೇಕು. ಪೂರ್ವ, ಆಗ್ನೇಯ ಮೊದಲಾದ ದಿಕ್ಕುಗಳಲ್ಲಿ ಅನುಕ್ರಮದಿಂದ ಇಂದ್ರ ಮೊದಲಾದ ಅಷ್ಟದಿಕ್ಪಾಲಕರನ್ನು ಆವಾಹಿಸಬೇಕು.

೪೮. ಎರಡು ಪಾರ್ಶ್ವಗಳಲ್ಲಿ ಕುಲದೇವತೆಗಳನ್ನೂ, ಕರ್ಣಿಕಾಸ್ಥಾನದಲ್ಲಿ ಬ್ರಹ್ಮನನ್ನೂ, ಅನಂತನನ್ನೂ ಆಯಾ ದೇವತೆಗಳಿಗೆ ಉಕ್ತವಾದ ಮಂತ್ರಪೂರ್ವಕವಾಗಿ ಆವಾಹಿಸಿ ಗಂಧ, ಪುಷ್ಪ, ಬಲಿನಿವೇದನ ಇವುಗಳಿಂದ ಪೂಜಿಸಬೇಕು.

೪೯. 'ಇಂದ್ರಾಭಿಷೇಕ' ಎಂಬ ಮಂತ್ರಕ್ಕೆ ಗಾಂಧಾರವೆಂಬ ರಾಗವೂ,ವಾದ್ಯವೂ ಅಗ್ನೇಸ್ತೇಜೋಸಿ ಎಂಬ ಮಂತ್ರಕ್ಕೆ ವರಾಟಕ ಎಂಬ ರಾಗವೂ, ವಾದ್ಯವೂ ವಿಹಿತವಾದುದೆಂದು ಉಕ್ತವಾಗಿವೆ.

೫೦. 'ಘನಕಂಟಕ' ಎಂಬ ಮಂತ್ರಕ್ಕೆ ಗುರ್ಜರ ರಾಗವೂ, ವಾದ್ಯವೂ 'ರಕ್ಷೋಧಿಪಸ್ಯ' ಎಂಬ ಮಂತ್ರಕ್ಕೆ ಸಂಗ್ರಾಮ ರಾಗವೂ, ವೈತಾಳ ವಾದ್ಯವೂ ವಿಹಿತವಾದುದೆಂದು ಉಕ್ತವಾಗಿದೆ.

೫೧. 'ವರುಣಸ್ಯ' ಎಂಬ ಮಂತ್ರಕ್ಕೆ ನಾಟಕವೆಂಬ ರಾಗವೂ, 'ರಾಜ್ಯಾಭಿಷೇಕ' ಎಂಬ ವಾದ್ಯವೂ ಉಕ್ತವಾಗಿದೆ.

ಈಶಸ್ಯ ನಂದಿಘೋಷಾಖ್ಯಂ ವಾದ್ಯಂ ರಾಗೋಽಥ ಕಾಮದಃ ।
ಸುವರ್ಣಂ ದುಂದುಭಿರ್ವಾದ್ಯಂ ಬ್ರಹ್ಮಣಃ ಕಥಿತೋ ಬುಧೈಃ ॥ ೫೨ ॥

ರಾಗೋ ದೇವೀ ವಸಂತಶ್ಚ ಅನಂತಸ್ಯ ನಿಬೋಧ ಮೇ ।
ವಾದ್ಯಂ ಗಾಂಧಾರತಾರಾಖ್ಯಂ ರಾಗಶ್ಚಾಂಗಾರವಾತಕಃ ॥ ೫೩ ॥

ಸೋಮೋ ಘೋಷೋ ಭವೇದ್ವಾದ್ಯಂ ಜಲೇಶಸ್ಯ ಮಹಾತ್ಮನಃ ।
ಮಾಲವಾಖ್ಯೋ ಭವೇದ್ರಾಗಃ ಪತ್ರಾಗ್ರೇಷು ಮಹಾನಪಿ ॥ ೫೪ ॥

ಸ್ವೈಃಸ್ವೈರ್ಧರ್ಮೈಶ್ಚ ಸಂಗೃಹ್ಯ ದಕ್ಷಿಣೇ ಪೃಥಿವೀಂ ಯಜೇತ್ ।
ಸ್ಯೋನಾಪೃಥಿವೀತಿ ಮಂತ್ರೇಣ ಉಪಚಾರೈಃ ಪೃಥಗ್ವಿಧೈಃ ॥ ೫೫ ॥

ಮಂಡಪಸ್ಯೋತ್ತರೇ ಭಾಗೇ ಮಹಾದೇವಂ ಪ್ರಪೂಜಯೇತ್ ।
ನಮೋ ವೃಕ್ಷೇಭ್ಯ ಇತ್ಯಾದಿ ನೈವೇದ್ಯೈಶ್ಚ ಪೃಥಗ್ವಿಧೈಃ ॥ ೫೬ ॥

---

೫೨. 'ಈಶಸ್ಯ' ಎಂಬ ಮಂತ್ರಕ್ಕೆ ವಸಂತವೆಂಬ ರಾಗವೂ, ನಂದಿಘೋಷವೆಂಬ ವಾದ್ಯವೂ ವಿಹಿತವಾಗಿದೆ. 'ಬ್ರಹ್ಮಣಃ' ಎಂಬ ಮಂತ್ರಕ್ಕೆ ಕಾಮದ ಎಂಬ ರಾಗವೂ, ಸುವರ್ಣದುಂದುಭಿ ವಾದ್ಯವೂ ವಿಹಿತವಾದುದೆಂದು ವಿದ್ವಾಂಸರು ಹೇಳುತ್ತಾರೆ.

೫೩–೫೪. ಅನಂತ ಮಂತ್ರಕ್ಕೆ ದೇವೀ ವಸಂತ ಎಂಬ ರಾಗವೂ, ಗಾಂಧಾರ ತಾರ ಎಂಬ ವಾದ್ಯವೂ ಉಕ್ತವಾಗಿದೆ. ಮಹಾತ್ಮನಾದ ಜಲಾಧಿಪತಿ (ವರುಣನಿ) ಗೆ ಅಂಗಾರವಾತ ಎಂಬ ರಾಗವೂ, ಸೋಮಘೋಷ ಎಂಬ ವಾದ್ಯವೂ, ಪತ್ರಾಗ್ರದಲ್ಲಿ ಮಾಲವ ಎಂಬ ರಾಗವೂ ಉಕ್ತವಾಗಿದೆ

೫೫. ಹೀಗೆ ಅವರವರಿಗೆ ಉಕ್ತವಾದ ಧರ್ಮಗಳೊಡನೆ ಆಯಾ ಸ್ಥಾನದಲ್ಲಿ ಆಯಾ ದೇವತೆಗಳನ್ನು ಆವಾಹಿಸಬೇಕು. ಮಂಟಪದ ದಕ್ಷಿಣದಲ್ಲಿ 'ಸ್ಯೋನಾ ಪೃಥಿವೀ' ಎಂಬ ಮಂತ್ರಪೂರ್ವಕವಾಗಿ ಪೃಥ್ವೀದೇವತೆಯನ್ನು ಆವಾಹಿಸಿ ವಿವಿಧವಾದ ಉಪಚಾರಗಳಿಂದ ಪೂಜೆಮಾಡಬೇಕು.

೫೬. ಮಂಡಪದ ಉತ್ತರದಲ್ಲಿ ಮಹಾದೇವನನ್ನು 'ನಮೋವೃಕ್ಷೇಭ್ಯ' ಎಂಬ ಮಂತ್ರಗಳಿಂದಲೂ, ಬಗೆಬಗೆಯಾದ ನೈವೇದ್ಯಗಳಿಂದಲೂ ಪೂಜಿಸಬೇಕು.

ಮಹಾದೇವಂ ದ್ವಿಭುಜಂ ಡಮರುಶೂಲಧರಮುಮಾಹಿತಂ ಧ್ಯಾತ್ವಾ ।
ನಮೋ ವೃಕ್ಷೇಭ್ಯ ಇತಿ ಮಂತ್ರಸ್ಯ ಬ್ರಹ್ಮಾಋಷಿಃ ॥
ಗಾಯತ್ರೀಶ್ಛಂದಃ ಚಂದ್ರೋ ದೇವತಾ ಚಂದ್ರಪ್ರೀತಯೇ ವಿನಿಯೋಗಃ ।
ಗಂಧಪುಷ್ಪಾದಿಭಿರ್ಭಕ್ತ್ಯಾ ಭೂತಾನಿ ಪರಿತೋ ಯಜೇತ್ ॥ ೫೭ ॥

ವೇತಾಲಾಶ್ಚ ಪಿಶಾಚಾಶ್ಚ ರಾಕ್ಷಸಾಶ್ಚ ಸರೀಸೃಪಾಃ ।
ಅಪ್ಯಾಂತ್ವ ಯಾಂತು ಮೇ ಸ್ಥಾನಾದ್ಯೇ ಚಾನ್ಯೇ ವಿಘ್ನಕಾರಕಾಃ ॥ ೫೮ ॥

ಮಧುಯುಕ್ತಂ ಪಾಯಸಾನ್ನಂ ವರುಣಾಯ ನಿವೇದಯೇತ್ ।
ಪೀತಂ ಚಾಲೋಹಿತಂ ಕೃಷ್ಣಂ ಶುಕ್ಲಂ ಕೃಷ್ಣಂ ಚ ಧೂಮ್ರಕಂ ॥ ೫೯ ॥

ಪೀತಂ ಶುಕ್ಲಂ ತಥಾ ಚಿತ್ರಂ ಶ್ವೇತಮನ್ನಂ ಯಥಾಕ್ರಮಂ ।
ಬಲಯಸ್ತು ದಿಗೀಶಾನಾಂ ಗ್ರಹಾಣಾಮಪಿ ತಾನ್ ಶೃಣು ॥ ೬೦ ॥

ಕ್ಷೀರೌದನಂ ಗ್ರಹೇಶಾಯ ಶುಕ್ಲಾನ್ನಂ ಶಶಿನೇ ಸ್ಮೃತಂ ।
ಲೋಹಿತಾನ್ನಂ ಚ ಭೌಮಾಯ ಬುಧಾಯ ಕ್ಷೀರಷಾಷ್ಟಿಕಂ ॥ ೬೧ ॥

---

೫೭. ಎರಡು ಭುಜಗಳುಳ್ಳವನೂ, ಉಮಾದೇವೀ ಸಮೇತನೂ, ತ್ರಿಶೂಲ, ಡಮರುಕ ಇವುಗಳನ್ನು ಕೈಯಲ್ಲಿ ಧರಿಸಿದವನೂ ಆಗಿರುವನೆಂದು ಶಿವನನ್ನು ಧ್ಯಾನಿಸಬೇಕು. 'ನಮೋವೃಕ್ಷೇಭ್ಯಃ' ಎಂಬ ಮಂತ್ರಕ್ಕೆ ಬ್ರಹ್ಮನೇ ಋಷಿ, ಗಾಯತ್ರೀ ಎಂಬುದು ಛಂದಸ್ಸು, ಚಂದ್ರನು ದೇವತೆ, ಚಂದ್ರನ ಪ್ರೀತ್ಯರ್ಥವಾಗಿ ಈ ಮಂತ್ರವನ್ನು ವಿನಿಯೋಗಿಸಬೇಕು.

೫೮. ಬೇತಾಳರು, ಪಿಶಾಚರು, ರಾಕ್ಷಸರು, ನಾಗರು, ಭೂತಗಳು ಇವನ್ನು ಗಂಧ ಪುಷ್ಪಾದಿಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಬೇಕು. ಬಳಿಕ ಅವರನ್ನು ಕುರಿತು 'ನೀವೂ, ವಿಘ್ನಕಾರಿಗಳಾದ ಇತರರೂ ಎಲ್ಲರೂ ನಾನು ಯಜ್ಞಮಾಡುವ ಈ ಸ್ಥಳದಿಂದ ಹೊರಟುಹೋಗಬೇಕು' ಎಂದು ಪ್ರಾರ್ಥಿಸಬೇಕು.

೫೯-೬೦. ಜೇನುತುಪ್ಪಸಹಿತವಾದ ಪಾಯಸಾನ್ನವನ್ನು ವರುಣನಿಗೆ ನಿವೇದಿಸಬೇಕು. ಹೀಗೆ ಕ್ರಮವರಿತು ಹಳದಿ, ಕಪ್ಪು,ಕೆಂಪು, ಹಸುರು,ಬಿಳುಪು, ಧೂಮ್ರವರ್ಣ, ಚಿತ್ರವರ್ಣ ಈ ಅನ್ನವನ್ನು ಉಳಿದ ದಿಕ್ಪಾಲಕರಿಗೆ ನಿವೇದಿಸಬೇಕು.

೬೧-೬೩. ಈಗ ನವಗ್ರಹಗಳಿಗೆ ಸಮರ್ಪಿಸುವ ಬಲಿಗಳ ವಿಧಾನವನ್ನು ಕೇಳು; ಗ್ರಹಾಧಿಪತಿಯಾದ ರವಿಗೆ ಹಾಲುಅನ್ನವನ್ನೂ, ಚಂದ್ರನಿಗೆ ಬಿಳಿಯ ಅನ್ನವನ್ನೂ

**ಪೀತಮನ್ನಂ ದೇವಗುರೋಃ ಶುಕ್ರಸ್ಯ ಸಿತತಂಡುಲಂ ।**
**ಮಾಂಸೌದನಂ ಶನೇಶ್ಚೈ್ರೇಯಂ ರಾಹೋಶ್ಚ ಕೃಷ್ಣಭಕ್ತಕಂ ॥ ೬೨ ॥**

**ಧೂಮ್ರವರ್ಣಂ ತು ಧೂಮ್ರಸ್ಯ ಭೂಮೇಶ್ಚ ಕ್ಷೀರಪೌಷ್ಟಿಕಂ ।**
**ಪಿಷ್ಟಕಾನ್ನಂ ಶಿವಸ್ಯೋಕ್ತಂ ಭೂತಾನಾಂ ಮಾಷಭಕ್ತಕಂ ॥ ೬೩ ॥**

**ಏವಂ ಬಲಿಂ ವಿಧಾಯಾಥ ಅಗ್ರೇ ಕುಂಭಂ ನಿವೇಶಯೇತ್ ।**
**ಪ್ರದೇಶದ್ವ್ಯಂಗುಲಂ ನಾಮ ಅಷ್ಟೋತ್ತರಸಹಸ್ರಕಂ ॥ ೬೪ ॥**

**ಬಹ್ವಂಗುಲಕಂ ವಿನ್ಯಸ್ಯ ವಿನ್ಯಸ್ಯ ಕಲಶೋಪರಿ ।**
**ನಿಶಾವಾಂಛಿತಸೂತ್ರೈಶ್ಚ ಸಂವೇಷ್ಟ್ಯ ಪಿಹಿತಂ ತಥಾ ॥ ೬೫ ॥**

**ಶರಾವಂ ಚ ಪುನರ್ದದ್ಯಾದ್ವರ್ಧನೀಂ ಪ್ರತಿಪೂಜಯೇತ್ ।**
**ಅಸ್ತ್ರಾಯ ಫಡಿತಿ ಮಂತ್ರೇಣ ಧ್ಯಾತ್ವಾ ದೇವಂ ಜಲೇಶ್ವರಂ ॥ ೬೬ ॥**

---

ಅಂಗಾರಕನಿಗೆ ಕೆಂಪು ಅನ್ನವನ್ನೂ, ಬುಧನಿಗೆ ಹಾಲು ಪೌಷ್ಟಿಕ ಇವನ್ನೂ, ಬೃಹಸ್ಪತಿಗೆ ಹಳದಿಬಣ್ಣದ ಅನ್ನವನ್ನೂ, ಶುಕ್ರನಿಗೆ ಬಿಳಿಯಅಕ್ಕಿಯನ್ನೂ, ಶನೈಶ್ಚರನಿಗೆ ಮಾಂಸಮಿಶ್ರವಾದ ಅನ್ನವನ್ನೂ, ರಾಹುವಿಗೆ ಕಪ್ಪು ಅನ್ನವನ್ನೂ, ಕೇತುವಿಗೆ ಧೂಮ್ರಾನ್ನವನ್ನೂ, ಬಲಿಸಮರ್ಪಣೆ ಮಾಡಬೇಕು. ಭೂದೇವಿಗೆ ಹಾಲು ಪೌಷ್ಟಿಕ ಇವನ್ನೂ, ಶಿವನಿಗೆ ಪಿಷ್ಟಕಾನ್ನವನ್ನೂ, ಭೂತಗಳಿಗೆ ಉದ್ದಿನಹುಡಿ ಅನ್ನವನ್ನೂ ಸಮರ್ಪಿಸಬೇಕು.

೬೪-೬೬. ಈ ರೀತಿಯಾಗಿ ಬಲಿಯನ್ನು ಸಮರ್ಪಿಸಿ ಆ ಮೇಲೆ ಕಲಶವನ್ನು ಸ್ಥಾಪಿಸಬೇಕು. ಒಂದೊಂದಕ್ಕೆ ಎರಡು ಅಂಗುಲ ಪ್ರದೇಶವೋ ಅಥವಾ ಅದಕ್ಕಿಂತ ಹೆಚ್ಚು ಅಂಗುಲ ಪ್ರದೇಶವೋ ಅಂತರವಿರುವಂತೆ ಸಾವಿರದ ಎಂಟು ನಾಮಗಳನ್ನು ವಿನ್ಯಾಸಮಾಡಿ ಅದರ ಮೇಲುಗಡೆ ಕಲಶವನ್ನು ಇರಿಸಬೇಕು. ಆ ಕಲಶದ ಮೇಲೆ ಅಂಧಕಾರಸದೃಶವಾದ ಕಪ್ಪುಸೂತ್ರದಿಂದ ಸುತ್ತಿ, ಅದರ ಮೇಲೆ ಶ್ರಾವೆಯನ್ನು ಮುಚ್ಚಿ ವೃದ್ಧಿದಾಯಕವಾದ ಆ ಕಲಶವನ್ನು ಪೂಜಿಸಬೇಕು. 'ಅಸ್ತ್ರಾಯಫಟ್' ಎಂಬ ಮಂತ್ರದಿಂದ ಸ್ವಾಮಿಯಾದ ವರುಣನನ್ನು ಧ್ಯಾನಿಸಿ ನೂರೆಂಟುಸಾರಿಯೋ ಅಥವಾ ತನಗೆ ಶಕ್ತಿಯಿದ್ದಷ್ಟುಮಟ್ಟಿಗೋ ವರುಣಸೂಕ್ತವನ್ನು ಜಪಮಾಡಬೇಕು.

**ಸೂಕ್ತಂ ಯಜೇದ್ಯಥಾಶಕ್ತಿ ಶತಮಷ್ಟೋತ್ತರಂ ಜಪೇತ್ ।**
**ಕುಂಡೇಷು ವಿನ್ಯಸೇನ್ನಾಗಾನಷ್ಟೌ ಪೂರ್ವಾದಿಷು ಕ್ರಮಾತ್ ॥ ೬೭ ॥**

**ಅನಂತಂ ಪೂಜಯೇತ್ಪೂರ್ವಂ ಮಾನೇನಾಂಗುಲಮಾತ್ರಕಂ ।**
**ನಿರ್ಮಿತಂ ಕಾಂಚನೇನೈವ ಸಪ್ತವರ್ತಿಕಯಾ ಸುಧೀಃ ॥ ೬೮ ॥**

**ರಾಜತಂ ವಾಸುಕಿಂ ನಾಗಂ ಯಜೇತ್ಪತ್ರಾಂತರೇ ಪುನಃ ।**
**ಪಾದಮಾತ್ರೇಽಪಿ ಚಾಂಗುಷ್ಟಮಾತ್ರಂ ತಾಮ್ರಸ್ಯ ತಕ್ಷಕಂ ॥ ೬೯ ॥**

**ಪಂಚಾಂಗುಲಂ ತೋಲಿಕಯಾ ಲೌಹಂ ಕರ್ಕೋಟಕಂ ಪುನಃ ।**
**ವರ್ತಿಕಾಭಿಃ ಷೋಡಶಾಭಿರ್ಬೃಹತ್ಪರ್ವಪ್ರಮಾಣಕಂ ॥ ೭೦ ॥**

**ಶಂಖಪಾಲಂ ಕುಶಮಯಮರ್ಧಪಾದೇನ ನಿರ್ಮಿತಂ ।**
**ಅಂಗುಷ್ಠಮಾತ್ರಂ ರಕ್ತೇನ ನಾಗಂ ಕುಳಿಕನಾಮಕಂ ॥ ೭೧ ॥**

---

೬೭. ಕುಂಡಗಳ ಪೂರ್ವ, ಆಗ್ನೇಯ ಮೊದಲಾದ ದಿಕ್ಕುಗಳಲ್ಲಿ ಯಥಾಕ್ರಮವಾಗಿ ಅಷ್ಟನಾಗಗಳನ್ನು ವಿನ್ಯಾಸಮಾಡ (ಸ್ಥಾಪಿಸ) ಬೇಕು.

೬೮. ಬುದ್ಧಿಶಾಲಿಯಾದವನು ಚಿನ್ನದಿಂದ ಒಂದು ಅಂಗುಲ ಅಳತೆಯುಳ್ಳದ್ದೂ, ಏಳುವರ್ತಿಕೆ (ಹೆಡೆ) ಯುಳ್ಳದ್ದೂ ಆಗಿ ನಿರ್ಮಿಸಿರುವ ಅನಂತಪ್ರತಿಮೆಯನ್ನು ಪೂರ್ವದಿಕ್ಕಿನಲ್ಲಿ ಸ್ಥಾಪಿಸಿ ಪೂಜಿಸಬೇಕು.

೬೯. ಆಗ್ನೇಯದಿಕ್ಕಿನಲ್ಲಿ ಬೆಳ್ಳಿಯಿಂದ ನಾಗಪ್ರತಿಮೆಯನ್ನು ಮಾಡಿ ಅದರಲ್ಲಿ ವಾಸುಕಿಯನ್ನು ಆವಾಹಿಸಿ ಪೂಜಿಸಬೇಕು. ಅಂಗುಷ್ಟ ಮಾತ್ರ ಪ್ರಮಾಣವೂ ಪಾದ ಮಾತ್ರ ಉದ್ದವೂ ಉಳ್ಳದಾಗಿರುವಂತೆ ತಾಮ್ರದಲ್ಲಿ ತಕ್ಷಕ ಪ್ರತಿಮೆಯನ್ನು ಮಾಡಿ ದಕ್ಷಿಣ ದಿಗ್ಭಾಗದಲ್ಲಿಟ್ಟು ಪೂಜಿಸಬೇಕು.

೭೦-೭೧. ಐದುಅಂಗುಲ ಪ್ರಮಾಣವೂ, ಅದೇ ತೋಲಕ ತೂಕವೂ ಉಳ್ಳದಾದ ಲೋಹದ ಕರ್ಕೋಟಕನ ಪ್ರತಿಮೆಯನ್ನು ಮಾಡಿ ನೈಋತ್ಯದಲ್ಲಿಟ್ಟು ಆವಾಹಿಸಬೇಕು. ದೊಡ್ಡಪರ್ವ ಪ್ರಮಾಣವುಳ್ಳದಾಗಿಯೂ, ಹದಿನಾರು ವರ್ತಿಕೆ (ಹೆಡೆ) ಗಳಿಂದ ಕೂಡಿರುವಂತೆಯೂ, ದರ್ಭೆಯಿಂದ ಶಂಖಪಾಲ ಪ್ರತಿಮೆಯನ್ನು ಮಾಡಿ ಪಶ್ಚಿಮದಲ್ಲಿಟ್ಟು ಆವಾಹಿಸಬೇಕು. ಅರ್ಧಪಾದ ಉದ್ದವೂ, ಅಂಗುಷ್ಠ ಮಾತ್ರ

ಅಂಗುಷ್ಠೇ ತೋಲಕಂ ಪಶ್ಚಾತ್ಪದ್ಮನಾಗಂ ಪುನರ್ಯಜೇತ್ ।
ತೋಲಕಾರ್ಧಪ್ರಮಾಣೇನ ಅಂಗುಲಂ ಪರಿಮಾಣತಃ ॥ ೭೨ ॥

ಕುರ್ಯಾಚ್ಛೈಲಮಯಂ ಸಮ್ಯಗ್ಯಥಾವಲ್ಲಕ್ಷಣಾನ್ವಿತಂ ।
ಮಹಾಪದ್ಮಸ್ಯ ವೈ ತಸ್ಯ ಪೂರ್ವಮಾನೇನ ನಿರ್ಮಿತಂ ॥ ೭೩ ॥

ಧ್ಯಾತ್ವಾನಂತಂ ಚತುರ್ಬಾಹುಂ ಶುಕ್ಲಂ ಸಪ್ತಫಣಾನ್ವಿತಂ ।
ದಕ್ಷಿಣೋರ್ಧ್ವಕರೇ ಶಂಖಮಥ ಚಕ್ರಂ ಪ್ರತಿಷ್ಠಿತಂ ॥ ೭೪ ॥

ವಾಮೋರ್ಧ್ವೇ ತು ಗದಾಪದ್ಮಂ ಮಧ್ಯಸ್ಥಾನಂ ವ್ಯವಸ್ಥಿತಂ ।
ಸರ್ವಾಲಂಕಾರಸಂಯುಕ್ತಮೇವಂ ಧ್ಯಾತ್ವಾ ಯಥಾವಿಧಿ ॥ ೭೫ ॥

ಸಹಸ್ರಶೀರ್ಷೇತಿ ಮಂತ್ರೇಣ ಪೂಜಯಿತ್ವಾ ಬಲಿಂ ಹರೇತ್ ।
ಲಾಜೈಶ್ಚ ತಿಲಸಂಮಿಶ್ರೈಃ ಕ್ಷೀರಯುಕ್ತೈಃ ಪೃಥಗ್ವಿಧೈಃ ॥ ೭೬ ॥

---

ಪ್ರಮಾಣವೂ, ಕೆಂಪುಬಣ್ಣವೂ ವುಳ್ಳಂತೆ ಕುಳಿಕನ ಪ್ರತಿಮೆಯನ್ನು ಮಾಡಿ ವಾಯುವ್ಯದಲ್ಲಿಟ್ಟು ಆವಾಹಿಸಬೇಕು.

೭೨-೭೫. ಅಂಗುಷ್ಟ ಪ್ರಮಾಣವೂ, ಯಥೋಕ್ತ ತೋಲಕ ತೂಕವೂ ಉಳ್ಳ ಪದ್ಮನೆಂಬ ನಾಗನನ್ನು ಉತ್ತರದಿಕ್ಕಿನಲ್ಲಿಟ್ಟು ಆವಾಹಿಸಿ ಪೂಜಿಸಬೇಕು. ಅರ್ಧ ತೋಲಕ ಪ್ರಮಾಣವೂ, ಒಂದಂಗುಲ ಎತ್ತರವೂ ಶುಭಲಕ್ಷಣಗಳೂ ಉಳ್ಳ ಹಾಗೆ ಕಲ್ಲಿನಿಂದ ಚೆನ್ನಾಗಿ ರಚಿಸಿದ ಮಹಾಪದ್ಮ ನಾಗನನ್ನು ಈಶಾನ್ಯದಲ್ಲಿಟ್ಟು ಆವಾಹಿಸಬೇಕು. ಬಳಿಕ ಅನಂತನನ್ನು ವಿಧಿಪ್ರಕಾರ ಧ್ಯಾನಮಾಡತೊಡಗಿ ನಾಲ್ಕು ತೋಳುಗಳು, ಬಿಳಿಯದಾದ ಏಳು ಹೆಡೆಗಳು ಇವು ಉಳ್ಳವನೂ, ಎಡಬಲಭಾಗದ ಮೇಲ್ಗಡೆಯ ಕೈಗಳಲ್ಲಿ ಶಂಖ, ಚಕ್ರ, ಇವನ್ನೂ, ಕೆಳಗಿನ ಕೈಗಳಲ್ಲಿ ಗದೆ, ಪದ್ಮ, ಇವನ್ನೂ ಧರಿಸಿ ಮಧ್ಯಸ್ಥಾನದಲ್ಲಿ ಸ್ಥಿರವಾಗಿ ನಿಂತುಕೊಂಡು, ಸಮಸ್ತ ಅಲಂಕಾರಗಳಿಂದ ಕೂಡಿ ಇರುವನೆಂದು ಧ್ಯಾನಮಾಡಬೇಕು.

೭೬. ಆ ಮೇಲೆ 'ಸಹಸ್ರಶೀರ್ಷಾ' ಎಂಬ ಮಂತ್ರದಿಂದ ಆವಾಹಿಸಿ ಪೂಜೆ ಮಾಡಿ, ಎಳ್ಳುಮಿಶ್ರವಾದ ಅರಳು ಹಾಲು ಇವುಗಳನ್ನು ಪ್ರತ್ಯೇಕವಾಗಿ ನಿವೇದಿಸಿ ನಾಲ್ಕು ವಿಧವಾದ ಬಲಿಸಮರ್ಪಣ ಮಾಡಬೇಕು.

**ಚತುರ್ವಿಧಂ ತಥಾ ಶ್ವೇತಂ ಸರ್ವಾಲಂಕಾರಸಂಯುತಂ ।**
**ವಾಸುಕಿಂ ಪ್ರಜಪೇತ್ತತ್ರ ಆಪ್ಯಾಯಸ್ವೇತಿ ವೈ ಋಚಾ ॥ ೭೭ ॥**

**ಪಿಣ್ಯಾಕಂ ನಾಗಜಿಹ್ವಾಂ ಚ ತಥಾ ಸರ್ಜರಸಂ ದಧಿ ।**
**ಬಲಯಸ್ತಸ್ಯ ನಿರ್ದಿಷ್ಟಾಸ್ತಕ್ಷಕಂ ಲೋಹಿತಂ ಯಜೇತ್ ॥ ೭೮ ॥**

**ಪದ್ಮಂ ಟಂಕಂ ದಧಾನಂ ಚ ಭುಜಾಭ್ಯಾಂ ನಾಗಸತ್ತಮಂ ।**
**ಮನೋಜ್ಞಾ ಇತಿ ಮಂತ್ರೇಣ ಆಜ್ಯಂ ಸೋಮೋ ಬಲಿಂ ಹರೇತ್ ॥ ೭೯ ॥**

**ಕರ್ಕೋಟಕಂ ಚ ದ್ವಿಭುಜಂ ಪೀತವಸ್ತ್ರಧರಂ ಯಜೇತ್ ।**
**ಪಂಚನದ್ಯ ಇತಿ ಋಚಾ ವಿಷ್ಣುಕ್ರಾಂತಾ ಬಲಿರ್ಭವೇತ್ ॥ ೮೦ ॥**

**ಪೀತವಸ್ತ್ರಂ ತು ಕುಳಿಕಂ ಯೋಜಯೇತ್ತು ಚತುರ್ಭುಜಂ ।**
**ಭುಜಾಭ್ಯಾಮೂರ್ಧ್ವಭಾಗೇ ತು ರಕ್ತಪದ್ಮಧರಂ ಹರಿಂ ॥ ೮೧ ॥**

---

೭೭-೭೮ ಬಳಿಕ ವಾಸುಕಿಯನ್ನು ಬಿಳಿಯಬಣ್ಣದ ದೇಹವುಳ್ಳವನೂ, ಸಮಸ್ತ ಅಲಂಕಾರಗಳಿಂದ ಕೂಡಿದವನೂ ಆಗಿರುವನೆಂದು ಧ್ಯಾನಿಸಿ, 'ಆಪ್ಯಾಯಸ್ವ' ಎಂಬ ಮಂತ್ರದಿಂದ ಅವನನ್ನು ಆವಾಹಿಸಿ ಪೂಜಿಸಬೇಕು. ಹಿಂಡಿ, ನಾಗಜಿಹ್ವೆ ಸರ್ಜರಸ, ಮೊಸರು ಇವುಗಳಿಂದ ಬಲಿಸಮರ್ಪಣ ಮಾಡಬೇಕು.

೭೯. ಬಳಿಕ ತಕ್ಷಕನೆಂಬ ನಾಗನನ್ನು ಕೆಂಪುಬಣ್ಣವುಳ್ಳವನೂ, ಒಂದು ಕೈಯಲ್ಲಿ ಪದ್ಮ, ಇನ್ನೊಂದು ಕೈಯಲ್ಲಿ ಟಂಕ ಇವನ್ನು ಧರಿಸಿರುವವನೂ, ನಾಗಗಳಲ್ಲಿ ಉತ್ತಮನೂ ಆದವನೆಂದು ಧ್ಯಾನಿಸಬೇಕು. ಬಳಿಕ 'ಮನೋಜ್ಞಾ' ಎಂಬ ಮಂತ್ರದಿಂದ ಆವಾಹಿಸಿ ಆಜ್ಯಮಿಶ್ರವಾದ ಸೋಮರಸವನ್ನು ಬಲಿಸಮರ್ಪಣ ಮಾಡಬೇಕು.

೮೦. ಕರ್ಕೋಟಕನನ್ನು ಎರಡು ಭುಜಗಳುಳ್ಳವನಾಗಿ ಹಳದಿಯ ಬಟ್ಟೆಯನ್ನು ಧರಿಸಿರುವನೆಂದು ಧ್ಯಾನಿಸಿ 'ಪಂಚನದ್ಯಃ' ಎಂಬ ಮಂತ್ರ ಪೂರ್ವಕವಾಗಿ ಆವಾಹಿಸಿ ವಿಷ್ಣುಕ್ರಾಂತಾ ರಸಾನ್ನವನ್ನು ಬಲಿಸಮರ್ಪಣೆ ಮಾಡಬೇಕು.

೮೧. ಬಳಿಕ ಕುಳಿಕನನ್ನು ನಾಲ್ಕು ಭುಜಗಳುಳ್ಳವನೂ, ಹಳದಿಯ ವಸ್ತ್ರವನ್ನು ಧರಿಸಿದವನೂ, ಮೇಲುಭಾಗದ ಎರಡು ಹಸ್ತಗಳಲ್ಲಿ ಕೆಂಪುಕಮಲವನ್ನು ಧರಿಸಿದವನೂ, ವಿಷ್ಣುಸ್ವರೂಪನೂ ಆಗಿದಾನೆಂದು ಧ್ಯಾನಿಸಿ ಪೂಜಿಸಬೇಕು.

ಶರ್ಕರಾಕುಷ್ಟಕಂ ಚೈವ ಬಲಿಸ್ತಸ್ಯ ಪ್ರಕೀರ್ತಿತಃ ।
ದ್ವಿಭುಜಂ ಶಂಖಪಾಲಂ ಚ ಶಂಖಾಭಂ ಶಂಖಧಾರಿಣಂ ॥ ೮೨ ॥

ಪದ್ಮಾಸನಸ್ಥಂ ಪದ್ಮಾಭ್ಯಾಂ ಹಸ್ತಾಭ್ಯಾಂ ಚ ವರಂ ವಿಭುಂ ।
ಧ್ರುವಕ್ಷಿತಿಧ್ರುವೋಽಸೀತಿ ಮಂತ್ರಾಭ್ಯಾಂ ಪೂಜಯೇತ್ಪೃಥಕ್ ॥ ೮೩ ॥

ಘಟೌದನಂ ಭೃಂಗರಾಜಂ ಪದ್ಮಂ ಚ ಬಲಯಸ್ತಯೋಃ ।
ಸ್ವಗೃಹ್ಯೋಕ್ತೇನ ವಿಧಿನಾ ಸಂಸ್ಥಾಪ್ಯಾಗ್ನಿಂ ಕುಶಂಡಿಕಾಂ ॥ ೮೪ ॥

ಕೃತ್ವಾ ಆಜ್ಯಸ್ಯ ಸಂಸ್ಕಾರಂ ವಾರುಣಂ ಶ್ರಪಯೇಚ್ಚರುಂ ।
ಜುಹುಯಾದಷ್ಟಬಿಲ್ವಾನಿ ದಿಗೀಶಾನಾಂ ಘೃತೇನ ವೈ ॥ ೮೫ ॥

---

೮೨. ಸಕ್ಕರೆ ಮಿಶ್ರವಾದ ಕುಷ್ಟಕವನ್ನು ಅವನಿಗೆ ಬಲಿಸಮರ್ಪಣೆ ಮಾಡಬೇಕು. ಶಂಖಪಾಲನನ್ನು ಎರಡು ಭುಜಗಳುಳ್ಳವನೂ, ಶಂಖದಂತೆ ಕಾಂತಿಯುಕ್ತನೂ ಆಗಿ ಶಂಖವನ್ನು ಧರಿಸಿರುವನೆಂದು ಧ್ಯಾನಿಸಿ ಪೂಜಿಸಿ ಮೇಲೆ ತಿಳಿಸಿದ ರೀತಿ ಅದೇ ಬಲಿಸಮರ್ಪಣೆ ಮಾಡಬೇಕು.

೮೩. ಪದ್ಮಾಸನದಲ್ಲಿರತಕ್ಕವನೆಂದು ಪದ್ಮನಾಗನನ್ನು ಧ್ಯಾನಿಸಿ, 'ಧ್ರುವಕ್ಷಿತಿ' ಎಂಬ ಮಂತ್ರಪೂರ್ವಕವಾಗಿ ಪೂಜಿಸಬೇಕು ಎರಡು ಕೈಗಳಲ್ಲೂ ಪದ್ಮವನ್ನು ಧರಿಸಿ ಶ್ರೇಷ್ಠವಾದ ವಿಭುವೆನಿಸಿದವನು ಎಂಬದಾಗಿ ಮಹಾಪದ್ಮನಾಗನನ್ನು ಧ್ಯಾನಿಸಿ 'ಧ್ರುವೋಸಿ' ಎಂಬ ಮಂತ್ರದಿಂದ ಆವಾಹಿಸಿ ಪೂಜಿಸಬೇಕು.

೮೪. ಆ ಇಬ್ಬರು ನಾಗರಿಗೂ ಕ್ರಮವಾಗಿ ಮಡಕೆಯಲ್ಲಿ ಮಾಡಿದ ಭೃಂಗರಾಜಪತ್ರಮಿಶ್ರವಾದ ಅನ್ನ, ಪದ್ಮಪತ್ರಯುಕ್ತವಾದ ಅನ್ನ ಇವುಗಳ ಬಲಿಯನ್ನು ಸಮರ್ಪಿಸಬೇಕು.

೮೫. ಆ ಮೇಲೆ ತನ್ನ ವೇದಶಾಖೆಗೆ ಉಕ್ತವಾಗಿರುವ ವಿಧಿವಿಧಾನದಿಂದ ಅಗ್ನಿಸ್ಥಾಪನಾರ್ಥವಾದ ಕುಶಕಂಡಿಯ (ಪರಿಸ್ತರಣದ) ಲ್ಲಿ ಅಗ್ನಿಯನ್ನು ಪ್ರತಿಷ್ಠಿಸಿ, ಆಜ್ಯಕ್ಕೆ ಮಂತ್ರಪೂರ್ವಕವಾಗಿ ಮಾಡಬೇಕಾದ ಸಂಸ್ಕಾರಗಳನ್ನು ಮಾಡಿ, ವರುಣ ಸಂಬಂಧವಾದ ಮಂತ್ರದಿಂದ ಚರುವನ್ನೂ ಎಂಟು ಬಿಲ್ವಗಳನ್ನೂ ಹೋಮಮಾಡಬೇಕು.

ಏಕೈಕಾಮಾಹುತಿಂ ದದ್ಯಾದ್ಗ್ರಹಾಣಾಂ ಚ ತ್ರಯಂತ್ರಯಂ ।
ಸುಸಮಿದ್ಭಿರ್ಘೃತಮಧುಪಯೋಭಿರ್ಮಿಶ್ರಿತೈಃ ಪೃಥಕ್ ॥ ೮೬ ॥

ಪಲಾಶಸಮಿಧಂ ಪಶ್ಚಾತ್ಪ್ರತಿಷ್ಠಾಮಾಹುತಿತ್ರಯಂ ।
ಶಿವಸ್ಯ ಪರಮಾನ್ನೇನ ಜುಹುಯಾದಷ್ಟಸಂಖ್ಯಯಾ ॥ ೮೭ ॥

ಮಧ್ವಾಜ್ಯಗುಡಮಿಶ್ರಾಭಿರ್ಲಾಜಾಭಿರ್ಜುಹುಯಾತ್ಪೃಥಕ್ ।
ಲಾಜಾ ಯಥೋಕ್ತಂ ವಿತರೇದೇಕೈಕಾಮಾಹುತಿಂ ಕ್ರಮಾತ್ ॥ ೮೮ ॥

ಸ್ಥಾಲೀಪಾಕಸ್ಯ ಜುಹುಯಾದೇಕೈಕಾಮಾಹುತಿಂ ಪುನಃ ।
ವರುಣಂ ಚ ಸಮುದ್ದಿಶ್ಯ ರುದ್ರಂ ಸರ್ವಂ ಪೃಥಕ್ಪೃಥಕ್ ॥ ೮೯ ॥

---

೮೬. ದಿಕ್ಪಾಲಕರಿಗೆ ಒಂದೊಂದು ಆಹುತಿಯನ್ನು ತುಪ್ಪದಿಂದ ಕೊಡಬೇಕು. ನವಗ್ರಹಗಳಿಗೆ ಸಮಿತ್ತು, ಚರು, ಆಜ್ಯ ಈ ಮೂರು ದ್ರವ್ಯಗಳನ್ನೂ ಹೋಮಮಾಡಬೇಕು.

೮೭. ಒಳ್ಳೆಯ ಸಮಿತ್ತು, ತುಪ್ಪ, ಜೇನು, ಚಗು ಚರುವಿಗೆ ಬದಲು, ಹಾಲು ಇವುಗಳು ಮೂರನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಆಹುತಿಕೊಡಬೇಕು. ಆ ಮೇಲೆ ಪ್ರತಿಷ್ಠಾಂಗವಾದ ಮೂರು ಆಹುತಿಗಳಿಗೆ ಮುತ್ತುಗದ ಸಮಿತ್ತನ್ನು ಉಪಯೋಗಿಸಬೇಕು. ಶಿವಪ್ರತಿಷ್ಠಾ ಸಂದರ್ಭದಲ್ಲಿ ಎಂಟು ಆವೃತ್ತಿ ಪರಮಾನ್ನವನ್ನು ಹೋಮ ಮಾಡಬೇಕು.

೮೮. ಅಲ್ಲದೆ ಜೇನು, ಬೆಲ್ಲ, ತುಪ್ಪ, ಇವು ಮಿಶ್ರಣವಾದ ಅರಳಿನಿಂದಲೂ ಪ್ರತ್ಯೇಕ ಪ್ರತ್ಯೇಕವಾಗಿ ಹೋಮಮಾಡಬೇಕು. ಯಥೋಕ್ತವಾದ ವಿಧಾನದಿಂದ ಅರಳು ಒಂದನ್ನೇ ಆಹುತಿಯಾಗಿ ಕ್ರಮದಿಂದ ಹೋಮಮಾಡಬೇಕು.

೮೯. ಸ್ಥಾಲೀಪಾಕ ಹೋಮದಲ್ಲಿಯೂ ಹೀಗೆಯೇ ಒಂದೊಂದೇ ಆಹುತಿಯಾಗಿ ಸಮರ್ಪಿಸಬೇಕು. ಬಳಿಕ ಕಲಶದಲ್ಲಿ ವರುಣನನ್ನು ಉದ್ದೇಶಿಸಿ ರುದ್ರಾಧ್ಯಾಯದ ಮಂತ್ರಾನುವಾಕಗಳನ್ನು ಬೇರೆಬೇರೆಯಾಗಿ ಹೇಳಿ ಪ್ರೋಕ್ಷಣರೂಪವಾದ ಸ್ನಪನವನ್ನೂ ಮಾಡಬೇಕು.

ವಾಸ್ತೋಷ್ಪತಯ ಇತಿ ಮಂತ್ರೇಣ ಪಂಚಗವ್ಯೋ ಭವೇತ್ತತಃ ।
ಸ್ಯೋನಾಪೃಥಿವೀತಿ ಮಂತ್ರೇಣ ವ್ರೀಹಿಮೃತ್ತಿಕಯಾ ಪುನಃ ॥ ೯೦ ॥

ವೃಷಾನ್ನ ಇತಿ ಮಂತ್ರೇಣ ಕಯಾ ನ ಇತಿ ವೈ ಪುನಃ ।
ಕುಶಮೂಲಮೃದಾ ಚೈವ ಚತುಷ್ಪಥಮೃದಾ ತಥಾ ॥ ೯೧ ॥

ಇಮಾ ರುದ್ರೇತಿ ಮಂತ್ರೇಣ ಶ್ರೀಶ್ಚತೇತಿ ಋಚಾ ಪುನಃ ।
ಪದ್ಮಷಂಡಸ್ಯ ಚ ಮೃದಾ ಸ್ನಾಪಯೇತ್ಸುಸಮಾಹಿತಃ ॥ ೯೨ ॥

ತದ್ವಿಷ್ಣೋರಿತಿಮಂತ್ರೇಣ ತಥಾ ಪುಷ್ಪೋದಕೇನ ತು ।
ತೀರ್ಥೋದಕೇನ ಕೃಷ್ಣೇನ ತ್ರಿರಕ್ತೇನ ತ್ರಿಶೀತಕೈಃ ॥ ೯೩ ॥

ಪಂಚರಕ್ತೇನ ರಕ್ತಾನಾಂ ಮೃದಾ ಕೈಶ್ಚ ಕುಶೋದಕೈಃ ।
ಸ್ವರ್ಣತೋಯೈಶ್ಚ ಕಲಶೈರಷ್ಟೋತ್ತರಶತೇನ ತು ॥ ೯೪ ॥

---

೯೦. 'ವಾಸ್ತೋಷ್ಪತೇ' ಎಂಬ ಮಂತ್ರದಿಂದ ಪಂಚಗವ್ಯದಿಂದ ಸ್ನಾನ (ಪ್ರೋಕ್ಷಣ) ಮಾಡಿಸಬೇಕು. 'ಸ್ಯೋನಾ ಪೃಥಿವಿ' ಎಂಬ ಮಂತ್ರದಿಂದ ಪಂಚ ವ್ರೀಹಿಯುಕ್ತವಾದ ಮೃತ್ತಿಕೆಯ ಜಲವನ್ನು ಸಮರ್ಪಿಸಬೇಕು.

೯೧. 'ವೃಷಾನ್ನ' ಎಂಬ ಮಂತ್ರಪೂರ್ವಕವಾಗಿ ದರ್ಭೆಯಬೇರಿನ ಮೃತ್ತಿಕೆಯ ಜಲವನ್ನೂ, 'ಕಯಾನ' ಎಂಬ ಮಂತ್ರದಿಂದ ನಾಲ್ಕುರಸ್ತೆ ಕೂಡಿದ ಚೌಕದ ಮೃತ್ತಿಕಾಜಲವನ್ನೂ ಸಮರ್ಪಿಸಬೇಕು.

೯೨–೯೫. 'ಇಮಾರುದ್ರಾ' ಎಂಬ ಮಂತ್ರಪೂರ್ವಕವಾಗಿ ಪದ್ಮಸರೋವರದ ಮೃತ್ತಿಕೆಯ ಜಲವನ್ನೂ, 'ಶ್ರೀಶ್ಚತೇ' ಎಂಬ ಮಂತ್ರಪೂರ್ವಕವಾಗಿ ತೀರ್ಥ ಮೃತ್ತಿಕೆಯಿಂದಲೂ, ಶಾಂತಚಿತ್ತದಿಂದ ಸ್ನಾನಮಾಡಿಸಬೇಕು. 'ತದ್ವಿಷ್ಣೋ' ಎಂಬ ಮಂತ್ರಪೂರ್ವಕವಾಗಿ ಪುಷ್ಪೋದಕದಿಂದಲೂ, ತೀರ್ಥೋದಕದಿಂದಲೂ, ಕೃಷ್ಣವರ್ಣದ ಮೃತ್ತಿಕಾ ಜಲದಿಂದಲೂ, ಮೂರು ಕೆಂಪುಬಣ್ಣದ ಮೃತ್ತಿಕೆಗಳಿಂದಲೂ, ಮೂರುಶೀತವಸ್ತುಗಳಿಂದಲೂ, ರಕ್ತವರ್ಣಗಳಿಗಾಗಿ ಐದು ಬಗೆಯ ಕೆಂಪುಮೃತ್ತಿಕೆಗಳಿಂದಲೂ, ದರ್ಭೆಯುಕ್ತವಾದ ಜಲದಿಂದಲೂ, ಕಲಶದಲ್ಲಿ ಸುವರ್ಣ ಹಾಕಿ ಆ ತೈಜಸ ಜಲದಿಂ

ತೈಜಸ್ಯೈರ್ಮಾರ್ತಿಕೈಶ್ಚಾಪಿ ಅಷ್ಟಾವಿಂಶತಿಭಿಸ್ತಥಾ ।
ಯಥಾಶಕ್ತಿ ತು ಸಂಸ್ನಾಪ್ಯ ಕುಂಕುಮ್ಯೈಶ್ಚಂದನೈರಪಿ ॥ ೯೫ ॥

ಅನ್ನಂ ಲಿಪ್ಯ ತತೋ ಮೃದ್ಭಿರ್ದದ್ಯಾಚ್ಚೈವ ಯಥಾಕ್ರಮಂ ।
ಸುರಾಸುರೇತಿ ಚ ಋಚಾ ವಸ್ತ್ರಯುಗ್ಮೇನ ವೇಷ್ಟಯೇತ್ ॥ ೯೬ ॥

ಧ್ವಜಂ ಚ ಧನುನಾಗೇತಿ ಗಂಧದ್ವಾರೇತಿ ಚಂದನಂ ।
ಧೂರಸೀತಿ ತತೋ ಧೂಪಂ ಹೋತ್ರೇಚಾಹೇತಿ ದೀಪಕಂ ॥ ೯೭ ॥

ಸಿಂಧೋಸೀತಿ ಚ ಸಿಂಧೂರಂ ಸ್ವಭಾವೇ ರಕ್ತಕಂ ತಥಾ ।
ಮಾಲತೀಕುಸುಮ್ಯೈಃ ಕೃತ್ಯೈರ್ನಾಗಾನ್ ಸಂಸ್ಥಾಪಯೇತ್ತತಃ ॥ ೯೮ ॥

ಧಾರಾಭಿಃ ಶತಪುಷ್ಪಾಭಿರ್ಗಂಧತೋಯಾದಿಭಿಸ್ತಥಾ ।
ಅಥವಾಶ್ವತ್ಥಪತ್ರೇಷು ವಟಪತ್ರೇಷು ವಾ ಸುಧೀಃ ॥ ೯೯ ॥

---

ದಲೂ ವಿವಿಧಮೃತ್ತಿಕಾ ಜಲದಿಂದಲೂ ನೂರೆಂಟುಸಾರಿ ಅಥವಾ ಇಪ್ಪತ್ತೆಂಟುಸಾರಿ ಇಲ್ಲವೇ ತನ್ನ ಶಕ್ತಿಯಿದ್ದಷ್ಟುಮಟ್ಟಿಗೆ ಪ್ರೇಕ್ಷಣ (ಸ್ನಾನ) ಮಾಡಿಸಬೇಕು

೯೬. ಕೇಸರಿ ಗಂಧ ಇವುಗಳಿಂದ ಮಿಶ್ರವಾದ ಶಾಲ್ಯನ್ನವನ್ನು ಲೇಪಿಸಿ ಅನಂತರ ಕ್ರಮವಾಗಿ ಮೃತ್ತಿಕಾಜಲದಿಂದ ಸ್ನಾನಮಾಡಿಸಬೇಕು ಅನಂತರ 'ಸುರಾಸುರ' ಎಂಬ ಮಂತ್ರಪೂರ್ವಕವಾಗಿ ಒಂದು ಜೊತೆ ವಸ್ತ್ರವನ್ನು ಹೊದ್ದಿಸಬೇಕು.

೯೭. 'ಧನುನಾಗಾ' ಎಂಬ ಮಂತ್ರದಿಂದ ಧ್ವಜವನ್ನು ಸಮರ್ಪಿಸಬೇಕು. 'ಗಂಧದ್ವಾರಾಂ' ಎಂಬ ಮಂತ್ರದಿಂದ ಚಂದನವನ್ನೂ, 'ಧೂರಸಿ' ಎಂಬ ಮಂತ್ರದಿಂದ ಧೂಪವನ್ನೂ ಸಮರ್ಪಿಸಬೇಕು. 'ಹೋತ್ರೇಚಾಹ' ಎಂಬ ಮಂತ್ರದಿಂದ ದೀಪವನ್ನೂ ಬೆಳಗಬೇಕು.

೯೮. 'ಸಿಂಧೋಸಿ' ಎಂಬ ಮಂತ್ರದಿಂದ ಸಿಂಧೂರ (ಚಂದಿರ) ವನ್ನು ಸಮರ್ಪಿಸಬೇಕು. ಸಹಜವಾಗಿ ಕೆಂಪಗಿರುವ ಗಂಧ ಮತ್ತು ಮಾಲತೀಪುಷ್ಪ ಇವುಗಳಿಂದ ನಾಗಗಳನ್ನು ಪೂಜಿಸಿ ಸ್ನಾನಮಾಡಿಸಬಹುದು.

೯೯. ಹಿಂದೆ ಹೇಳಿದ ಪುಷ್ಪಗಳು ಗಂಧಯುಕ್ತವಾದ ಜಲ ಮೊದಲಾದುವುಗಳನ್ನು ನೂರಾರು ಧಾರೆಗಳಾಗಿ ಬೀಳುವ ಧಾರಾಪಾತ್ರೆಯ ಮೂಲಕ ಅಭಿಷೇಕ ಮಾಡಬೇಕು ಅನಂತರ ನಾಗಗಳನ್ನು ಸ್ಥಾಪನಮಾಡಬೇಕು.

ರೋಚನಾ ಕುಂಕುಮೈರ್ವಾಪಿ ಸಂಲಿಖ್ಯ ತತ್ರ ಪೂಜಯೇತ್ ।
ಪ್ರಕ್ಷಿಪೇತ್ತತ್ರ ಮುಕ್ತಾ ಹಿ ಕಲಶೇಷು ವಿನಿಕ್ಷಿಪೇತ್ ॥ ೧೦೦ ॥

ಮಂಡಪಸ್ಯೋತ್ತರೇ ದೇಶೇ ಶಯ್ಯಾಂ ನಿರ್ಮಾಯ ಶೋಭನಾಂ ।
ರಾಜತಂ ವಾರುಣಂ ತಸ್ಯಾಂ ಪಾದಮಾತ್ರೇಣ ನಿರ್ಮಿತಾಂ ॥ ೧೦೧ ॥

ಅಂಗುಷ್ಠಮಾತ್ರಂ ಸಂಸ್ಥಾಪ್ಯ ತತಃ ಪುಷ್ಕರಿಣೀಮಪಿ ।
ಸ್ವರ್ಣಪಾದೇನ ಘಟಿತಾಂ ಚತುರಸ್ರಾಂ ಸುಶೋಭನಾಂ ॥ ೧೦೨ ॥

ಅಂಗುಷ್ಠಮಾತ್ರಂ ಸಂಪೂಜ್ಯ ವರುಣಾಯ ನಿವೇದಯೇತ್ ।
ಯಥಾಶಕ್ತಿ ತತೋ ಗಾಂ ಚ ಸಂಭವೇ ಪಂಚವಿಂಶತಿಃ ॥ ೧೦೩ ॥

ಸುವರ್ಣಂ ರಾಜತಂ ಚೈವ ಧಾನ್ಯಂ ವಾಸೋ ವರಾಟಕಂ ॥ ೧೦೪ ॥

ನಾಗಯಷ್ಟಿಂ ಸಮಾದಾಯ ಕಿಂಚಿದುತ್ತರಗಾಂ ತಥಾ ॥ ೧೦೫ ॥

---

೧೦೦. ತಿಳಿವಳಿಕೆಯುಳ್ಳ ಮನುಷ್ಯನು ಅರಳಿಯ ಎಲೆ, ಅಥವಾ ಆಲದ ಎಲೆಯನ್ನು ತೆಗೆದುಕೊಂಡು ಅದರ ಮೇಲೆ ಗೋರೋಚನದಿಂದಲೋ, ಕುಂಕುಮಕೇಸರಿಯಿಂದಲೋ ನಾಗಾಕೃತಿಯನ್ನು ಬರೆದು ಅಲ್ಲಿಟ್ಟು ಪೂಜಿಸಬೇಕು.

೧೦೧–೧೦೩. ಕಲಶಗಳಲ್ಲಿ ಪ್ರತಿಮೆಯ ಬದಲು ಮುತ್ತುಗಳನ್ನು ಹಾಕಬಹುದು. ಮಂಟಪದ ಉತ್ತರದಲ್ಲೊಂದು ಕಡೆ ಮಂಗಳಕರವಾದ ಹಾಸಿಗೆಯನ್ನು ಹಾಸಿ ಅದರಲ್ಲಿ ಪಾದಪ್ರಮಾಣದಲ್ಲಿ ಬೆಳ್ಳಿಯಿಂದ ಮಾಡಿದ ಅಂಗುಷ್ಟಮಾತ್ರದಷ್ಟಿರುವ ವರುಣ ಪ್ರತಿಮೆಯನ್ನೂ, ಅದರ ಪಕ್ಕದಲ್ಲಿ ಪಾದಪ್ರಮಾಣ ಚಿನ್ನದಲ್ಲಿ ಚಚ್ಚೌಕವಾಗಿ ಅಂಗುಷ್ಟ ಮಾತ್ರದಷ್ಟಾಗಿ ರಚಿತವಾಗಿ ಶೋಭಿಸುವಂತಿರುವ ಪುಷ್ಕರಿಣೀ ಪ್ರತಿಕೃತಿಯನ್ನೂ ಇರಿಸಿ ಪೂಜೆಮಾಡಿ ಅದನ್ನು ವರುಣನಿಗೆ ನಿವೇದಿಸಬೇಕು. ಆಗ ಸಾಧ್ಯವಾದರೆ ಇಪ್ಪತ್ತೈದು ಗೋವುಗಳನ್ನೋ ಇಲ್ಲದಿದ್ದರೆ ತನ್ನ ಶಕ್ತಿಯಿದ್ದಷ್ಟನ್ನೋ ಅದರ ಜೊತೆ ಸಮರ್ಪಿಸಬೇಕು.

೧೦೫. ಬಳಿಕಚಿನ್ನದ ಅಥವಾ ಬೆಳ್ಳಿಯಿಂದ ಮಾಡಿದ ಸರ್ಪ ಪ್ರತಿಮೆಯೊಡನೆ ಧಾನ್ಯ, ವಸ್ತ್ರ, ಕವಡೆ, ನಾಗಯಷ್ಟಿ ಇವುಗಳನ್ನು ತೆಗೆದುಕೊಂಡು ಸ್ವಲ್ಪ ಉತ್ತರದಕಡೆಗೆ ಹೋಗಿ ಇರಿಸಬೇಕು.

ತತೋಕ್ಷತಾಯ ಭೌಮಾಯ ಕೃತ್ವಾ ಚಾಜ್ಯಾಹುತಿತ್ರಯಂ ।
ಲಾಜಾ ದಧಿಸಮಾಯುಕ್ತಂ ಘೃತಂ ಮಧುಗುಡಂ ತಥಾ ॥ ೧೦೬ ॥

ಕ್ಷೀರಂ ಚ ಪಿಷ್ಟಕಂ ಚೈವ ಶಷ್ಕುಲೀಗಂಧಪುಷ್ಪಕಂ ।
ಪಂಚಾಮೃತಂ ಪಂಚರತ್ನಂ ಗರ್ಭೇ ದದ್ಯಾತ್ಸಮಾಹಿತಃ ॥ ೧೦೭ ॥

ಆಚಾರ್ಯೋ ಯಜಮಾನೇನ ಸುಸನ್ನದ್ಧೈಶ್ಚ ಭೃತ್ಯಕೈಃ ।
ಗಂಗಾಜಲೇಶಯೋರ್ಮಧ್ಯೇ ಪಂಚಘೋಷಪುರಸ್ಸರಂ ॥ ೧೦೮ ॥

ಅವಾಪ್ಯ ಚ ತತೋ ಯಷ್ಟಿಂ ಸ್ಥಿರೋ ಭವತಿ ವೈ ರಿವಾ ।
ಧ್ರುವಂಧ್ರುವೇತಿ ಮಂತ್ರೇಣ ಯಷ್ಟಿಮಾಮಂ ತ್ರಯೋತ್ತತಃ ॥ ೧೦೯ ॥

ಯಜ್ಞಪ್ರಿಯಾಸಿ ದೇವಿ ತ್ವಂ ಸರ್ವವಿಘ್ನವಿನಾಶಿನೀ ।
ಪಾಹಿ ಮಾಂ ಸರ್ವಪಾಪೇಭ್ಯ ಆತ್ಮನಾ ತ್ವಂ ಸ್ಥಿರೀಭವ ॥ ೧೧೦ ॥

---

೧೦೬. ಅನಂತರ ಅಗ್ನಿಯ ಸಮೀಪಕ್ಕೆ ಬಂದು ಅಕ್ಷತನಾದ ಅಂಗಾರಕನನ್ನು ಉದ್ದೇಶಿಸಿ ಮೂರು ಆವೃತ್ತಿ ಆಜ್ಯಾಹುತಿಯನ್ನು ಕೊಡಬೇಕು. ಬಳಿಕ ಅರಳು, ಮೊಸರು, ಜೇನುತುಪ್ಪ, ಬೆಲ್ಲ ಇವುಗಳನ್ನೂ

೧೦೭. ಹಾಲು ಹಿಟ್ಟು, ಚಕ್ಕುಲಿ, ಗಂಧ, ಪುಷ್ಪ, ಪಂಚಾಮೃತ, ಪಂಚರತ್ನಗಳು ಇವುಗಳನ್ನೂ ಶಾಂತಚಿತ್ತನಾಗಿ ನಾಗಯಷ್ಟಿಗೆ ಸಮರ್ಪಿಸಬೇಕು.

೧೦೮. ಅನಂತರ ಆಚಾರ್ಯನು ಯಜಮಾನನ್ನೊಡಗೊಂಡು ಸುಸಜ್ಜಿತರಾದ ಭೃತ್ಯರಿಂದ ಆ ನಾಗಯಷ್ಟಿಯನ್ನು ತೆಗೆಯಿಸಿಕೊಂಡು ಐದುವಿಧವಾದ ವಾದ್ಯಧ್ವನಿ ಸಮೇತವಾಗಿ ಬಂದು ವರುಣ ಕಲಶ, ಗಂಗೆ ಪುಷ್ಕರಿಣಿ ಇವುಗಳ ಮಧ್ಯೆ ಇರಿಸಬೇಕು.

೧೦೯. ಆ ನಾಗಯಷ್ಟಿಯನ್ನು ಅಲ್ಲಿರಿಸಿ 'ಸ್ಥಿರೋಭವತಿ' ಎಂಬ ಮಂತ್ರದಿಂದಲೋ 'ಧ್ರುವಂಧ್ರುವ' ಎಂಬ ಮಂತ್ರದಿಂದಲೋ ಅದನ್ನು ಅಭಿಮಂತ್ರಿಸಬೇಕು

೧೧೦-೧೧೨. ಬಳಿಕ 'ಸರ್ವವಿಘ್ನಗಳನ್ನೂ ನಾಶಮಾಡತಕ್ಕ ವಿಘ್ನವಿನಾಶಿನೀ ದೇವಿಯೇ! ನೀನು ಯಜ್ಞಪ್ರಿಯಳಾಗಿದ್ದೀ. ಸಮಸ್ತ ಪಾಪಗಳ ದೆಸೆಯಿಂದ ತಪ್ಪಿಸಿ

ಇತ್ಯಾಮಂತ್ರ್ಯ ಯಜೇಚ್ಚೈವ ಗಾಯತ್ರೀಂ ಚ ಪಠೇತ್ತತಃ ।
ವನಸ್ಪತೇತಿ ವಿಡವಾಮಿತಿ ಮಂತ್ರಂ ಜಪೇತ್ಪುನಃ ॥ ೧೧೧ ॥

ಪುನರಾಗತ್ಯ ತಾಂ ವೇದಿಂ ನಿರ್ಮಥ್ಯ ವರುಣಂ ಪ್ರಭುಂ ।
ತಥಾ ಪುಷ್ಕರಿಣೀಂ ಚೈವ ವರ್ಧನೀಂ ಕಲಶೋದಕೈಃ ॥ ೧೧೨ ॥

ಅನಿಷ್ಟಂ ಮಾರ್ಜಯೇನ್ನಾಗಾನುದ್ಧೃತ್ಯ ಕಲಶಂ ತಥಾ ।
ಪಾಷಾಣಾಭ್ಯಂತರಂ ಕೃತ್ವಾ ಗೋಮಯೈಃ ಪರಿಲಿಪ್ಯ ಚ ॥ ೧೧೩ ॥

ವರುಣಂ ಪುಷ್ಕರಿಣ್ಯಾಂ ಚ ಜಲಮಧ್ಯೇ ವಿನಿಕ್ಷಿಪೇತ್ ।
ವಿಧಾಯ ನಾಗರಾಜಾನಮ್ಯಚಾಭ್ಯಾಂ ಪರಿಸೂತ್ರಕೈಃ ॥ ೧೧೪ ॥

ನಿರ್ಮಂಥೇತ್ತತ್ರ ಯೋ ನಾಗಃ ಸ್ಥಾಪಯೇತ್ತು ಯಥಾವಿಧಿ ।
ಶ್ರಾವಯೇತ್ತಮಿಮಂ ಮಂತ್ರಮತ್ರ ಸನ್ನಿಹಿತೋ ಭವ ॥ ೧೧೫ ॥

---

ನನ್ನನ್ನು ಕಾಪಾಡು. ನನ್ನ ಆತ್ಮನೊಡನೆ ಸ್ಥಿರವಾಗಿರು" ಎಂದು ಹೇಳಿ ಪೂಜಿಸಬೇಕು ಬಳಿಕ ಗಾಯತ್ರೀಮಂತ್ರವನ್ನು ಪಠಿಸಬೇಕು. 'ವನಸ್ಪತೇ' ಎಂಬ ಮಂತ್ರವನ್ನೂ 'ವಿಡವಾಂ' ಎಂಬ ಮಂತ್ರವನ್ನೂ ಮತ್ತೆ ಜಪಿಸಬೇಕು.

೧೧೩. ಪುನಃ ಆ ವೇದಿಕೆಯ ಸಮೀಪಕ್ಕೆ ಬಂದು ಪ್ರಭುವಾದ ವರುಣ (ಕಲಶ) ಸುವರ್ಣಪುಷ್ಕರಿಣಿ ಇವನ್ನು ಕಲಶದ ನೀರಿನಿಂದ ಪ್ರೋಕ್ಷಿಸಬೇಕು. ಅನಂತರ ನಾಗಗಳನ್ನು ಮಾರ್ಜನಮಾಡಿ ಕಲಶವನ್ನು ಹಿಡಿದು ಮೇಲಕ್ಕೆತ್ತಿ ಅದರ ಒಳಗಡೆ ಕಲ್ಲು (ಪಾಷಾಣ) ಗಳಿಂದ ಕೂಡಿರುವಂತೆ ಮಾಡಿ ಹೊರಗೆ ಗೋಮಯದಿಂದ ಲೇಪನಮಾದಬೇಕು.

೧೧೪. ಬಳಿಕ ವರುಣ ಕಲಶವನ್ನು ಪುಷ್ಕರಿಣಿಯಲ್ಲಿ ನೀರಿನೊಳಗೆ ಬಿಡಬೇಕು. ಅನಂತರ 'ನಮೋಸ್ತು' ಎಂಬ ಮಂತ್ರಪೂರ್ವಕವಾಗಿ ಪಾಯಸದಿಂದ ಬಲಿಯನ್ನು ಸಮರ್ಪಿಸಬೇಕು.

೧೧೫-೧೧೬. ಆ ಪುಷ್ಕರಿಣಿಯಲ್ಲಿಯೇ ವಿಧಿಪ್ರಕಾರವಾಗಿ ನಾಗನನ್ನು ಸಂಸ್ಥಾಪಿಸಿ ನಿರ್ಮಂಥನಮಾಡಬೇಕು. " ಹೇ ನಾಗನೇ ಇಲ್ಲಿ ಆವಾಹಿತನಾಗು ಎಂದು

**ಅತ್ರ ಸ್ವಾಮೀ ಭವಾನ್ನಾಗ ರಕ್ಷಣೀಯಸ್ತ್ವಯಾ ಜನಃ ।**
**ಗಾಯತ್ರೇಣ ಛಂದಸಾಮೀಮಂತ್ರಂ ಸಂಶ್ರಾವಯೇತ್ಪುನಃ ॥ ೧೧೬ ॥**

**ಸಂಪೂಜ್ಯ ಗಂಧಪುಷ್ಪಾದ್ಯೈಃ ಪುರತೋ ನಿಕ್ಷಿಪೇದ್ದಿಶಿ ।**
**ವಿಧಾಯ ನಾಗರಾಜಾನಮ್ಯಚಾಭ್ಯಾಂ ಪರಿಸೂತ್ರಕೈಃ ॥ ೧೧೭ ॥**

**ಸನ್ನಿರುದ್ಧ್ಯಾಶು ಸಂಸ್ಥಾಪ್ಯ ಬಲಿಂ ದದ್ಯಾದ್ವಿಧಾನತಃ ।**
**ಲಾಜೌದನಂ ಮನಸ್ತಸ್ಯ ಯಜ್ಜಾಗ್ರತ ಋಚಾ ಜಪೇತ್ ॥ ೧೧೮ ॥**

**ಏವಂ ಭೂರಿತಿ ಮಂತ್ರೈಃ ಸ್ವೈಃ ಸ್ವೈರೇವ ತು ಪೃಥಗ್ವಿಧೈಃ ।**
**ಸ್ವಾಸು ದಿಕ್ಷು ಚ ಸಂಸ್ಥಾಪ್ಯ ಪೂಜಯೇಚ್ಚ ಪ್ರಯತ್ನತಃ ॥ ೧೧೯ ॥**

---

ಹೇಳಿ ಎಲೈ ನಾಗನೇ! ನೀನು ಇಲ್ಲಿಗೆ ಒಡೆಯನು. ನೀನು ಜನಗಳನ್ನು ರಕ್ಷಿಸಬೇಕು. ಎಂಬ ಈ ಮಂತ್ರವನ್ನು ಅದಕ್ಕೆ ಕೇಳಿಸುವಂತೆ ಗಟ್ಟಿಯಾಗಿ ಹೇಳಬೇಕು.

೧೧೭. ಮತ್ತೆ ಗಾಯತ್ರೀ ಮಂತ್ರವನ್ನಾಗಲಿ, ಈ ಮಂತ್ರವನ್ನಾಗಲಿ ಗಟ್ಟಿಯಾಗಿ ಹೇಳಬೇಕು. ನಾಗರಾಜ ಪ್ರತಿಮೆಯು ಸುತ್ತಲೂ ಸೂತ್ರಗಳನ್ನು ಆವರಿಸುವಂತೆ ಸುತ್ತಿ ಗಂಧ, ಹೂವು ಮೊದಲಾದುವುಗಳಿಂದ ಪೂಜಿಸಿ ಆ ಪುಷ್ಕರಿಣಿ ದಿಕ್ಕಿಗೆ ಅಭಿಮುಖವಾಗಿರುವಂತೆ ಒಳಗೆ ನಿಕ್ಷೇಪಮಾಡಬೇಕು.

೧೧೮. ಈ ರೀತಿ ನಿಕ್ಷೇಪಣಕಾಲದಲ್ಲಿ ವಿಘ್ನನಿರೋಧ ಮಾಡಿ ಜಾಗ್ರತೆ ಸ್ಥಾಪನೆಮಾಡಿ ವಿಧಿಪ್ರಕಾರ ಅರಳನ್ನೂ, ಅನ್ನವನ್ನೂ, ಅವನ ಮನಸ್ಸೊಪ್ಪುವಂತೆ ಬಲಿದ್ರವ್ಯಗಳನ್ನು ನಿವೇದಿಸಬೇಕು.

೧೧೯. ಮತ್ತು 'ಯಜ್ಜಾಗ್ರತ' ಎಂಬ ಮಂತ್ರವನ್ನು ಜಪಮಾಡಬೇಕು. 'ಏವಂಭೂಃ' ಎಂಬ ಮಂತ್ರವೇ ಮೊದಲಾಗಿ ಆಯಾ ನಾಗರಿಗೆ ಸ್ವಕೀಯವೆಂದು ಉಕ್ತವಾದ ಬಗೆಬಗೆಯಾದ ವಸ್ತುಗಳನ್ನು ಬೇರೆಬೇರೆ ಮಂತ್ರಪೂರ್ವಕವಾಗಿ ಆಯಾ ನಾಗರು ವಾಸಿಸುವ ದಿಕ್ಕುಗಳಲ್ಲಿ ಪ್ರಯತ್ನಪೂರ್ವಕವಾಗಿ ಬಲಿಸಮರ್ಪಣೆಗಾಗಿರಿಸಿ ಪೂಜಿಸಬೇಕು.

ಪೂರ್ವಭಾಗೇ ಪುಷ್ಕರಿಣ್ಯಾಂ ಹರಿತಾಭಂ ಸವಜ್ರಕಂ ।
ಹಲಗ್ರಹೇತಿಮಂತ್ರೇಣ ನ್ಯಸ್ಯ ಲಾಜಾಹುತಿಂ ಕುಲೇ ॥ ೧೨೦ ॥

ತ್ರಾತಾರಮಿತಿ ಮಂತ್ರೇಣ ಅಗ್ನೌ ವಿನ್ಯಸ್ಯ ಮೌಕ್ತಿಕಂ ।
ಮನಃಶಿಲಾಂ ಪ್ರವಾಲಂ ಚ ಅಗ್ನಿಮೀಡೇತಿ ಸಂಪಠೇತ್ ॥ ೧೨೧ ॥

ವೈಶ್ವಾನರೇಣ ಮಂತ್ರೇಣ ಪಟೆಲ್ಲಾಜಾಹುತಿಂ ಪುನಃ ।
ದದ್ಯಾದ್ಯೇ ತೇ ಶತಮಂತ್ರೇಣ ಪಶ್ಚಿಮೇ ಕಾಟಿಕಂ ನ್ಯಸೇತ್ ॥ ೧೨೨ ॥

ಶಾಲಬೀಜೇನ ಸಹಿತಂ ಕೆಯೊನ ಇತಿ ಮಂತ್ರಕಂ ।
ವರುಣಸ್ಯೋ ಇತಿ ಮಂತ್ರೇಣ ದದ್ಯಾದಷ್ಟಾದಶಾಹುತೀಃ ॥ ೧೨೩ ॥

ಉತ್ತರೇ ರೋಚನಾಂ ಕನ್ಯಾಂ ತಥೈವ ಗೌರಸರ್ಷಪಂ ।
ಕುಂಕುಮೇನ ಸಮಾಯುಕ್ತಂ ಕುವಿದಂಡಮೃಚಾ ಪಠೇ ॥ ೧೨೪ ॥

---

೧೨೦=೧೨೧. ಪುಷ್ಕರಿಣಿಯಲ್ಲಿ ಪೂರ್ವಭಾಗದಲ್ಲಿ ಹರಿತವರ್ಣದ ಕಾಂತಿಯುಳ್ಳ ವಜ್ರಸಹಿತವಾದ ದೇವನನ್ನು 'ಹಲಗೃಹ' ಎಂಬ ಮಂತ್ರದಿಂದ ನ್ಯಾಸ ಮಾಡಬೇಕು. ಬಳಿಕ ಯಜ್ಞಶಾಲೆಗೆ ಬಂದು ಅಲ್ಲಿ 'ತ್ರಾತಾರಂ' ಎಂಬ ಮಂತ್ರದಿಂದ ಅಗ್ನಿಗೆ ಅರಳನ್ನು ಆಹುತಿಕೊಟ್ಟು 'ಅಗ್ನಿಮೀಡೇ' ಎಂಬ ಮಂತ್ರವನ್ನು ಜಪಿಸುತ್ತಾ ಮುತ್ತು, ಹವಳ, ಮನಃಶಿಲೆ ಇವುಗಳನ್ನೂ ವಿನ್ಯಾಸಮಾಡಬೇಕು.

೧೨೨. 'ವೈಶ್ವಾನರಾಯ' ಎಂಬ ಮಂತ್ರದಿಂದ ಮತ್ತೆ ಅರಳನ್ನು ಆಹುತಿ ಕೊಡಬೇಕು. 'ಏತೇಶತ' ಎಂಬ ಮಂತ್ರದಿಂದ ಪಶ್ಚಿಮದಿಕ್ಕಿನಲ್ಲಿ ಶಾಲಿಬೀಜಸಹಿತ ಕಾಟಿಕವನ್ನು ಅರ್ಪಿಸಬೇಕು.

೧೨೩. 'ಕಯೊನ' ಎಂಬ ಮಂತ್ರವನ್ನೂ, 'ವರುಣಸ್ಯೋ' ಎಂಬ ಮಂತ್ರವನ್ನೂ ಹೇಳಿ, ಉತ್ತರಭಾಗದಲ್ಲಿ ಹದಿನೆಂಟು ಆಹುತಿಗಳನ್ನು ಕೊಡಬೇಕು.

೧೨೪–೧೨೫. ಗೋರೋಚನ, ಬಿಳೀಸಾಸುವೆ, ಕೇಸರಿ ಇವುಗಳನ್ನು ಕೂಡಿಸಿ 'ಕುವಿದಂಡ' ಎಂಬ ಮಂತ್ರವನ್ನು ಪಠಿಸುತ್ತಾ ಅಲ್ಲಿ ತಂದು ವಿನ್ಯಾಸಮಾಡಿ, ಅದೇ,

**ವಿನ್ಯಸ್ಯ ತೇನ ಮಂತ್ರೇಣ ಪ್ರದದ್ಯಾದಾಹುತಿಂ ಪುನಃ ।**
**ಐಶಾನ್ಯಾಂ ಮಂದ್ರಕಂ ರಂಗಮೀಶಾವಾ ಇತಿ ಸಂಪಠನ್ ॥ ೧೨೫ ॥**

**ಸಂಸ್ಥಾಪ್ಯಾಜ್ಯಾಹುತಿಂ ದದ್ಯಾತ್ತಮೀಶಾನಮೃಚಾ ಪುನಃ ।**
**ಆಸದ್ಯೈರ್ಮಂತ್ರಸಂಯುಕ್ತೈರ್ದೇವಂ ನಾರಾಯಣಂ ಯಜೇತ್ ॥ ೧೨೬ ॥**

**ವರುಣಾತ್ಮಕಂ ತತೋ ಧ್ಯಾತ್ವಾ ತತೋ ನೀರಾಜನಂ ಪಠೇತ್ ।**
**ಜಾನುಭ್ಯಾಮವನಿಂ ಗತ್ವಾ ಪಠೇಜ್ಜ್ಞಾನಾಮೃತಂ ಸ್ತವಂ ॥ ೧೨೭ ॥**

**ಧರ್ಮೋ ವಂಶಂ ತತಃ ಕುರ್ಯಾದುತ್ಸರ್ಗಾಂತೇ ವಿಧೀಯತೇ ।**
**ತತೋ ದೇವೀಂ ಪುನಃ ಕೃತ್ವಾ ದತ್ವಾ ಪುಷ್ಪಾಂಜಲಿತ್ರಯಂ ॥ ೧೨೮ ॥**

**ಸರ್ವಸತ್ವೋಪಕಾರಾಯ ಸಮುತ್ಸೃಜೇತ್ತು ವೈ ಜನಂ ।**
**ಉತ್ಸೃಷ್ಟಂ ಸರ್ವಸತ್ವೇಭ್ಯೋ ದೃಶ್ಯತೇ ಜಲಮೂರ್ಜಿತಂ ॥ ೧೨೯ ॥**

---

ಮಂತ್ರದಿಂದಲೇ ಮತ್ತೆ ಆಹುತಿಕೊಡಬೇಕು. ಈಶಾನ್ಯದಿಕ್ಕಿನಲ್ಲಿ 'ಈಶಾವಾ' ಎಂಬ ಮಂತ್ರವನ್ನು ಪಠಿಸುತ್ತಾ ಮಂದ್ರವನ್ನು ಸ್ಥಾಪಿಸಬೇಕು.

೧೨೬=೧೨೭. 'ತಮೀಶಾನಂ' ಎಂಬ ಮಂತ್ರಪೂರ್ವಕವಾಗಿ ಪುನಃ ಆಜ್ಯಾಹುತಿಕೊಡಬೇಕು. 'ಆಸತ್ಯೇನ' ಎಂಬ ಮಂತ್ರಪೂರ್ವಕವಾಗಿ ಭಗವಂತನಾದ ನಾರಾಯಣನನ್ನು ಪೂಜಿಸಬೇಕು. ನೀರಾಜನ ಮಂತ್ರವನ್ನು ಹೇಳಿ ಮಂಡಿಯನ್ನು ನೆಲದಲ್ಲಿ ಊರಿಕೊಂಡು ಜ್ಞಾನಾಮೃತಸ್ತೋತ್ರವನ್ನು ಸ್ತುತಿಸಬೇಕು.

೧೨೮೧೨೯. ಹೀಗೆ ಉತ್ಸರ್ಜನ ಮಾಡುವಾಗ ಕೊನೆಯಲ್ಲಿ ವಂಶಪರಂಪರೆಯಾಗಿ ಶಾಶ್ವತವಾಗಿ ನಡೆಯುವ ಧರ್ಮವನ್ನು ಮಾಡಬೇಕು. ಅನಂತರ ಮತ್ತೆ 'ದೇವೀಂವಾಚಂ' ಎಂಬ ಮಂತ್ರದಿಂದ ಮೂರುಸಾರಿ ಬೊಗಸೆಯಲ್ಲಿ ಹೂವನ್ನು ಸಮರ್ಪಿಸಿ ಲೋಕದ ಸಮಸ್ತಪ್ರಾಣಿಗಳಿಗೂ ಉಪಕಾರವಾಗಲಿ ಎಂಬದಾಗಿಯೂ ಹೀಗೆ ಉತ್ಸರ್ಜನಮಾಡಿದ ಈ ಜಲಾಶಯದ ನೀರು ಶಾಶ್ವತವಾಗಿರುತ್ತಾ ಎಲ್ಲ ಪ್ರಾಣಿಗಳಿಗೂ ಗೋಚರವಾಗಲಿ ಎಂದೂ ಹೇಳಬೇಕು.

ರಮಂತೀಂ ಸರ್ವಭೂತಾನಿ ಸ್ನಾನಪಾನಾವಗಾಹನೈಃ ।
ವರುಣಂ ಚ ತತೋ ದೇವಂ ಪುಷ್ಕರಿಣ್ಯಾಂ ಚ ನಿಕ್ಷಿಪೇತ್ ॥ ೧೩೦ ॥

ಜಲೇ ವರುಣಮಂತ್ರೇಣ ಮತ್ಸ್ಯಾದೀನ್ ಪ್ರಕ್ಷಿಪೇತ್ತತಃ ।
ಪಕ್ಷಿಣಶ್ಚ ಶುಭಾಂಸ್ತತ್ರ ಭೇಕಂ ಕೂರ್ಮಂ ಚ ಕರ್ದಮಂ ॥ ೧೩೧ ॥

ಶೈವಾಲಂ ಪ್ರಕ್ಷಿಪೇಚ್ಚೈವ ದಕ್ಷಿಣಾಂ ತದನಂತರಂ ।
ಸುವರ್ಣಂ ಧಾನ್ಯರತ್ನಂ ಚ ಆಚಾರ್ಯಾಯ ಪೃಥಗ್ದದೇತ್ ॥ ೧೩೨ ॥

ಋತ್ವಿಗ್ಭ್ಯಶ್ಚ ಪೃಥಗ್ದದ್ಯಾದ್ಯಥಾ ವಿತ್ತನುಸಾರತಃ ।
ಬ್ರಾಹ್ಮಣೇಭ್ಯೋ ಗಾಯನೇಭ್ಯೋ ವಸುಭ್ಯಶ್ಚ ಪೃಥಕ್ಪೃಥಕ್ ॥ ೧೩೩ ॥

---

೧೩೦. ಈ ಜಲಾಶಯದಲ್ಲಿ ಎಲ್ಲ ಪ್ರಾಣಿಗಳಿಗೂ ಸ್ನಾನಮಾಡುವುದು, ಕುಡಿಯುವುದು, ಮುಳುಗುವುದು, ಮುಂತಾದುವುಗಳನ್ನು ಮಾಡು ಮೂಲಕ ಸಂತೋಷವಾಗಲಿ ಎಂದು ಹೇಳಿ ಅನಂತರ ವರುಣದೇವನ ಪ್ರತಿಮೆಯನ್ನು ವರುಣಮಂತ್ರದಿಂದ ಪುಷ್ಕರಿಣಿಯ ಮಧ್ಯೆ ನೀರಿನಲ್ಲಿ ಬಿಡಬೇಕು.

೧೩೧-೧೩೨. ಅನಂತರ ಆ ನೀರಿನಲ್ಲಿ ಮೀನು ಮೊದಲಾದುವುಗಳ ಪ್ರತಿಮೆಯನ್ನು ಹಾಕಬೇಕು. ಶುಭಕರವಾದ ಜಲಪಕ್ಷಿ, ಕಪ್ಪೆ, ಆಮೆ ಮೊದಲಾದ ಜಂತುಗಳನ್ನೂ, ಪಾಚಿ, ಕೆಸರು ಮುಂತಾದ ಜಲವಸ್ತುಗಳನ್ನೂ ಅದರಲ್ಲಿ ತಂದಿರಿಸಬೇಕು. ಅನಂತರ ಅವುಗಳ ದಕ್ಷಿಣೆಗೋಸ್ಕರವೆಂಬುದಾಗಿ ಹಣವನ್ನೂ, ಧಾನ್ಯವನ್ನೂ, ರತ್ನವನ್ನೂ ಆಚಾರ್ಯನಿಗೆ ಪ್ರತ್ಯೇಕಪ್ರತ್ಯೇಕವಾಗಿ ಕೊಡಬೇಕು.

೧೩೩. ಋತ್ವಿಕ್ಕುಗಳಾದ ಬ್ರಾಹ್ಮಣರಿಗೂ, ಸಾಮಗಾನ ಮಾಡಿದವರಿಗೂ, ವಸುಸ್ಥಾನೀಯರಾದ ವಿಪ್ರರಿಗೂ ತನಗೆ ಶಕ್ತಿಯಿದ್ದಷ್ಟರಲ್ಲಿ ಬೇರೆಬೇರೆಯಾಗಿ ದಕ್ಷಿಣೆ ಧಾನ್ಯ, ರತ್ನ ಮುಂತಾದ್ದನ್ನು ಕೊಡಬೇಕು.

**ನಿತ್ಯಂ ಸಮಾಪ್ಯ ವಿಧಿವದ್ದದ್ಯಾತ್ಪೂರ್ಣಾಹುತಿಂ ಪುನಃ ।**
**ದದ್ಯಾದರ್ಘ್ಯಂ ಚ ಸೂರ್ಯಾಯ ಹಸ್ತ್ರಾಸ ಇತಿ ಸಂಜಪನ್ ॥ ೧೩೪ ॥**

**ತತಃ ಪ್ರದಕ್ಷಿಣಾವರ್ತಂ ಸಂವೇಷ್ಟ್ಯ ಕ್ಷೀರಧಾರಯಾ ।**
**ಪ್ರಾಸಾದಪಕ್ಷೇ ಪ್ರಾಸಾದಮಾರಾಮೇ ಅಥ ಮಂಡಪಂ ॥ ೧೩೫ ॥**

**ಶತಾಧಿಧಾರಯಾ ಶಕ್ತ್ಯಾ ತ್ರಿವಾರಂ ಬ್ರಾಹ್ಮಣೈಃ ಸಹ ।**
**ವಿಕೀರ್ಯ ಲಾಜಾಕುಸುಮಂ ವ್ರೀಹೀಂಶ್ಚೈವ ಕಪರ್ದಕಾನ್ ॥ ೧೩೬ ॥**

**ತೂರ್ಯಘೋಷೇಣ ಮಹತಾ ತತೋ ವಿಪ್ರಪುರಃಸರಂ ।**
**ಯಜಮಾನಃ ಸಪತ್ನೀಕಃ ಪ್ರವಿಶೇತ್ಸ್ವಗೃಹಂ ಪುನಃ ॥ ೧೩೭ ॥**

**ತತೋ ಗೃಹಾರ್ಚನಂ ಕೃತ್ವಾ ಬ್ರಾಹ್ಮಣಾನಥ ಭೋಜಯೇತ್ ।**
**ಕುಮಾರೀಶ್ಚ ಕುಮಾರಾಂಶ್ಚ ದೀನಾಂಧಕೃಪಣಾನಪಿ ॥ ೧೩೮ ॥**

---

೧೩೪-೧೩೭ ಯಜಮಾನನು ತನ್ನ ನಿತ್ಯಕರ್ಮವನ್ನು ಮುಗಿಸಿ ಅನಂತರ ವಿಧಿಪ್ರಕಾರ ಪೂರ್ಣಾಹುತಿ ಹೋಮ ಮಾಡಬೇಕು. ಅನಂತರ ಸೂರ್ಯನಿಗೆ ಅರ್ಘ್ಯ ಪ್ರದಾನಮಾಡಿ 'ಹಸ್ತ್ರಾಸ' ಎಂಬ ಮಂತ್ರವನ್ನು ಜಪಿಸುತ್ತಾ ಪ್ರದಕ್ಷಿಣಾಕಾರವಾಗಿ ಹಾಲಿನ ಧಾರೆಯನ್ನು ತನ್ನ ಸುತ್ತಲೂ ಹನಿಸಬೇಕು. ಪ್ರಾಸಾದವನ್ನು ಪ್ರತಿಷ್ಠಿಸುವುದಾದರೆ ಪ್ರಾಸಾದದ ಸುತ್ತಲೂ, ಮಂಡಪಪ್ರತಿಷ್ಠೆ ಮಾಡುವುದಾದರೆ ಮಂಡಪದ ಸುತ್ತಲೂ ಜಲಧಾರೆಗಳನ್ನು ಸುರಿಸುತ್ತಾ ತನಗೆ ಅನುಕೂಲವಿದ್ದಷ್ಟುಮಟ್ಟಿನಲ್ಲಿ ಮಂಗಳವಾದ್ಯಗಳ ಸಮೇತ ಮತ್ತು ನೂರಾರುಮಂದಿ ಬ್ರಾಹ್ಮಣ ಸಮೇತವಾಗಿ ಅರಳು, ಹೂವು, ಭತ್ತ, ಕಪರ್ದ ಇವುಗಳನ್ನು ಎರಚುತ್ತಾ ಮೂರುಸಾರಿ ಬಳಸಿ ಬರಬೇಕು. ಅನಂತರ ಸಪತ್ನೀಕನಾದ ಯಜಮಾನನು ಬ್ರಾಹ್ಮಣರೊಡನೆ ತನ್ನ ಮನೆಯನ್ನು ಪ್ರವೇಶಿಸಬೇಕು.

೧೩೮-೧೪೫. ಅನಂತರ ಗೃಹವನ್ನು ಎಂದರೆ ಹೊಸಲನ್ನು (ದೇಹಳೀಮಹಾಲಕ್ಷ್ಮಿಯ) ಪೂಜೆಮಾಡಿ ಬ್ರಾಹ್ಮಣಸಂತರ್ಪಣೆ ಮಾಡಬೇಕು. ನಾರಾಯಣನು ಸುಪ್ರೀತನಾಗಲಿ ಎಂಬ ಉದ್ದೇಶದಿಂದ ಬಾಲಿಕೆಯರು, ಬಾಲಕರು, ದರಿದ್ರರು, ಕಾರ್ಪ

ನಾರಾಯಣಂ ತತೋ ದದ್ಯಾದ್ವಿಪ್ರಮುದ್ದಿಶ್ಯ ಭಕ್ತಿತಃ ॥ ೧೩೯ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ದ್ವಿತೀಯಭಾಗೇ
ಏಕವಿಂಶೋಽಧ್ಯಾಯಃ

ಇತಿ ಮಧ್ಯಮಪರ್ವಣಿ ದ್ವಿತೀಯಭಾಗಃ ಸಮಾಪ್ತಃ



---

ಣ್ಯಪಡುವವರು ಇಂಥವರಿಗೂ, ಬ್ರಾಹ್ಮಣರಿಗೂ ಭಕ್ತಿಪೂರ್ವಕವಾಗಿ ದಾನಮಾಡ ಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಎರಡನೇ ಭಾಗದಲ್ಲಿ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

ಮಧ್ಯಮಪರ್ವದ ಎರಡನೆಯ ಭಾಗವು ಮುಗಿದುದು



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ತೃತೀಯಭಾಗೇ

## ಪ್ರಥಮೋಽಧ್ಯಾಯಃ

॥ ಸೂತ ಉವಾಚ ॥

ಆರಾಮಾದೌ ವಿಶೇಷೋ ಯೋ ವಕ್ಷ್ಯತೇಽತ್ರ ಮಯಾಽಧುನಾ ।
ಮಂಡಲಂ ಕಾರಯಿತ್ವಾ ತು ಚತುರಸ್ರಂ ಸಮಂ ಶುಭಂ ॥ ೧ ॥

ಐಶಾನ್ಯಾಂ ಕಲಶೇ ದೇವಂ ತತ್ರ ನಾಥಂ ಪ್ರಪೂಜಯೇತ್ ।
ಮಧ್ಯಮೇ ಕಲಶೇ ಪೂಜಾ ಗ್ರಹಾಣಾಂ ಚ ತತಃ ಪರಂ ॥ ೨ ॥

ಸ್ವದಿಕ್ಷು ದ್ವಾರದೇಶೇ ತು ಪಶ್ಚಿಮದ್ವಾರದೇಶಯೋಃ ।
ಬ್ರಹ್ಮಾಣಂ ಚಾಪ್ಯನಂತಂ ಚ ಮಧ್ಯತೋ ವರುಣಂ ಯಜೇತ್ ॥ ೩ ॥

---

### ಒಂದನೆಯ ಅಧ್ಯಾಯ

೧-೨. ಸೂತಮುನಿವರ್ಯರು ಶೌನಕಾದಿ ಋಷಿಗಳಿಗೆ ಹೇಳುತ್ತಾರೆ—ಈಗ ಉದ್ಯಾನವನದ ಪ್ರತಿಷ್ಠೆಯಸಂದರ್ಭದಲ್ಲಿ ವಿಶೇಷ ವಿಷಯಗಳನ್ನು ಹೇಳುವೆನು ಪ್ರತಿಷ್ಠೆ ಮಾಡಬೇಕಾದ ಉದ್ಯಾನವನದ ಈಶಾನ್ಯದಿಕ್ಕಿನಲ್ಲಿ ಮಂಗಳಕರವಾದ ಚಚ್ಚೌಕವಾದ ಮಂಡಲವನ್ನು ರಚಿಸಿ, ಆ ಮಂಡಲದ ನಡುವೆ ಪ್ರಧಾನದೇವತೆಯ ಕಲಶವನ್ನು ಸ್ಥಾಪಿಸಿ ಅದರಲ್ಲಿ ಆ ದೇವತೆಯನ್ನು ಪೂಜೆಮಾಡಬೇಕು. ತರುವಾಯ ಆದಿತ್ಯಾದಿ ನವಗ್ರಹಗಳ ಪೂಜೆಯುನ್ನೂ ಮಾಡಬೇಕು.

೩-೪. ಆ ಚತುರಸ್ರಮಂಡಲದ ಪಶ್ಚಿಮದಿಕ್ಕಿನ ಬಾಗಿಲಿನ ಅಕ್ಕಪಕ್ಕಗಳಲ್ಲಿ ಬ್ರಹ್ಮನನ್ನೂ, ಅನಂತನನ್ನೂ ಪೂಜಿಸಿ ನಡುವೆ ವರುಣನನ್ನು ಒಂದು ಜಲಪೂರ್ಣ

ವರುಣಂ ಚೋದಕುಂಭಸ್ಥಂ ಭೂತಶಾಖಾಸುಶೋಭನಂ ।
ತೇನ ಚಾವಾಹಯಾಮಿ ತ್ವಾಂ ವಿಭೋ ಸ್ವರ್ಗಾಯ ವೈ ವಿಭೋ ॥ ೪ ॥

ಪೂರ್ವಗಂ ಮಂದರಂ ಸ್ಥಾಪ್ಯ ತೋರಣೋಪರಿ ಸತ್ತಮಾಃ ।
ವಿಷ್ವಕ್ಸೇನಂ ಸಮಭ್ಯರ್ಚ್ಯ ಅರ್ಚನಂ ಸ್ವರ್ಗಸಂಯುತಂ ॥ ೫ ॥

ಕರ್ಣಿಕಾಯಾಂ ವಾಸುದೇವಂ ಶುದ್ಧಸ್ಫಟಿಕಸನ್ನಿಭಂ ।
ಚತುರ್ಭುಜಂ ಶಂಖಚಕ್ರಗದಾಪದ್ಮವಿಭೂಷಿತಂ ॥ ೬ ॥

ಶ್ರೀವತ್ಸಕೌಸ್ತುಭೋರಸ್ಕಂ ಮುಕುಟಾದ್ಯೈರಲಂಕೃತಂ ।
ದಕ್ಷಿಣೇ ಕಮಲಾ ತಸ್ಯ ವಾಮೇ ಪುಷ್ಟಿರ್ವ್ಯವಸ್ಥಿತಿಃ ॥ ೭ ॥

ಸಿದ್ಧಕಿನ್ನರಯಕ್ಷಾದ್ಯೈಃ ಸ್ತೂಯಮಾನಂ ಸುರಾಸುರೈಃ ।
ಸಂಪೂಜ್ಯ ವಿಧಿವದ್ಭಕ್ತ್ಯಾ ವಿಷ್ಣೋರರಾಟಇತ್ಯೃಚಾ ॥ ೮ ॥

---

ವಾದ ಕಲಶದಲ್ಲಿ ಪೂಜಿಸಬೇಕು. ಸ್ವರ್ಗಫಲ ಪ್ರಾಪ್ತಿಗೋಸ್ಕರವಾಗಿ ಸರ್ವವ್ಯಾಪಿಯಾದ ಶಿವನನ್ನು ಉದ್ಯಾನದ ಗಿಡಗಳಲ್ಲಿ ಪೂಜಿಸುವೆನೆಂದು ಸಂಕಲ್ಪಮಾಡಿ ಪೂಜಿಸಬೇಕು.

೫-೮. ಶ್ರೇಷ್ಠರಾದ ಋಷಿಗಳೇ! ಕೇಳಿರಿ; ಮಂಡಲದ ಪೂರ್ವದಿಕ್ಕಿನ ದ್ವಾರದಲ್ಲಿ ಮಂದರಪರ್ವತವನ್ನು ಸ್ಥಾಪಿಸಿ, ಅಲ್ಲಿ ಗಣಪತಿಯನ್ನಿಟ್ಟು ಪೂಜಿಸಿ ನಡುವೆಯಿರುವ ಕರ್ಣಿಕೆಯಲ್ಲಿ ಶುದ್ಧವಾದ ಸ್ಫಟಿಕಕ್ಕೆ ಸಮಾನವಾದ ಬಣ್ಣದಿಂದ ಕೂಡಿದವನೂ ಶಂಖಚಕ್ರ ಗದಾಪದ್ಮಗಳನ್ನು ಧರಿಸಿದವನೂ, ಎದೆಯಲ್ಲಿ ಶ್ರೀವತ್ಸವೆಂಬ ಮಚ್ಚೆಯನ್ನೂ ಕೌಸ್ತುಭರತ್ನವನ್ನೂ ಧರಿಸಿರುವವನೂ, ಕಿರೀಟಾದಿ ಆಭರಣಗಳಿಂದ ಅಲಂಕೃತನೂ, ಆದ ವಾಸುದೇವನನ್ನು 'ವಿಷ್ಣೋರರಾಟಮಸಿ' ಎಂಬ ಮಂತ್ರದಿಂದ ಪೂಜಿಸಬೇಕು. ಆ ವಾಸುದೇವನ ಬಲದಲ್ಲಿ ಲಕ್ಷ್ಮೀದೇವಿಯನ್ನೂ, ಎಡದಲ್ಲಿ ಪುಷ್ಟೀದೇವಿಯನ್ನೂ ಪೂಜಿಸಬೇಕು. ಸಿದ್ಧರು, ಕಿನ್ನರರು, ಯಕ್ಷರು, ಸುರಾಸುರರು ಇವರಿಂದ ಸ್ತೋತ್ರ ಮಾಡಿಸಿಕೊಳ್ಳುವ ಮಹಾವಿಷ್ಣುವನ್ನು ಭಕ್ತಿಯಿಂದ ವಿಧಿಗನುಸಾರವಾಗಿ ಪೂಜಿಸಬೇಕು.

**ದಲೇ ಸಂಕರ್ಷಣಾದೀಂಶ್ಚ ವಿಮಲಾದ್ಯಾಶ್ಚ ನಾಯಿಕಾಃ ।**
**ಸಂಪೂಜ್ಯ ಧೂಪದೀಪಾದ್ಯೈರುಪಹಾರೈರನುತ್ತಮೈಃ ॥ ೯ ॥**

**ಘೃತಪ್ರದೀಪೋ ದೇವಸ್ಯ ಗುಗ್ಗುಲುಸ್ಸರಲಸ್ತಥಾ ।**
**ಧೂಪೋ ದೇವಬಲಿಃ ಕ್ಷೀರಂ ಪರಮಾನ್ನಂ ಘೃತಪ್ಲುತಂ ॥೧೦॥**

**ಧ್ಯಾಯೇತ್ ಸೋಮಂ ಕರ್ಣಿಕಾಯಾಂ ದಕ್ಷಿಣೇ ಪದ್ಮಸಂಸ್ಥಿತಂ ।**
**ಶುಕ್ಲಾಭಂ ದ್ವಿಭುಜಂ ಶಾಂತಂ ಕೇಯೂರಾದ್ಯುಪಶೋಭಿತಂ ॥ ೧೧ ॥**

**ಪ್ರಶಸ್ಯಂ ದೇವಯಕ್ಷಾಣಾಂ ವರದಾಭಯಹಸ್ತಕಂ ।**
**ಇಮಂ ದೇವಾ ಇತಿ ಋಚಾ ಉಪಚಾರೈಃ ಪೃಥಗ್ವಿಧೈಃ ॥ ೧೨ ॥**

**ಪೂಜಯೇಚ್ಚ ನಿಶಾನಾಥಂ ಘೃತಭಕ್ತಂ ನಿವೇದಯೇತ್ ।**
**ಇಂದ್ರಂ ಜಯಂತಮಾಕಾಶಂ ವರುಣಂ ಚಾಗ್ನಿಮೇವ ಚ ॥ ೧೩ ॥**

---

೯-೧೦. ದಲಗಳಲ್ಲಿ ವಿಮಲಾ ಮುಂತಾದ ಪತ್ನಿಯರಿಂದ ಕೂಡಿದ ಸಂಕರ್ಷಣಾದಿಗಳನ್ನು ಸಂಕರ್ಷಣಾದಿ ಹನ್ನೆರಡು ನಾಮಮಂತ್ರಗಳಿಂದ ಪೂಜಿಸಿ, ಧೂಪ ದೀಪ ನೈವೇದ್ಯಗಳನ್ನು ಸಮರ್ಪಿಸಬೇಕು. ಗುಗ್ಗುಲು, ಸರಲವೃಕ್ಷದ ಮೇಣ ಇವು ಧೂಪಕ್ಕೆ ಪ್ರಶಸ್ತವಾದುವು. ತುಪ್ಪದದೀಪವನ್ನೂ, ಹಾಲು, ತುಪ್ಪ ಸಮೇತವಾದ ಪರಮಾನ್ನ ನಿವೇದನವನ್ನೂ ಸಮರ್ಪಿಸಬೇಕು.

೧೧-೧೩. ದಕ್ಷಿಣದಿಕ್ಕಿನ ಪದ್ಮದ ಕರ್ಣಿಕೆಯಲ್ಲಿ ಬಿಳಿಯಬಣ್ಣದ ಶರೀರನೂ, ಶಾಂತನೂ ಎರಡು ತೋಳುಗಳಲ್ಲಿಯೂ, ಕೇಯೂರವೇ ಮೊದಲಾದ ಆಭರಣಗಳುಳ್ಳವನೂ, ದೇವತೆಗಳಲ್ಲಿಯೂ ಯಕ್ಷರಲ್ಲಿಯೂ ಪ್ರಸಿದ್ಧನೂ, ವರದ ಮತ್ತು ಅಭಯ ಹಸ್ತಮುದ್ರೆಯುಳ್ಳವನೂ ಆಗಿ ರಾತ್ರಿಗೆ ಅಧಿಪತಿಯಾದ ಚಂದ್ರನನ್ನು 'ಇಮಂ ದೇವಾ' ಎಂಬ ಮಂತ್ರದಿಂದ ಧ್ಯಾನಮಾಡಿ, ವಿವಿಧವಾದ ಉಪಚಾರಗಳಿಂದ ಪೂಜಿಸಿ, ಅಭಿಗಾರಮಾಡಿದ ಅನ್ನವನ್ನು ನಿವೇದನಮಾಡಬೇಕು. ಪೂರ್ವಾದಿ ಎಂಟು ದಿಕ್ಕುಗಳಲ್ಲಿಯೂ ಕ್ರಮವಾಗಿ ಇಂದ್ರ ೧) ಜಯಂತ ೨) ಆಕಾಶ ೩) ವರುಣ ೪) ಅಗ್ನಿ ೫) ಈಶಾನ ೬) ತತ್ಪುರುಷ ೭) ವಾಯು ೮) ಈ ದೇವತೆಗಳನ್ನು ಪೂಜಿಸಬೇಕು.

**ಈಶಾನಂ ತತ್ಪುರುಷಂ ಚೈವ ವಾಯುಂ ಪೂರ್ವಾದಿದಿಕ್ಷ್ವಪಿ ।**
**ಕರ್ಣಿಕಾಯಾಂ ವಾಮಭಾಗೇ ವರದಾಭಯಹಸ್ತಕಂ ॥ ೧೪ ॥**

**ದ್ವಿಭುಜಂ ಶುಕ್ಲವರ್ಣಂ ಚ ಮಹಾದೇವಂ ಪ್ರಪೂಜಯೇತ್ ।**
**ತ್ರ್ಯಂಬಕೇಣ ಚ ಮಂತ್ರೇಣ ದದ್ಯಾಚ್ಚ ಘೃತಪಿಷ್ಟಕಂ ॥ ೧೫ ॥**

**ವಾಸುದೇವಾಯ ದೇವಾಯ ಜುಹುಯಾದಷ್ಟ ಆಹುತೀಃ ।**
**ಪರಮಾನ್ನೇನ ಸೌಮ್ಯಸ್ಯ ಜುಹುಯಾದಷ್ಟವಿಂಶತಿಂ ॥ ೧೬ ॥**

**ಶಿವಾಯ ಪರಮಾನ್ನೇನ ಜುಹುಯಾದಾಹುತಿದ್ವಯಂ ।**
**ಗಣೇಶಸ್ಯ ತಥಾಜ್ಯೇನ ದದ್ಯಾದೇಕಾಹುತಿಂ ಬುಧಃ ॥ ೧೭ ॥**

**ಬ್ರಹ್ಮಣೋ ವರುಣಸ್ಯಾಥ ಏಕೈಕಾಮಾಹುತಿಂ ತಥಾ ।**
**ಗ್ರಹಾಣಾಂ ಸ್ವೋಕ್ತಸಮಿಧಾ ದಿಗೀಶಾನಾಂ ಪೃಥಕ್‌ಪೃಥಕ್ ॥ ೧೮ ॥**

**ಏಕೈಕಾಮಾಹುತಿಂ ದದ್ಯಾದಾಜ್ಯೇನ ಚ ಯಥಾಕ್ರಮಂ ।**
**ಕರಾಲೀ ಧೂಮಲೀ ಶ್ವೇತಾ ಲೋಹಿತಾ ಕನಕಪ್ರಭಾ ॥ ೧೯ ॥**

---

೧೪-೧೫. ಕರ್ಣಿಕೆಯ ಎಡಭಾಗದಲ್ಲಿ ವರದ ಮತ್ತು ಅಭಯ ಮುದ್ರೆಗಳಿಂದ ಯುಕ್ತವಾದ ಎರಡು ತೋಳುಗಳುಳ್ಳವನೂ, ಬಿಳಿಯ ಮೈಬಣ್ಣದಿಂದ ಕೂಡಿದವನೂ ಆದ ಮಹಾದೇವನನ್ನು 'ತ್ರ್ಯಂಬಕಂ' ಎಂಬ ಮಂತ್ರದಿಂದ ಪೂಜಿಸಿ ತುಪ್ಪ ಮತ್ತು ಹಿಟ್ಟು ಇವನ್ನು ನಿವೇದನಮಾಡಬೇಕು.

೧೬-೧೮. ಹೋಮಮಾಡಬೇಕಾದ ಪಕ್ಷದಲ್ಲಿ ವಾಸುದೇವನಿಗೆ ಪರಮಾನ್ನದಿಂದ ಎಂಟು ಆಹುತಿಗಳನ್ನು ಕೊಡಬೇಕು. ಚಂದ್ರನಿಗೆ ಅದೇ ಪರಮಾನ್ನದಿಂದ ಇಪ್ಪತ್ತೆಂಟು ಆಹುತಿಗಳನ್ನೂ, ಶಿವನಿಗೆ ಎರಡು ಆಹುತಿಗಳನ್ನೂ, ಗಣೇಶನಿಗೆ ತುಪ್ಪದಿಂದ ಒಂದು ಆಹುತಿಯನ್ನೂ ಸಮರ್ಪಿಸಬೇಕು. ಬ್ರಹ್ಮನಿಗೂ ವರುಣನಿಗೂ ಒಂದೊಂದು ಆಜ್ಯಾಹುತಿಯನ್ನು ಕೊಡಬೇಕು. ಆದಿತ್ಯಾದಿ ನವಗ್ರಹಗಳಿಗೆ ಆಯಾಯಾಗ್ರಹಗಳಿಗೆ ಉಕ್ತವಾದ ಬೇರೆಬೇರೆಯಾದ ಸಮಿತ್ತುಗಳಿಂದ ಒಂದೊಂದು ಹೋಮವನ್ನು ಮಾಡಬೇಕು. ಇಂದ್ರಾದಿ ದಿಗ್ದೇವತೆಗಳಿಗೆ ತುಪ್ಪದಿಂದ ಒಂದೊಂದು ಹೋಮವನ್ನು ಮಾಡಬೇಕು.

೧೯-೨೩. ಕರಾಲೀ, ಧೂಮಲೀ, ಲೋಹಿತಾ, ಶ್ವೇತಾ, ಕನಕಪ್ರಭಾ, ಅತಿರಕ್ತಾ, ಪದ್ಮರಾಗಾ ಎಂಬದಾಗಿ ಅಗ್ನಿಗೆ ಏಳುನಾಲಗೆಗಳು ಪ್ರಸಿದ್ಧವಾಗಿರುವುವು. ಈ

**ಅತಿರಕ್ತಾ ಪದ್ಮರಾಗಾ ವಹ್ನಿಜಿಹ್ವಾಃ ಪ್ರಕೀರ್ತಿತಾಃ ।**
**ತಾಸಾಂ ಮಂತ್ರಾಃ ಕ್ರಮೇಣೈವಂ ಸಾದಿವಾಸಾಂತಬಿಂದವಃ ॥ ೨೦ ॥**

**ಯಕಾರಸ್ಥಾಶ್ಚ ವಿಜ್ಞೇಯಾ ಅಷ್ಟಸ್ವರವಿಭೂಷಿತಾಃ ।**
**ಘೃತಮಧ್ವಾಜ್ಯಸಿಕ್ತಾಭಿರ್ಹೋಮಯೇಚ್ಚ ಪೃಥಕ್‌ಪೃಥಕ್ ॥ ೨೧ ॥**

**ಏಕೈಕಾಮಾಹುತಿಂ ದದ್ಯಾದ್ದತ್ವಾ ಚೈವ ಸಮಾಹಿತಃ ।**
**ಅಗ್ನೀಷೋಮಂ ತಥೇಂದ್ರಂ ಚ ಪೃಥಿವೀಮಂತರಿಕ್ಷಕಂ ॥ ೨೨ ॥**

**ಸ್ಥಾಲೀಪಾಕೇನ ಜುಹುಯಾನ್ಮಧುಕ್ಷೀರಯವಾನ್ವಿತಂ ।**
**ಏಕೈಕಾಮಾಹುತಿಂ ತೇಷಾಂ ಸಮುದ್ದಿಶ್ಯ ಪೃಥಕ್‌ಪೃಥಕ್ ॥ ೨೩ ॥**

**ಯಾವಕೈರ್ಗಂಧಪುಷ್ಪಾದ್ಯೈರರ್ಚಿತ್ವಾ ಸಪರಾವಕಂ ।**
**ಜಪಸ್ವ ತ್ವಂ ಮಹಾಭಾಗ ಶ್ರದ್ಧಯಾಚೈವ ವಾಗ್ಯತಃ ॥ ೨೪ ॥**

**ಜಾಪಕೋ ವಿಧಿನಾನೇನ ಪ್ರಜಪೇತ್ತತ್ರ ರುದ್ಧಕಂ ।**
**ಮಂಗಲಂ ಪರಮಾನ್ನಂ ಚ ಸೌರಸೂಕ್ತಂ ತಥಾ ಜಪೇತ್ ॥ ೨೫ ॥**

---

ಸಕಾರಾದಿಯಾಗಿ ಯಕಾರದೊಡನೆ ಸ್ವರಗಳನ್ನು ಸೇರಿಸಿ ಬಿಂದುವಿನಿಂದ ಕೂಡಿದ ಬೀಜಮಂತ್ರವನ್ನು ಅಗ್ನಿಜಿಹ್ವೆಗಳ ಜತೆಗೆ ಉಚ್ಚರಿಸಬೇಕು. ಅಂದರೆ 'ಸ್ಯಂ ಸ್ಯಾಂ ಸ್ಯಿಂ ಸ್ಯೀಂ ಸ್ಯುಂ ಸ್ಯೂಂ ಸ್ಯೃಂ ಸ್ಯೄಂ' ಎಂಬ ಮಂತ್ರಗಳನ್ನುಚ್ಚರಿಸಬೇಕು. ಹೋಮದ್ರವ್ಯಗಳಿಗೆ ಜೇನು ಮತ್ತು ತುಪ್ಪ ಇವುಗಳನ್ನು ವಿಷಮಪ್ರಮಾಣದಿಂದ ಸೇರಿಸಿ ಬೇರೆಬೇರೆಯಾಗಿ ಹೋಮಮಾಡಬೇಕು. ಹಾಗೆ ಎಲ್ಲಕ್ಕೂ ಒಂದೊಂದು ಆಹುತಿಯನ್ನು ಕೊಟ್ಟಮೇಲೆ ಅಗ್ನೀಷೋಮ, ದೇವೇಂದ್ರ, ಭೂಮಿ, ಅಂತರಿಕ್ಷ ಈ ದೇವತೆಗಳಿಗಾಗಿ ಸ್ಥಾಲೀಪಾಕವನ್ನು ಮಾಡಿ ಜೇನು, ಹಾಲು, ಯವೆ ಇವುಗಳನ್ನು ಸೇರಿಸಿ ಒಂದೊಂದು ಆಹುತಿಯನ್ನು ಬೇರೆಬೇರೆಯಾಗಿ ಕೊಡಬೇಕು

೨೪-೨೬. ಅನಂತರ ಜಪಮಾಡುವವನನ್ನು ಕುರಿತು 'ಮಹಾಪೂಜ್ಯನಾದ ವಿಪ್ರೋತ್ತಮನೇ ! ವಾಙ್ನಿಯಮದಿಂದ ಜಪಮಾಡು' ಎಂದು ಹೇಳಿ ಯವಧಾನ್ಯ, ಗಂಧ ಮುಂತಾದುವುಗಳಿಂದ ಆರಾಮವೃಕ್ಷಗಳನ್ನು ಭಕ್ತಿಯಿಂದ ಪೂಜಿಸಬೇಕು. ಮಂತ್ರಜಪ ಮಾಡತಕ್ಕವನು ಈ ನಿಯಮದಿಂದ ಬೀಜಾಕ್ಷರ ಮಂತ್ರಗಳನ್ನು ಜಪಿಸ ಬೇಕಲ್ಲದೆ ಮಂಗಳಕರವೂ, ಅಮೃತಪ್ರಾಯವೂ ಆದ ಸೌರಸೂಕ್ತಗಳನ್ನು ಜಪಮಾಡ

**ತತಃ ಸಂಪೂಜ್ಯ ವಿಧಿನಾ ಸ್ನಾಪಯಿತ್ವಾ ಯಥಾವಿಧಿ ।**
**ಯೂಪಂ ಗರ್ಭೇ ವಿನಿಕ್ಷಿಪ್ಯ ತತ್ರ ಕುರ್ಯಾದ್ವಿಚಕ್ಷಣಃ ॥ ೨೬ ॥**

**ಧ್ವಜಾನಾರೋಪ್ಯ ಪ್ರಾಂತೇಷು ದದ್ಯಾತ್ಸೋಮಂ ವನಸ್ಪತಿಂ ।**
**ಕೋsದಾದಿತಿ ಪಠಿತ್ವಾ ಚ ವೃಕ್ಷಾಣಾಂ ಕರ್ಣವೇಧನಂ ॥ ೨೭ ॥**

**ಸೂಚ್ಯಾ ಸುತೀಕ್ಷ್ಣಯಾ ಕಾರ್ಯಂ ದ್ರಿಪಾತ್ರೇ ವಾಮದಕ್ಷಿಣೇ ।**
**ನವಗ್ರಹಾಣಾಂ ತೃಪ್ತ್ಯರ್ಥಂ ಯಾವಕಂ ಲಡ್ಡುಕಂ ತಥಾ ॥ ೨೮ ॥**

**ಪಿಷ್ಟಕಂ ಚ ಪೃಥಗ್ದದ್ಯಾತ್ಕುಮಾರೀಬಾಲಕೇಷು ಚ ।**
**ನಿಶಾರಂಜಿತಸೂತ್ರೇಣ ಸಂವೇಷ್ಟ್ಯ ಚ ಸಚೂರ್ಣಕಂ ॥ ೨೯ ॥**

**ಪ್ರದದ್ಯಾದ್ದೋಹಕಂ ಚೈವ ವೃಕ್ಷಾಣಾಂ ವಿಧಿಪೂರ್ವಕಂಃ ।**
**ಪ್ರಾಶಯೇಚ್ಚೈವ ತಾನ್ವೃಕ್ಷಾ್ ಇಮಂ ಮಂತ್ರಮುದಾಹರೇತ್ ॥ ೩೦ ॥**

---

ಬೇಕು. ಆ ಮೇಲೆ ವಿಧಿಗನುಸಾರವಾಗಿ ಯೂಪಸ್ತಂಭವನ್ನು ಪೂಜಿಸಿ ಆ ತೋಟದ ನಡುವೆ ನೆಡಬೇಕು. ಅದರ ಸುತ್ತಲೂ ಬಾವುಟಗಳನ್ನು ಕಟ್ಟಿ, ಸೋಮ (ಅಮೃತ ವಳ್ಳೀ) ಎಂಬ ಗಿಡವನ್ನು ಅಲ್ಲಿ ನೆಡಬೇಕು. 'ಕೋದಾತ್' ಎಂಬ ಮಂತ್ರವನ್ನು ಹೇಳಿ ಆ ತೋಟದಲ್ಲಿರುವ ಮರಗಳ ಎಡಬಲ ಭಾಗಗಳ ಎಲೆಗಳಲ್ಲಿ ತೀಕ್ಷ್ಣವಾದ ಸೂಜಿಯಿಂದ ಕರ್ಣವೇಧನ (ಕಿವಿಚುಚ್ಚುವುದು) ಎಂಬ ಸಂಸ್ಕಾರವನ್ನು ಮಾಡ ಬೇಕು.

೨೮-೩೧ ನವಗ್ರಹಗಳ ತೃಪ್ತಿಗೋಸ್ಕರವಾಗಿ ಯವೆಯಿಂದ ಮಾಡಿದ ಉಂಡೆಗಳು, ತಂಬಿಟ್ಟು ಮುಂತಾದ ತಿನ್ನುವ ಪದಾರ್ಥಗಳನ್ನು ಹೆಣ್ಣು ಗಂಡುಮಕ್ಕ ಳಿಗೆ ಕೊಡಬೇಕು. ಅರಸಿನ ಮತ್ತು ಸುಣ್ಣವನ್ನು ಸೇರಿಸಿ ದಾರಗಳಿಗೆ ಬಳಿದು ಆ ದಾರಗಳನ್ನು ಮರಗಳಿಗೆ ಕಟ್ಟಿ ವೃಕ್ಷದೋಹದಾರ್ಥವಾಗಿ ವಿಧಿಪೂರ್ವಕವಾಗಿ ಸಿದ್ಧ ಮಾಡಿದ ನೀರನ್ನು ಈ ಮುಂದೆ ವಿವರಿಸುವ ಅರ್ಥವುಳ್ಳ ಮಂತ್ರಪೂರ್ವಕವಾಗಿ ಆ ಮರಗಳಿಗೆ ಹಾಕಬೇಕು. 'ಮರಗಳ ತುದಿಯಿಂದ ಜಾರಿಬಿದ್ದಾಗಲಿ, ಮರವನ್ನು ಹತ್ತುತ್ತಿರುವಾಗ ಬಿದ್ದುದರಿಂದಾಗಲಿ ಯಾವನಾದರೂ ಮರಣಹೊಂದಿದರೂ ಅಥವಾ ಮೂಳೆಗಳು ಮುರಿದರೂ ವೃಕ್ಷಗಳನ್ನು ನೆಟ್ಟವನಿಗೆ ಪಾಪವು ಸಂಭವಿಸದಿರಲಿ ಎಂಬ

**ವೃಕ್ಷಾಗ್ರಾತ್ಪತಿತಸ್ಯಾಪಿ ಆರೋಹಾತ್ಪತಿತಸ್ಯ ಚ ।**
**ಮರಣೇ ವಾಸ್ಥಿಭಂಗೇ ವಾ ಕರ್ತಾ ಪಾಪೈರ್ನಲಿಪ್ಯತೆ ॥ ೩೦ ॥**

**ಧೇನುಂ ಸುವರ್ಣಂ ಧಾನ್ಯಂ ಚ ಆಚಾರ್ಯಾಯ ಪ್ರದಕ್ಷಿಣಾಂ ।**
**ದತ್ವಾ ಚ ಋತ್ವಿಜೇ ದದ್ಯಾತ್ಸುವರ್ಣಂ ರಜತಂ ತಥಾ ॥ ೩೨ ॥**

**ಧಾನ್ಯಂ ಚ ಬ್ರಹ್ಮಣೇ ದದ್ಯಾದ್ಘೃತಭೋಜ್ಯಂ ಸಶರ್ಕರಂ ।**
**ಇಷ್ಟಾಂ ಚ ದಕ್ಷಿಣಾಂ ದದ್ಯಾತ್ಸದಸ್ಯಾಯ ತಥೈವ ಚ ॥ ೩೩ ॥**

**ಅಧಿಕಲಶಂ ಸಮಾನೀಯ ಸ್ನಾನಂ ಕುರ್ಯಾದ್ವಿಧಾನತಃ ।**
**ಕೃತ್ವಾ ಚೈವಾನಿಶಂ ಕುರ್ಯಾದ್ದದ್ಯಾತ್ಪೂರ್ಣಾಹುತಿಂ ತಥಾ ॥ ೩೪ ॥**

**ಸರ್ವೌಷಧ್ಯುದಕಂ ಪ್ರೋಕ್ಷ್ಯ ತ್ರಿವಾರಂ ಕ್ಷೀರಧಾರಯಾ ।**
**ಸಂವೇಷ್ಟ್ಯ ತ್ರಿಚತುರ್ವಾರಂ ಬ್ರಹ್ಮಘೋಷಪುರಃಸರಂ ॥ ೩೫ ॥**

---

ಅರ್ಥವುಳ್ಳ 'ವೃಕ್ಷಾಗ್ರಾತ್ಪತಿತಸ್ಯಾಪಿ ಆರೋಹಾತ್ಪತಿತಸ್ಯ ಚ । ಮರಣೇ ವಾಸ್ಥಿಭಂಗೇ ವಾ ಕರ್ತಾ ಪಾಪೈರ್ನಲಿಪ್ಯತೇ ' ॥ ಎಂದು ಮಂತ್ರ ಹೇಳಬೇಕು.

೩೨-೩೫. ಈ ಆರಾಮಪ್ರತಿಷ್ಠಾ ಕಾಲದಲ್ಲಿ ಗೋದಾನ, ಸುವರ್ಣದಾನ, ಧಾನ್ಯದಾನ ಇವುಗಳನ್ನು ಆಚಾರ್ಯನಿಗೆ ಕೊಡುವುದಲ್ಲದೆ ವಿಶೇಷವಾದ ದಕ್ಷಿಣೆಯನ್ನೂ ಕೊಡಬೇಕು. ಮಿಕ್ಕ ಋತ್ವಿಕ್ಕುಗಳಿಗೂ ಬ್ರಹ್ಮನಿಗೂ ಸುವರ್ಣವನ್ನೂ, ಬೆಳ್ಳಿಯನ್ನೂ, ಧಾನ್ಯವನ್ನೂ ಸಹ ದಕ್ಷಿಣಾರ್ಥವಾಗಿ ಕೊಡಬೇಕು. ಎಲ್ಲರಿಗೂ ತುಪ್ಪ, ಮತ್ತು ಸಕ್ಕರೆ ಇವುಗಳ ಸಮೇತ ಮೃಷ್ಟಾನ್ನ ಭೋಜನವನ್ನು ಮಾಡಿಸಿ, ಸದಸ್ಯರಿಗೆ ತನಗೆ ಇಷ್ಟಬಂದಷ್ಟು ದಕ್ಷಿಣೆಯನ್ನು ಕೊಡಬೇಕು. ಆಮೇಲೆ ಪ್ರಧಾನಕಲಶವನ್ನು ತಂದು ಮಂತ್ರಪೂರ್ವಕವಾಗಿ ಅದರ ನೀರಿನಿಂದ ಸ್ನಾನಮಾಡಿ ಅನಂತರ ಪೂರ್ಣಾಹುತಿ ಹೋಮವನ್ನು ಮಾಡಬೇಕು. ತರುವಾಯ ಸಮಸ್ತ ಔಷಧಿಗಳನ್ನೂ ಹಾಕಿದ ಕಲಶದ ನೀರನ್ನು ಪ್ರೋಕ್ಷಿಸಿಕೊಂಡು ಕ್ಷೀರಧಾರೆಯನ್ನು ಮೂರುನಾಲ್ಕುಸಲ ತನ್ನ ಸುತ್ತಲೂ ಹನಿಸಿ ವೇದಘೋಷದೊಡನೆ ಮನೆಗೆ ಹೊರಡಬೇಕು.

ಗೃಹಂ ವ್ರಜೇತ್ತತೋ ವಿಪ್ರೈಃ ಕುರ್ಯಾಚ್ಚೈವ ಗ್ರಹಾರ್ಚನಂ ।
ತಂತೌ ವಿಶೇಷಂ ವಕ್ಷ್ಯಾಮಿ ವರಾಏವೇದಮಿತ್ಯೃಚಾ ॥ ೩೬ ॥

ಬಲಂ ರಾಮಂ ಹಯಗ್ರೀವಂ ಮಾಧವಂ ಪುರುಷೋತ್ತಮಂ ।
ವಾಸುದೇವಂ ಧನಾಧ್ಯಕ್ಷಂ ತತೋ ನಾರಾಯಣಂ ಯಜೇತ್ ॥ ೩೭ ॥

ದಧಿಭಕ್ತಂ ಬಲಿಂ ದದ್ಯಾತ್ಪಂಚಗವ್ಯಸಮುದ್ಭವಂ ।
ಏವಂ ಸಂಪೂಜ್ಯ ವಿಧಿನಾ ದಕ್ಷಿಣೇ ಪೃಥವೀಂ ಯಜೇತ್ ॥ ೩೮ ॥

ಶುದ್ಧಕಾಂಚನವರ್ಣಾಭಾಂ ವರಾಭಯಕರಾಂ ಶುಭಾಂ ।
ಮಂಡೂಕಸ್ಥಾಂ ಚ ದ್ವಿಭುಜಾಂ ಸರ್ವಾಲಂಕಾರಸುಂದರೀಂ ॥ ೩೯ ॥

ಸ್ಯೋನಾಪೃಥವೀತಿ ಮಂತ್ರೇಣ ಪೂಜಯಿತ್ವಾ ಯಥಾವಿಧಿ ।
ಪಾಯಸಂ ಮಧುಸಂಯುಕ್ತಂ ಬಲಿಂ ದದ್ಯಾತ್ಸಶರ್ಕರಂ ॥ ೪೦ ॥

ವಾಮತೋ ವಿಶ್ವಕರ್ಮಾಣಂ ಶುದ್ಧಸ್ಫಟಿಕಸನ್ನಿಭಂ ।
ಶೂಲಟಂಕಧರಂ ಶಾಂತಂ ಸಂಯಜೇದುಪಚಾರಕೈಃ ॥ ೪೧ ॥

---

೩೬-೪೦. ಬಳಿಕ ಬ್ರಾಹ್ಮಣರೊಡನೆ ಮನೆಗೆಬಂದು ಗೃಹದಲ್ಲಿ ಆಚರಿಸಬೇಕಾದ ದೇವರಪೂಜಾದಿಗಳನ್ನು ಮಾಡಬೇಕು. ಇನ್ನು ಸೇತುಪ್ರತಿಷ್ಠೆಯ ವಿಷಯದಲ್ಲಿ ವಿಶೇಷವನ್ನು ಹೇಳುವೆನು 'ವರಾ ಏವೇದಂ' ಎಂಬ ಮಂತ್ರದಿಂದ ಇಂದ್ರ, ರಾಮ, ಹಯಗ್ರೀವ, ಮಾಧವ, ಪುರುಷೋತ್ತಮ, ವಾಸುದೇವ, ಕುಬೇರ, ನಾರಾಯಣ ಈ ಎಂಟು ನಾಮಗಳಿಂದ ದೇವತೆಗಳನ್ನು ಈ ಎಂಟುದಿಕ್ಕಿನಲ್ಲಿ ಪೂಜಿಸಿ ಪಂಚಗವ್ಯದೊಡನೆ ಮೊಸರನ್ನವನ್ನು ಬಲಿಸಮರ್ಪಣಮಾಡಬೇಕು. ಈ ರೀತಿಯಾದ ವಿಧಿಯಿಂದ ಪೂಜಿಸಿ ಶುದ್ಧವಾದ ಚಿನ್ನದ ಬಣ್ಣದಂತೆ ಮೈಬಣ್ಣವುಳ್ಳವಳೂ ವರಾಭಯಮುದ್ರೆಯನ್ನು ಧರಿಸಿದವಳೂ, ಶುಭಕರವಾದ ಮಂಡೂಕವಾಹನೆಯೂ, ಎರಡು ತೋಳುಗಳುಳ್ಳವಳೂ, ಸಮಸ್ತ ಆಭರಣಗಳನ್ನು ಧರಿಸಿದವಳೂ ಆದ ಭೂದೇವಿಯನ್ನು 'ಸ್ಯೋನಾಪೃಥಿವೀ' ಎಂಬ ಮಂತ್ರದಿಂದ ವಿಧಿಗನುಸಾರವಾಗಿ ದಕ್ಷಿಣದಿಕ್ಕಿನಲ್ಲಿ ಪೂಜಿಸಿ ಜೇನುತುಪ್ಪವನ್ನು ಸೇರಿಸಿದ ಪಾಯಸವನ್ನು ಸಕ್ಕರೆಸಹಿತವಾಗಿ ಬಲಿಸಮರ್ಪಣೆ ಮಾಡಬೇಕು.

೪೧-೪೬. ಭೂದೇವಿಯ ಎಡಭಾಗದಲ್ಲಿ ಶುದ್ಧವಾದ ಸ್ಫಟಿಕದಂತೆ ಮೈಬಣ್ಣವುಳ್ಳವನೂ, ಶೂಲ ಮತ್ತು ಟಂಕವೆಂಬ ಆಯುಧಗಳನ್ನು ಧರಿಸಿದವನೂ, ಶಾಂತನೂ

**ವಿಶ್ವನ್ನಿತಿ ಋಚಾ ತಂ ಚ ಬಲಿಂ ಚ ಮಧುಪಿಷ್ಟಕಂ ।**
**ದದ್ಯಾಜ್ಜಪೇಚ್ಚ ಕೌಷ್ಮಾಂಡಂ ಸೂಕ್ತಂ ಪೌರುಷಮೇವ ಚ ॥ ೪೨ ॥**

**ಮಧುಪಾಯಸಯುಕ್ತೇನ ಹೋಮಾನಷ್ಟೌ ವಿಧಾಯ ಚ ।**
**ಏಕೈಕಂ ಹೋಮಯೇತ್ಪಶ್ಚಾತ್ಪೃಥಿವೀಹೋಮಕರ್ಮಣಿ ॥ ೪೩ ॥**

**ಸಮುತ್ಸೃಜ್ಯ ತತಃ ಸೇತುಮಿಮಂ ಮಂತ್ರಂ ಪಠೇತ್ತತಃ ।**
**ಪಿಚ್ಛಿಲೇ ಪತಿತಾನಾಂ ಚ ಉಚ್ಛ್ರಿತೇನಾಂಗಸಂಗತಃ ॥ ೪೪ ॥**

**ಪ್ರತಿಷ್ಠಿತೇ ಧರ್ಮಸೇತೌ ಧರ್ಮೋ ಮೇ ಸ್ಯಾನ್ನ ಪಾತಕಂ ।**
**ಸೇತೋರಸ್ಯ ಪ್ರಬಂಧಸ್ಯ ಶ್ರದ್ಧಯಾ ಪರಯಾ ತಥಾ ॥ ೪೫ ॥**

**ಯೇ ಚಾತ್ರ ಪ್ರಾಣಿನಃ ಸಂತಿ ರಕ್ಷಾಂ ಕುರ್ವಂತಿ ಸೇತವಃ ।**
**ವೇದಾಗಮೇನ ಯತ್ಪುಣ್ಯಂ ತಥೈವ ಹಿ ಸಮರ್ಪಿತಂ ॥ ೪೬ ॥**

**ಗರ್ತಂ ಕೃತ್ವಾ ಪಂಚರತ್ನಂ ಸಂಸ್ಥಾಪ್ಯಂ ತದನಂತರಂ ।**
**ಸಂಸ್ಥಾಪ್ಯ ಚ ತತೋ ಯೂಪಂ ಸಂಪೂಜ್ಯ ಚ ಯಥಾವಿಧಿ ॥ ೪೭ ॥**

---

೨ದ ವಿಶ್ವಕರ್ಮನನ್ನು 'ವಿಶ್ವ' ಎಂಬ ಮಂತ್ರದಿಂದ ಪೂಜಿಸಿ, ಹಿಟ್ಟು ಮತ್ತು ಜೇನು ಇವುಗಳನ್ನು ಸೇರಿಸಿ ಬಲಿಸಮರ್ಪಣೆಮಾಡಿ ಅನಂತರ ಕೂಷ್ಮಾಂಡಸೂಕ್ತವನ್ನಾಗಲಿ ಪುರುಷಸೂಕ್ತವನ್ನಾಗಲಿ ಜಪಮಾಡಬೇಕು. ಹೋಮಪಕ್ಷದಲ್ಲಿ ಪಾಯಸಕ್ಕೆ ಜೇನನ್ನು ಹಾಕಿ ಮೇಲೆ ಹೇಳಿದ ಎಂಟುದೇವತೆಗಳಿಗೆ ಆಯಾ ನಾಮಮಂತ್ರದಿಂದ ಎಂಟು ಹೋಮಗಳನ್ನು ಮಾಡಿ ಸೇತುಪ್ರತಿಷ್ಠೆಯನ್ನು ಮುಗಿಸಿ ಎಲ್ಲರ ಉಪಯೋಗಕ್ಕೊ ಸೇತುವೆಯನ್ನು ಸಮರ್ಪಿಸುವಾಗ 'ಪಿಚ್ಛಿಲೇ ಪತಿತಾನಾಂ ಚ ಉಚ್ಛ್ರಿತೇನಾಂಗ ಸಂಗತಃ । ಪ್ರತಿಷ್ಠಿತೇ ಧರ್ಮಸೇತೌ ಧರ್ಮೋ ಮೇ ಸ್ಯಾನ್ನ ಪಾತಕಂ ॥' ಎಂಬ ಈ ಮಂತ್ರವನ್ನು ಹೇಳಬೇಕು ಈ ಸೇತುಪ್ರತಿಷ್ಠಾ ಸಂಬಂಧದಲ್ಲಿ ವಿಶೇಷವಾದ ಭಕ್ತಿಯಿಂದ ಇದ್ದರೆ ಯಾವ ಪ್ರಾಣಿಗಳು ಈ ಸೇತುವೆಯ ಮೇಲಿದ್ದರೂ ಅವುಗಳನ್ನು ಸೇತುವೆಯು ರಕ್ಷಿಸುವುದು. ವೇದಶಾಸ್ತ್ರಗಳಲ್ಲಿ ಯಾವ ಪುಣ್ಯವು ಬರಬಹುದೆಂದು ಹೇಳಿರುವುದೋ ಆ ಪುಣ್ಯವು ಖಂಡಿತವಾಗಿಯೂ ಯಜಮಾನನಿಗೆ ಬರುವುದು.

೪೭–೫೦. ತರುವಾಯ ಒಂದು ಹಳ್ಳವನ್ನು ಮಾಡಿ ಪಂಚರತ್ನಗಳನ್ನು ಅಲ್ಲಿ ಸ್ಥಾಪಿಸಿ ಬಳಿಕ ಅಲ್ಲಿ ಯೂಪಸ್ತಂಭವನ್ನು ನೆಟ್ಟು ಅದನ್ನೂ ವಿಧಿಗನುಸಾರವಾಗಿ

ಆಚಾರ್ಯಾಯ ತತೋ ದದ್ಯಾದಿಷ್ಟಾಂ ಚ ವರದಕ್ಷಿಣಾಂ ।
ಪೂಜಯೇದ್ದ್ವಿಜದಾಂಪತ್ಯಂ ಲಾಜಾಭಿಃ ಪರಿಪೂಜಿತಂ ॥ ೪೮ ॥

ಪ್ರೋಟಿಕಾಂ ಚ ತತಃ ಶಯ್ಯಾಂ ದದ್ಯಾದಿಷ್ಟಾರ್ಥಸಿದ್ಧಯೇ ।
ಸೇತೌ ವೃಕ್ಷಸ್ಥಿತಾ ಯೇ ಸ್ಯೂ ರೋಪಯೇತ್ಕದಲೀಂ ಶುಭಾಂ ॥ ೪೯ ॥

ತೇಷಾಂ ಪಾರ್ಶ್ವದ್ವಯೇಷ್ವೇವಮಾರಾಮೇ ಚ ಪೃಥಕ್‌ಪೃಥಕ್ ॥ ೫೦ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ
ಪ್ರಥಮೋಽಧ್ಯಾಯಃ.



---

ಪೂಜಿಸಿ ಆಚಾರ್ಯನಿಗೆ ದಕ್ಷಿಣೆಯನ್ನು ಕೊಟ್ಟು ಅನಂತರ ಬ್ರಾಹ್ಮಣದಂಪತಿಗಳನ್ನು ಭಕ್ತಿಯಿಂದ ಪೂಜಿಸಿ ಇಷ್ಟಾರ್ಥಸಿದ್ಧಿಗಾಗಿ ಅವರಿಗೆ ವಸ್ತ್ರಾಭರಣಗಳನ್ನೂ, ಶಯ್ಯಾದಾನವನ್ನೂ ಸಹ ಮಾಡಬೇಕು. ಸೇತುಪ್ರತಿಷ್ಠೆಯಲ್ಲಿಯೂ, ಆರಾಮಪ್ರತಿಷ್ಠೆಯಲ್ಲೂ ಎರಡು ಪಕ್ಕಗಳಲ್ಲಿಯೂ ಮಂಗಳಕರವಾಗಿರುವಂತೆ ಬೇರೆಬೇರೆಯಾಗಿ ಬಾಳೆಯಗಿಡಗಳನ್ನು ಬೆಳೆಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಮಧ್ಯಮಪರ್ವದ ಮೂರನೆಯ ಭಾಗದಲ್ಲಿ
ಮೊದಲನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮ ಪರ್ವಣಿ ತೃತೀಯಭಾಗೇ

## ದ್ವಿತೀಯೋಽಧ್ಯಾಯಃ

---

॥ ಸೂತ ಉವಾಚ ॥

ಗೋಪ್ರಚಾರಂ ಪುನರ್ವಕ್ಷ್ಯೇ ವಿಶೇಷಂ ತತ್ರ ಮೇ ಶೃಣು ।
ಯಜೇದ್ವಿಷ್ಣುಂ ಸಲಕ್ಷ್ಮೀಕಮುಪಚಾರೈಃ ಪೃಥಗ್ವಿಧೈಃ ॥ ೧ ॥

ಉಪಚಾರೈಶ್ಚ ಬ್ರಹ್ಮಾಣಂ ರುದ್ರಂ ಚೈವ ಕರಾಲಿಕಾಂ ।
ವರಾಹಂ ಸೋಮಸೂರ್ಯೌ ಚ ಮಹಾದೇವಂ ಯಥಾಕ್ರಮಂ ॥ ೨ ॥

ಹೋಮಂ ಚೈವ ಯಥಾವಿಷ್ಣೋಃ ಕಮಲಾಯಾಸ್ತ್ರಯಂತ್ರಯಂ ।
ಆಜ್ಯೇನ ಕ್ಷೇತ್ರಪಾಲಾನಾಮನ್ಯೇಷಾಂ ಮಧುಮಿಶ್ರಿತೈಃ ॥ ೩ ॥

---

## ಎರಡನೆಯ ಅಧ್ಯಾಯ

೧-೪. ಸೂತಮುನಿವರ್ಯರು ಮುಂದುವರಿಸಿ ಹೇಳುತ್ತಾರೆ—ಗೋವುಗಳು ಮೇಯುವುದಕ್ಕೆ ಅನುಕೂಲವಾದ ಗೋಮಾಳದ ಭೂಮಿಯನ್ನು ಬಿಡುವ ಸಂದರ್ಭದಲ್ಲಿ ಅದರ ಪ್ರತಿಷ್ಠೆಯ ವಿಚಾರದಲ್ಲಿ ವಿಶೇಷವಿಷಯವನ್ನು ಹೇಳುವೆನು. ಪ್ರತಿಷ್ಠೆ ಮಾಡುವ ಯಜಮಾನನು ಮೊದಲು ಲಕ್ಷ್ಮೀಸಮೇತನಾದ ಮಹಾವಿಷ್ಣುವನ್ನು ಭಕ್ತಿಪೂರ್ವಕವಾಗಿ ವಿಶೇಷರೀತಿಯ ಉಪಚಾರಗಳಿಂದ ಪೂಜಿಸಬೇಕು. ಆ ಮೇಲೆ ಕ್ರಮವಾಗಿ ಬ್ರಹ್ಮ, ರುದ್ರ, ಕರಾಲಿ, ವರಾಹ, ಚಂದ್ರ, ಸೂರ್ಯ ಮತ್ತು ಮಹಾದೇವ ಇವರುಗಳನ್ನೂ ಪೂಜಿಸಬೇಕು. ಹೋಮವನ್ನು ಮಾಡುವಾಗ ವಿಷ್ಣುವಿಗೂ ಮತ್ತು ಲಕ್ಷ್ಮಿಗೂ ಮೂರುಮೂರು ಆಜ್ಯಾಹುತಿಗಳನ್ನೂ, ಕ್ಷೇತ್ರಪಾಲನೇ ಮುಂತಾದ ಮಿಕ್ಕ ದೇವತೆಗಳಿಗೆ ಜೇನುತುಪ್ಪದೊಡನೆ ಬೆರೆದ ತುಪ್ಪದಿಂದ ಮತ್ತು ಅರಳು ಮೊದಲಾದುವು

ಏಕೈಕಾಮಾಹುತಿಂ ದದ್ಯಾಲ್ಲಾಜಾದಿಷು ಪೃಥಕ್‌ಪೃಥಕ್ ।
ಸಮುತ್ಸೃಜ್ಯ ವಿಧಾನೇನ ಯೂಪಂ ಸಂಸ್ಥಾಪ್ಯ ಪೂಜಯೇತ್ ॥ ೪ ॥

ತ್ರಿಹಸ್ತಮಾತ್ರಂ ರಚಿತಂ ಕುರ್ಯಾನ್ನಾಗಫಣಾನ್ವಿತಂ ।
ರೋಪಯೇದೇಕಹಸ್ತೇನ ಗರ್ಭೇ ಹೋಮಂ ಪ್ರಯೋಜಯೇತ್ ॥ ೫ ॥

ಲಾಜಾಸಂಯುಕ್ತವಿಧಿನಾ ವಿಶ್ವೇಷಾಮಿತಿ ಸಂಜಪನ್ ।
ನಾಗಾಧಿಪತಯೇ ತದ್ವದಚ್ಯುತಾಯ ತೃತೀಯಕಂ ॥ ೬ ॥

ಭೌಮಾಯೇತಿ ಚತುರ್ಥಂ ಚ ತತೋ ಯೂಪಂ ನಿವೇದಯೇತ್ ।
ಮಯಿ ಗೃಹ್ಣಾಮೀತಿ ಸಂಪೂಜ್ಯ ಯೂಯಂ ಚ ರುದ್ರದೈವತಂ ॥ ೭ ॥

ಸಂಪೂಜ್ಯ ರುದ್ರಂ ಪಂಚಾಂಗಂ ಧಾನ್ಯಂ ವಸ್ತ್ರಂ ಚ ದಕ್ಷಿಣಾಂ ।
ಆಚಾರ್ಯಾಯ ತಥಾ ಹೋತ್ರೇ ಅನ್ಯೇಷಾಮಿಷ್ಟದಕ್ಷಿಣಾಂ ॥ ೮ ॥

---

ಗಳಿಂದ ಬೇರೆಬೇರೆಯಾಗಿ ಒಂದೊಂದು ಆಹುತಿಗಳನ್ನೂ ಕೊಡಬೇಕು. ವಿಧಿಗನು ಸಾರವಾಗಿ ಗೋಮಾಳವನ್ನು ತೆರೆದು ಆದರ ನಡುವೆ ಯೂಪಸ್ತಂಭವನ್ನು ಸ್ಥಾಪಿಸಿ ಪೂಜಿಸಬೇಕು.

೫-೮. ಸರ್ಪದ ಹೆಡೆಯ ಆಕಾರದಿಂದ ಕೂಡಿದ ಮೂರುಮೊಳ ಉದ್ದವಾದ ಯೂಪಸ್ತಂಭವನ್ನು ರಚಿಸಿ ಅದರಲ್ಲಿ ಒಂದು ಮೊಳ ಪ್ರಮಾಣದಷ್ಟು ಭೂಮಿಯಲ್ಲಿ ನಾಟಲ್ಪಡಬೇಕು. ಆ ಮೇಲೆ ಹೋಮಮಾಡುವಾಗ 'ವಿಶ್ವೇಷಾಂ' ಎಂಬ ಮಂತ್ರ ದಿಂದಲೂ, 'ನಾಗಾಧಿಪತಯೆ ಅಚ್ಯುತಾಯ ಭೌಮಾಯ' ಎಂಬ ನಾಮಮಂತ್ರಗ ಳಿಂದಲೂ, ಲಾಜಾ (ಅರಳು) ಯುಕ್ತವಾಗಿ ವಿಧಿಪ್ರಕಾರ ನಾಲ್ಕುಹೋಮಗಳನ್ನು ಮಾಡಿ ಬಳಿಕ ಆ ಯೂಪವನ್ನು ಪ್ರತಿಷ್ಠಿಸಬೇಕು. 'ಮಯಿ ಗೃಹ್ಣಾಮಿ' ಎಂಬ ಮಂತ್ರದಿಂದಲೂ, ' ಯೂಯಂ ಚ ರುದ್ರದೈವತಂ ' ಎಂಬ ಮಂತ್ರದಿಂದಲೂ, ಪಂಚಾಂಗರುದ್ರದೇವನನ್ನು ಪೂಜಿಸಿ ಧಾನ್ಯ, ವಸ್ತ್ರ, ದಕ್ಷಿಣಾದಿಗಳನ್ನು ಆಚಾರ್ಯ ನಿಗೂ, ಹೋತೃವಿಗೂ ಕೊಟ್ಟು ಮಿಕ್ಕವರಿಗೆ ತನ್ನಿಷ್ಟಬಂದಂತೆ ಯಥಾಶಕ್ತಿ ದಕ್ಷಿಣೆ ಯನ್ನು ಕೊಡಬೇಕು.

**ಗೋಪ್ರಚಾರೇ ಚ ಶೈಲೋಯಂ ಯೂಪಂ ಹಸ್ತದ್ವಯಾನ್ವಿತಂ ।**
**ಪಂಚಶೀರ್ಷಾನ್ವಿತಂ ಕುರ್ಯಾದ್ಧಸ್ತಮಾತ್ರಂ ಪ್ರರೋಪಯೇತ್ ॥ ೯ ॥**

**ಯೂಪಂ ಚ ಚೈತ್ಯವೃಕ್ಷಂ ಚ ಕುಂಡಲೀಮಠಪೀಠಿಕಾಂ ।**
**ಸಂಸ್ಪೃಶ್ಯಾಚಮ್ಯ ವೈ ವಿಪ್ರಾಃ ಪ್ರಾಣಾಯಾಮೇನ ಶುದ್ಧ್ಯತಿ ॥ ೧೦ ॥**

**ಚತುರ್ಹಸ್ತಪ್ರಮಾಣೇನ ಶತಕುಂಡೇನ ಸಂಮಿತಂ ।**
**ತದರ್ಧಂ ಚ ಕನಿಷ್ಠೇನ ಅಷ್ಟಕಾಷ್ಟಾಧಿಕಂ ಭವೇತ್ ॥ ೧೧ ॥**

**ಭೂಮೌ ರತ್ನಂ ಚ ಸಂಸ್ಥಾಪ್ಯ ಇಮಂ ಮಂತ್ರಮುದಾಹರೇತ್ ।**
**ಶಿವಲೋಕಸ್ತಥಾ ಗಾವಃ ಸರ್ವದೇವಸುಪೂಜಿತಾಃ ॥ ೧೨ ॥**

---

೯. ಗೋಮಾಳದ ಪ್ರತಿಷ್ಠೆಯಲ್ಲಿ ಎರಡುಮೊಳ ಉದ್ದದ ಕಲ್ಲಿನ ಯೂಪಸ್ತಂಭವನ್ನು ಐದು ಮುಖವುಳ್ಳದನ್ನಾಗಿ ರಚಿಸಿ ಒಂದು ಮೊಳದಷ್ಟನ್ನು ಭೂಮಿಯಲ್ಲಿ ಹೂಳಬೇಕು.

೧೦. ಯೂಪಸ್ತಂಭವನ್ನೂ, ಚೈತ್ಯವೃಕ್ಷವನ್ನೂ ಸರ್ಪಾಕಾರವಾದ ಪೀಠವನ್ನೂ, ವಿಪ್ರರು ಮುಟ್ಟಿದರೆ ಆಚಮನಮಾಡಿ ಪ್ರಾಣಾಯಾಮವನ್ನು ಮಾಡಿದಮೇಲೆ ಪರಿಶುದ್ಧರಾಗುವರು.

೧೧. ಗೋಮಾಳವು ನಾಲ್ಕುಮೊಳದ ಅಳತೆಯ ಕೋಲಿನಲ್ಲಿ ಒಂದುನೂರು ಕೋಲಿನ ಉದ್ದ ಮತ್ತು ಅಷ್ಟೇ ಅಗಲವುಳ್ಳದ್ದಾಗಿದ್ದರೆ ಮಧ್ಯಮದರ್ಜೆಯದು. ಅದರ ಅರ್ಧದಳತೆಯದು ನಿಕೃಷ್ಟವು. ಎಂಟುಮೊಳ ಉದ್ದದ ಕೋಲಿನಲ್ಲಿ ನೂರುಕೋಲು ಅಳತೆಯುಳ್ಳದ್ದು ಉತ್ತಮವಾದುದು.

೧೨. ಗೋಮಾಳದ ಪ್ರತಿಷ್ಠೆಯಲ್ಲಿಯೂ ಸಹ ಪಂಚರತ್ನಗಳನ್ನು ಭೂಮಿಯಲ್ಲಿ ಸ್ಥಾಪಿಸಿ ಮುಂದಿನ ಮಂತ್ರವನ್ನು ಹೇಳಬೇಕು.

ಶಿವಲೋಕಸ್ತಥಾ ಗಾವಃ ಸರ್ವದೇವಸುಪೂಜಿತಾಃ ।
ಗೋಭ್ಯ ಏಷಾ ಮಯಾ ಭೂಮಿಃ ಸಂಪ್ರದತ್ತಾ ಶುಭಾರ್ಥಿನಾ ॥

'ಗೋವುಗಳು ಶಿವಲೋಕಕ್ಕೆ ಸಮಾನವಾದವುಗಳು. ಸಮಸ್ತದೇವತೆಗಳು ಅವುಗಳನ್ನು ಪೂಜಿಸುವರು. ಮಂಗಳವನ್ನಪೇಕ್ಷಿಸುವ ನಾನು ಈ ಭೂಮಿಯನ್ನು ಗೋವುಗಳಿಗಾಗಿ ಕೊಟ್ಟಿರುವೆನು ಎಂಬುದೇ ಈ ಮಂತ್ರಾರ್ಥ.'

ಗೋಭ್ಯ ಏಷಾ ಮಯಾ ಭೂಮಿಃ ಸಂಪ್ರದತ್ತಾ ಶುಭಾರ್ಥಿನಾ ।
ಏವಂ ನಿವೇದಯೇದ್ಯಸ್ತು ಗೋಪ್ರಚಾರಂ ಸಮಾಹಿತಃ ॥ ೧೩ ॥

ಸ ಮುಕ್ತಃ ಸರ್ವಪಾಪೇಭ್ಯೋ ವಿಷ್ಣುಲೋಕೇ ಮಹೀಯತೇ ।
ಯಾವಂತಿ ತೃಣಗುಲ್ಮಾನಿ ಸಂತಿ ಭೂಮೌ ಶುಭಾನಿ ಚ ॥ ೧೪ ॥

ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೇ ।
ಪೂರ್ವೇ ಸೀಮಾಂ ನಿಬಧ್ನೀಯಾತ್ ಕೃತ್ವಾ ವೃಕ್ಷಸ್ಯ ರೋಪಣಂ ॥ ೧೫ ॥

ಸೇತುಂ ಕೃತ್ವಾ ದಕ್ಷಿಣತಃ ಪಶ್ಚಿಮೇಽಂಗಾರರೋಪಣಂ ।
ಉತ್ತರೇ ಖಾನಯೇತ್ಕೂಪಂ ತಸ್ಯ ಸೀಮಾಂ ನ ಲಂಘಯೇತ್ ॥ ೧೬ ॥

ತತಃ ಸಹಸ್ರಧಾರಾಂ ಚ ಶಸ್ಯೇನ ಪರಿಪೂರಿತಾಂ ।
ಪ್ರದದ್ಯಾದ್ವಾ ತತೋ ವಿಪ್ರಾಃ ಸರ್ವಪಾಪೈಃ ಪ್ರಮುಚ್ಯತೇ ॥ ೧೭ ॥

ನಗರಗ್ರಾಮಪೂರ್ವೇ ವಾ ಉತ್ತರೇ ಪಶ್ಚಿಮೇಽಪಿ ವಾ ।
ನ ಕುರ್ಯಾದಗ್ನಿದಿಗ್ಭಾಗೇ ದಕ್ಷಿಣಾಂ ವಾ ತತಃ ಶುಭಾಂ ॥ ೧೮ ॥

---

೧೩-೧೪. ಈ ರೀತಿಯಲ್ಲಿ ಏಕಾಗ್ರಚಿತ್ತದಿಂದ ಗೋಮಾಳವನ್ನು ಪ್ರತಿಷ್ಠಿಷ ತಕ್ಕವನು ಸಮಸ್ತಪಾಪಗಳನ್ನೂ ಕಳೆದುಕೊಂಡು ವಿಷ್ಣುಲೋಕದಲ್ಲಿ ಮಹಾಮಹಿಮೆ ಯಿಂದ ಕೂಡಿ ಸುಖಿಸುವನು. ಆ ಭೂಮಿಯಲ್ಲಿ ಒಳ್ಳೆಯದಾದ ಹುಲ್ಲುಗಳೂ, ಸಣ್ಣ ಗಿಡಗಳೂ ಎಷ್ಟು ಇವೆಯೋ ಅಷ್ಟುಸಾವಿರ ವರ್ಷಗಳವರೆಗೆ ಸ್ವರ್ಗಲೋಕದಲ್ಲಿ ಸುಖ ವನ್ನನುಭವಿಸುವನು.

೧೫-೧೭. ಗೋಮಾಳದ ಪೂರ್ವದಿಕ್ಕಿನಲ್ಲಿ ಮರಗಳನ್ನು ಬೆಳೆಸಿಯೂ, ದಕ್ಷಿ ಣದಿಕ್ಕಿನಲ್ಲಿ ಏರಿಯನ್ನು ಮಾಡಿಯೂ, ಪಶ್ಚಿಮದಿಕ್ಕಿನಲ್ಲಿ ಇಜ್ಜಲಿನ ರಾಶಿಗಳನ್ನು ಹಾಕಿಯೂ, ಉತ್ತರದಿಕ್ಕಿನಲ್ಲಿ ನೀರಿನ ಭಾವಿಯನ್ನು ತೋಡಿಯೂ ಎಲ್ಲೆಕಟ್ಟನ್ನು ಗೊತ್ತುಮಾಡಬೇಕು. ಅದನ್ನು ಮೀರಬಾರದು. ಈ ರೀತಿ ಸಸ್ಯಪೂರ್ಣವಾಗಿರುವ ಭೂಮಿಯನ್ನು ಸಹಸ್ರಧಾರಾಯುತವಾಗಿ ದಾನಮಾಡಿದರೆ ಸಮಸ್ತಪಾಪಗಳಿಂದ ಬಿಡುಗಡೆಯನ್ನು ಹೊಂದುವರು.

೧೮-೧೯. ಗೋಮಾಳವು ನಗರದ ಅಥವಾ ಗ್ರಾಮಕ್ಕೆ ಶುಭಕರವಾಗಿ ಪೂರ್ವ ಉತ್ತರ, ಪಶ್ಚಿಮ ದಿಕ್ಕುಗಳಲ್ಲಿರಬೇಕು. ಆಗ್ನೇಯ ಮತ್ತು ದಕ್ಷಿಣದಿಕ್ಕುಗಳಲ್ಲಿರ

**ಗೋಪ್ರಚಾರಂ ಖನೇದ್ಯಸ್ತು ವಾಹಯೇದ್ವಾ ಕಥಂಚನ ।**
**ಕುಲಾನಿ ಪಾತಯತ್ಯಾಶು ಬ್ರಹ್ಮಹತ್ಯಾಶ್ಚ ವಿಂದತಿ　　　　॥ ೧೯ ॥**

**ಸ್ವರ್ಗಂ ನಯತಿ ಗೋಚರ್ಮ ಸಮ್ಯಗ್ದತ್ತಂ ಸದಕ್ಷಿಣಂ ।**
**ಯಾವತ್ತೃಣಾನಿ ತದ್ಭೂಮೌ ಸಪ್ತಸಂಖ್ಯಾನಿ ಸಂಖ್ಯಯಾ　　　　॥ ೨೦ ॥**

**ತಾವತ್ಕಾಲಂ ವಸೇತ್ಸ್ವರ್ಗೇ ವಿಷ್ಣುಲೋಕಾನ್ನ ತಚ್ಚ್ಯುತಿಃ　　　　॥ ೨೧ ॥**

**ಮಹಾಯಾಗಾವಸಾನೇ ಚ ಯೋ ನ ತರ್ಪಯತಿ ದ್ವಿಜಾನ್ ।**
**ನಿರರ್ಥಕಂ ತಸ್ಯ ಕರ್ಮ ಪ್ರಯಾಸಫಲಮಾತ್ರಕಂ　　　　॥ ೨೨ ॥**

**ವೃಷೋತ್ಸರ್ಗಾವಸಾನೇ ತು ಪ್ರದದ್ಯಾದ್ಯೋ ಮಹೀಂ ದ್ವಿಜಾಃ ।**
**ನ ಯಾತಿ ವಿಪ್ರಾಃ ಪ್ರೇತತ್ವಂ ತಸ್ಮಾದ್ವಿಪ್ರಾದಮತ್ಸರಾಃ　　　　॥ ೨೩ ॥**

**ತತ್ರ ಮಾನಂ ಪೃಥಕ್ಚೈವ ಶೃಣುತಾತ್ರ ಸಮಾಗತಾಃ ।**
**ಅಮಾನೇನ ಪ್ರದದ್ಯಾದ್ಯೋ ನರಕಂ ಯಾತಿ ರೌರವಂ　　　　॥ ೨೪ ॥**

---

ಬಾರದು. ಗೋಮಾಳದಲ್ಲಿ ಯಾವನು ನೆಲವನ್ನು ಅಗೆಯುವನೋ, ಗಾಡಿಯ ದಾರಿ ಮುಂತಾದುವನ್ನು ಯಾವನು ಮಾಡುವನೋ ಅವನ ವಂಶವು ಬೇಗನೆ ಬ್ರಹ್ಮ ಹತ್ಯೆಯ ಪಾಪಕ್ಕೆ ಗುರಿಯಾಗುವುದು.

೨೦-೨೫. ಒಂದುನೂರು ಹಸುಗಳೂ,ಒಂದು ಹೋರಿಯೂ ಯಾವತಡೆಯೂ ಇಲ್ಲದೆ ಸಂಚರಿಸುತ್ತಾ ಹುಲ್ಲುಮೇಯುವ ಭೂಮಿಗೆ ಗೋಚರ್ಮವೆಂದು ಹೆಸರು. ಇಂತಹ ಭೂಮಿಯನ್ನು ದಕ್ಷಿಣೆಯೊಡನೆ ಯಾವನು ದಾನಮಾಡುವನೋ ಅವನು ಆ ಭೂಮಿಯಲ್ಲಿರುವ ಹುಲ್ಲಿನಸಂಖ್ಯೆಯ ಏಳರಷ್ಟು ವರ್ಷಗಳು ಸ್ವರ್ಗಲೋಕದಲ್ಲಿ ವಾಸಿಸುವನು. ತರುವಾಯ ವಿಷ್ಣುಲೋಕಕ್ಕೆ ಹೋಗಿ ಪುನರ್ಜನ್ಮರಹಿತನಾಗಿ ಸ್ಥಿರ ವಾಗಿರುವನು. ಗೋಮಾಳದ ಪ್ರತಿಷ್ಠೆಗೆ ಸಂಬಂಧಿಸಿದ ಮಹಾಯಾಗದ ಕೊನೆಯಲ್ಲಿ ಬ್ರಾಹ್ಮಣಭೋಜನವನ್ನು ಮಾಡಿಸಿ ತೃಪ್ತಿಪಡಿಸಬೇಕು. ಹಾಗೆ ಮಾಡದಿದ್ದರೆ ಅವನು ಮಾಡಿದ ಕರ್ಮಕ್ಕೆ ಅನುರೂಪ ಫಲವಿಲ್ಲದೆ ಪ್ರಯಾಸಮಾತ್ರವೇ ಫಲವಾಗು ವುದು. ವೃಷೋತ್ಸರ್ಗ ಕರ್ಮಮಾಡಿ ಆ ಬಳಿಕ ಯಾವನು ಗೋಚರ್ಮವೆಂಬ ಭೂಮಿಯನ್ನು ದಾನಮಾಡುವನೋ ಅವನಿಗೆ ಪ್ರೇತತ್ವವು ಎಂದಿಗೂ ಬರುವುದಿಲ್ಲ. ಗೋಮಾಳಕ್ಕೆ ವೇದದಲ್ಲಿ ಪ್ರಮಾಣವು ವ್ಯಕ್ತವಾಗಿರುವುದು. ವೇದಪ್ರಮಾಣವನ್ನು

ಗವಾಂ ಶತಂ ವೃಷಶ್ಚೈಕೋ ಯತ್ರ ತಿಷ್ಠಂತ್ಯಯಂತ್ರಿತಾಃ ।
ತದ್ಗೋಚರ್ಮೇತಿ ವಿಖ್ಯಾತಂ ದತ್ತಂ ಸರ್ವಾಘನಾಶನಂ ॥ ೨೫ ॥

ಗೋಪ್ರಚಾರಸ್ಯ ದೇವಸ್ಯ ಬ್ರಾಹ್ಮಣಸ್ಯ ಚ ಭೋ ದ್ವಿಜಾಃ ।
ಯಾವತ್ಕಾಲಾವಧೇಃ ಸೀಮಾ ಅತೀತೇ ನಾಸ್ತಿ ಪಾತಕಂ ॥ ೨೬ ॥

ಮಂಡಪಂ ಪೂಜಯೇತ್ಸೂರ್ಯಂ ವಾಸುದೇವಸಮನ್ವಿತಂ ।
ಹೋಮಸ್ತಿಲಗುಡಾಭ್ಯಾಂ ಚ ಅಷ್ಟಾವಷ್ಟೌ ಪೃಥಕ್ ಪೃಥಕ್ ॥ ೨೭ ॥

ದೇಹಿ ಮೇತಿ ಚ ಮಂತ್ರೇಣ ವಿನ್ಯಸೇನ್ಮಂಡಪೋಪರಿ ।
ಯತ್ನಸಿದ್ಧಂ ತತಃ ಕೃತ್ವಾ ಶುಕ್ಲಂ ಘಟಚತುಷ್ಟಯಂ ॥ ೨೮ ॥

ಸಮುತ್ಸೃಜೇಜ್ಜಪೇತ್ ಪಶ್ಚಾತ್ಸೌರಂ ಸೂಕ್ತಂ ಚ ವೈಷ್ಣವಂ ।
ವಟಪತ್ರೇ ತು ಸಂಲಿಖ್ಯ ಚಿತ್ರಂ ನಿರ್ಮಾಯ ವಾ ಪುನಃ ॥ ೨೯ ॥

---

ತಿಳಿಯದೆ ಯಾವನು ದಾನಮಾಡುವನೋ ಅವನಿಗೆ ರೌರವವೆಂಬ ನರಕಪ್ರಾಪ್ತಿಯಾಗುವುದು. ಹೀಗೆ ಹೇಳಿದ ಗೋಚರ್ಮವೆಂಬ ಭೂಮಿಯನ್ನು ದಾನಮಾಡಿದರೆ ದಾನಮಾಡಿದವನ ಸಮಸ್ತಪಾಪಗಳೂ ನಾಶವಾಗುವುವು.

೨೬. ಓ ವಿಪ್ರರೇ! ಕೇಳಿ; ಗೋವು, ದೇವತೆಗಳು, ಬ್ರಾಹ್ಮಣರು ಇವರ ಉಪಯೋಗಕ್ಕಾಗಿ ಬಿಟ್ಟಿರುವ ಭೂಮಿಯು ಎಷ್ಟುಕಾಲದವರೆಗೆ ಅವರ ಉಪಯೋಗಕ್ಕಾಗಿ ಗೊತ್ತುಮಾಡಲಾಗಿರುವುದೋ ಅಷ್ಟುಕಾಲವಾದನಂತರ ಆ ಭೂಮಿಯು ಉಪಯೋಗವು ಅವುಗಳಿಗೆ ದೊರೆಯದೇಹೋದರೆ ಅದರಿಂದ ಆ ಭೂಮಿಯನ್ನು ಬಿಟ್ಟವನಿಗೆ ಯಾವ ಪಾಪವೂ ಬರುವುದಿಲ್ಲ.

೨೭-೩೦. ಮಂಟಪಪ್ರತಿಷ್ಠೆಯ ವಿಷಯದಲ್ಲಿ ಮೊದಲು ವಾಸುದೇವನೊಡನೆ ಸೂರ್ಯನನ್ನೂ ಹಿಂದೆ ಹೇಳಿದ ದೇವತೆಗಳನ್ನೂ ಮಂಟಪದ ದಿಕ್ಕುಗಳಲ್ಲಿ ವಿನ್ಯಾಸ ಮಾಡಿ ಪೂಜಿಸಬೇಕು. ಒಬ್ಬೊಬ್ಬ ದೇವತೆಗೂ ಎಳ್ಳು ಮತ್ತು ಬೆಲ್ಲಗಳಿಂದ 'ದೇಹಿಮೇ' ಎಂಬ ಮಂತ್ರಪೂರ್ವಕವಾಗಿ ಬೇರೆಬೇರೆಯಾಗಿ ಎಂಟೆಂಟು ಹೋಮವನ್ನು ಮಾಡಬೇಕು. ಆ ಮೇಲೆ ಪ್ರಯತ್ನಪೂರ್ವಕವಾಗಿ ಬೆಳ್ಳಗಿರುವ ನಾಲ್ಕು ಘಟಗಳನ್ನು ಮಾಡಿ ಅವುಗಳನ್ನು ಮಂಟಪದಲ್ಲಿ ಪ್ರತಿಷ್ಠಿಸಿ ಸೌರಸೂಕ್ತವನ್ನೂ, ವಿಷ್ಣುಸೂಕ್ತವನ್ನೂ ಹೇಳಬೇಕು. ಆಲದೆಲೆಯ ಆಕಾರವಾದ ಒಂದು ಚಿತ್ರದಲ್ಲಿ

**ದಿಕ್ಪಾಲಾನ್ಸನ್ಯಸೇತ್ತಾಸ್ವಸು ಸ್ವಾಸು ದಿಕ್ಷು ವಿಚಕ್ಷಣಃ ।**
**ಬದ್ಧಾಂಜಲಿಃ ಪಠೇನ್ಮಂತ್ರಾನಿಂದ್ರಾದೀನಾಂ ಯಥಾಕ್ರಮಂ ॥ ೩೦ ॥**

**ಧರ್ಮಸಂಸ್ಥಾಪನಾರ್ಥಾಯ ಆತ್ಮನೋ ವಿಭವಾಯ ಚ ।**
**ವಜ್ರಹಸ್ತೋ ಮಹೇಂದ್ರ ತ್ವಂ ಧರ್ಮತಸ್ತ್ರಾತುಮರ್ಹಸಿ ॥ ೩೧ ॥**

**ಭೋ ವಹ್ನೇ ಮೇಷವಾಹಸ್ತ್ವಂ ಚತುಃ ಶೃಂಗವಿರಾಜಿತ ।**
**ಅನಾಥಂ ಮಂಡಪಂ ತ್ವಂ ಹಿ ಧರ್ಮತಸ್ತ್ರಾತುಮರ್ಹಸಿ ॥ ೩೨ ॥**

**ಯಮ ತ್ವಂ ದಕ್ಷಿಣಾಶೇಶ ಮಹಾಮಹಿಷವಾಹನ ।**
**ಅನಾಥಂ ಮಂಡಪಂ ತ್ವಂ ಹಿ ಧರ್ಮತಸ್ತ್ರಾತುಮರ್ಹಸಿ ॥ ೩೩ ॥**

**ಮಂಚಸ್ಥೋ ರಾಕ್ಷಸೇಂದ್ರಸ್ತ್ವಂ ಖಡ್ಗಪಾಣಿರ್ಮಹಾಬಲಃ ।**
**ಅನಾಥಂ ಮಂಡಪಂ ತ್ವಂ ಹಿ ಧರ್ಮತಸ್ತ್ರಾತುರ್ಹಸಿ ॥ ೩೪ ॥**

---

ಎಂಟುದಿಕ್ಕುಗಳಲ್ಲಿಯೂ ಆಯಾ ದಿಕ್ಕಿನ ದಿಕ್ಪಾಲಕರನ್ನು ಬರೆದು ಕ್ರಮವಾಗಿ ಮುಂದೆ ಹೇಳುವಂತೆ ಇಂದ್ರಾದಿಗಳ ಮಂತ್ರವನ್ನು ಹೇಳಬೇಕು. ಹೀಗೆ ದೇವತೆಗಳ ಮಂತ್ರೋಚ್ಚಾರಣೆಮಾಡುವಾಗ ಕೈಗಳನ್ನು ಜೋಡಿಸಿಕೊಂಡಿರಬೇಕು.

೩೧. ವಜ್ರಾಯುಧವನ್ನು ಧರಿಸಿದ ದೇವೇಂದ್ರನೇ ! ಪ್ರಪಂಚದಲ್ಲಿ ಧರ್ಮಸಂಸ್ಥಾಪನೆಯಾಗುವಂತೆಯೂ, ನನಗೆ ಸಂಪತ್ತು ಬರುವಂತೆಯೂ ಮಾಡಿ ನೀನು ಧರ್ಮದಿಂದ ಈ ಮಂಟಪವನ್ನು ಕಾಪಾಡು.

೩೨. ಆಡಿನ ಮೇಲೆ ಕುಳಿತಿರುವವನೂ, ನಾಲ್ಕುವೇದರೂಪವಾದ ಕೊಂಬುಗಳಿಂದ ಪ್ರಕಾಶಿಸುವವನೂ ಆದ ಎಲೈ ಅಗ್ನಿಯೇ! ಒಡೆಯರಿಲ್ಲದ ಈ ಮಂಟಪವನ್ನು ನೀನು ಧರ್ಮದಿಂದ ಕಾಪಾಡು.

೩೩. ದಕ್ಷಿಣದಿಕ್ಕಿಗೆ ಅಧಿಪತಿಯಾಗಿ ದೊಡ್ಡದಾದ ಕೋಣನಮೇಲೆ ಕುಳಿತಿರುವ ಯಮನೇ ! ಸ್ವಾಮಿಯಿಲ್ಲದ ಈ ಮಂಟಪವನ್ನು ನೀನೇ ಧರ್ಮದಿಂದ ರಕ್ಷಿಸಬೇಕು.

೩೪. ಕತ್ತಿಯನ್ನು ಹಿಡಿದು ಮಹಾಬಲಶಾಲಿಯಾಗಿ ಮಂಚದಮೇಲೆ ಕುಳಿತಿರುವ ರಾಕ್ಷಸೇಂದ್ರನಾದ ನಿಋುಋುತಿಯೇ ! ಒಡೆಯರಿಲ್ಲದ ಈ ಮಂಟಪವನ್ನು ನೀನು ಧರ್ಮದಿಂದ ಪರಿಪಾಲಿಸಬೇಕು.

**ವಾರಿರಾಟ್ ಧ್ವಜಹಸ್ತೋಽಸಿ ಪವನೋ ಮೃಗವಾಹನಃ ।**
**ಅನಾಥಂ ಮಂಡಪಂ ತ್ವಂ ಹಿ ಧರ್ಮತಸ್ತ್ರಾತುಮರ್ಹಸಿ ॥ ೩೫ ॥**

**ಧನಾಧ್ಯಕ್ಷೋ ಗದಾಹಸ್ತಃ ಪಿಂಗಾಕ್ಷೋ ನರವಾಹನಃ ।**
**ಅನಾಥಂ ಮಂಡಪಂ ತ್ವಂ ಹಿ ಧರ್ಮತಸ್ತ್ರಾತುಮರ್ಹಸಿ ॥ ೩೬ ॥**

**ಆದಿದೇವೋಽಸಿ ದೇವಾನಾಂ ಕರ್ತಾ ಹರ್ತಾ ಮಹೇಶ್ವರಃ ।**
**ಅನಾಥಂ ಮಂಡಪಂ ತ್ವಂ ಹಿ ಧರ್ಮತಸ್ತ್ರಾತುಮರ್ಹಸಿ ॥ ೩೭ ॥**

**ಅನಂತೋ ನಾಗರಾಜೋ ಯೋ ಧರಾಮುದ್ಧೃತ್ಯ ತಿಷ್ಠತಿ ।**
**ಅನಾಥಂ ಮಂಡಪಂ ತ್ವಂ ಹಿ ಧರ್ಮತಸ್ತ್ರಾತುಮರ್ಹಸಿ ॥ ೩೮ ॥**

**ಚತುರ್ಣಾಮೇವ ವರ್ಣಾನಾಂ ಸ್ಥಿತ್ಯರ್ಥಂ ಮೃಗಪಕ್ಷಿಣಾಂ ।**
**ಪ್ರೀತಯೇ ವಾಸುದೇವಸ್ಯ ಏವಂ ಮಂಡಪಮುತ್ಸೃಜೇತ್ ॥ ೩೯ ॥**

---

೩೫. ಜಲಾಧಿಪತಿಯೂ, ಧ್ವಜಹಸ್ತನೂ ಆದ ವರುಣನೇ! ಜಿಂಕೆಯೇ ವಾಹನವಾದ ವಾಯುವೇ! ನೀವಿಬ್ಬರೂ ಧರ್ಮದಿಂದ ಈ ಅನಾಥಮಂಟಪವನ್ನು ಕಾಪಾಡಿರಿ.

೩೬. ಧನಗಳಿಗೆ ಅಧಿಪತಿಯೂ, ಕೈಯಲ್ಲಿ ಗದೆಯನ್ನು ಹಿಡಿದಿರುವವನೂ, ಪಿಂಗಳವರ್ಣದ ಕಣ್ಣುಳ್ಳವನೂ, ನರ (ಮನುಷ್ಯ) ವಾಹನನೂ ಆದ ಕುಬೇರನೇ! ಈ ಅನಾಥಮಂಟಪವನ್ನು ನೀನು ಧರ್ಮದಿಂದ ರಕ್ಷಿಸು.

೩೭. ಎಲೈ ಮಹೇಶ್ವರನೇ! ನೀನು ದೇವತೆಗಳಿಗೆ ಮೊದಲನೆಯವನು, ಈ ಸಮಸ್ತ ಪ್ರಪಂಚವನ್ನೂ ಸೃಷ್ಟಿಸುವೆ. ನಾಶವನ್ನೂ ಮಾಡುವೆ. ಒಡೆಯರಿಲ್ಲದ ಈ ಮಂಟಪವನ್ನು ಧರ್ಮದಿಂದ ನೀನು ರಕ್ಷಿಸು.

೩೮. ವಿಸ್ತಾರವಾದ ಈ ಭೂಮಿಯನ್ನು ಹೊತ್ತಿರುವ ನಾಗರಾಜನಾದ ಅನಂತನೇ! ಈ ಅನಾಥಮಂಟಪವನ್ನು ನೀನೇ ಕಾಪಾಡಬೇಕು.

೩೯-೪೦. ಈ ಭೂಮಿಯಲ್ಲಿರುವ ಮೃಗಪಕ್ಷಿಗಳೂ, ಬ್ರಾಹ್ಮಣಾದಿ ನಾಲ್ಕು ವರ್ಣಗಳೂ ಸುಖವಾಗಿರುವುದಕ್ಕಾಗಿಯೂ, ವಾಸುದೇವನ ಸಂತೋಷಕ್ಕಾಗಿಯೂ, ಈ ಮಂಟಪವನ್ನು ಬಿಟ್ಟಿರುವೆನು. ಈ ಮಂಟಪದ ಕಂಭವು ಮುರಿದರೂ ಮೇಲೆ ಹೊದಿಸಿರುವ ಹುಲ್ಲು ಕೆಟ್ಟುಹೋಗಿದ್ದರೂ, ಮತ್ತೆ ಹೊಸ ಹುಲ್ಲನ್ನು ಹೊದಿಸಬೇಕಾ

**ಭಗ್ನೇ ಸ್ತಂಭೇ ತೃಣೇ ಜೀರ್ಣೇ ಪುನಸ್ತೃಣಪ್ರದಾಪನೇ ।**
**ಸ್ಥಾಪನೇ ಚ ತಥೈವಾಸ್ಯ ಪ್ರತಿಷ್ಠಾ ಸ್ಯಾದ್ಯಥಾಕ್ಷಯಾ ॥ ೪೦ ॥**

**ಘಾತಾಪಾಯಾದಿದೋಷೇಣ ಮ್ರಿಯಂತೇ ಯದಿ ಜಂತವಃ ।**
**ಪ್ರತಿಷ್ಠಾಯಾಂ ಕ್ರಿಯಾಂ ತು ಧರ್ಮೋ ಮೇ ಸ್ಯಾನ್ನ ಪಾತಕಂ ॥ ೪೧ ॥**

**ಮಾನವಾಃ ಪಶವೋ ಯೇ ಚ ನಿವಸಂತೀಹ ಮಂಡಪೇ ।**
**ಸ್ವಸ್ತಿ ಚಾಸ್ತು ಸದಾ ತೇಷಾಂ ತ್ವತ್ಪ್ರಸಾದಾತ್ಕಿಲ ಪ್ರಭೋ ॥ ೪೨ ॥**

**ತತಸ್ತ್ರಿಗುಣಸೂತ್ರೇಣ ಸೂತ್ರಮಾಣೇತಿ ವೈ ಋಚಾ ।**
**ಸಪ್ತಧಾ ವೇಷ್ಟಯಿತ್ವಾ ತು ದಕ್ಷಿಣಾಂ ಸಂಪ್ರಕಾಶ್ಯ ಚ ॥ ೪೩ ॥**

**ಉಪಾನಹೌ ತಥಾ ಛತ್ರಮಾಚಾರ್ಯಾಯ ನಿವೇದಯೇತ್ ।**
**ಮಂಡಪೇ ಭೋಜಯೇದ್ವಿಪ್ರಾಂಸ್ತೇಷಾಂ ದದ್ಯಾದ್ಯಥೇಪ್ಸಿತಾನ್ ॥ ೪೪ ॥**

**ದೀನೇಭ್ಯಶ್ಚ ಪೃಥಗ್ದದ್ಯಾದ್ಗೃಹಂ ವಿಪ್ರಪುರಃಸರಂ ।**
**ಪ್ರವಿಶೇತ್ತೂರ್ಯಘೋಷೇಣ ಪ್ರಕುರ್ಯಾಚ್ಚ ಗೃಹಾರ್ಚನಂ ॥ ೪೫ ॥**

---

ದರೂ, ಈ ಮಂಟಪವು ವೇದವಿಧಿಯಿಂದ ಮತ್ತೆ ಸ್ಥಾಪನೆಯಾಗಬೇಕಾದರೂ ಈಗ ಮಾಡಿದ ಕೆಲಸವು ನಾಶರಹಿತವಾದ ಅಕ್ಷಯವಾದ ಫಲವನ್ನು ಕೊಡುವುದಾಗಲಿ.

೪೧-೪೨. ಮಂಟಪವನ್ನು ಕಟ್ಟುವಾಗ ಏಟುಬೀಳುವುದು, ಮುಂತಾದ ಅಪಾಯಕರವಾದ ದೋಷಗಳಿಂದ ಪ್ರಾಣಿಗಳು ಮರಣಹೊಂದಿದ್ದರೆ ಆ ಪಾಪವು ನನಗೆ ಸಂಭವಿಸದೆ ಪ್ರತಿಷ್ಠಾಕರ್ಮದಿಂದ ನನಗೆ ಧರ್ಮವೇ ಲಭಿಸಲಿ. ಈ ಮಂಟಪದಲ್ಲಿ ಮನುಷ್ಯರು, ಪಶುಗಳು, ಮುಂತಾದ ಯಾವ ಪ್ರಾಣಿಗಳು ವಾಸಮಾಡಿದರೂ ಎಲೈ ವಾಸುದೇವನೇ! ನಿನ್ನನುಗ್ರಹದಿಂದ ಅವುಗಳಿಗೆ ಮಂಗಳವೇ ಯಾವಾಗಲೂ ಉಂಟಾಗಲಿ ಎಂದು ಸ್ತೋತ್ರಮಾಡಬೇಕು.

೪೩-೪೮. ಹೀಗೆ ಸ್ತೋತ್ರಮಾಡಿದ ಮೇಲೆ ಮೂರೆಳೆಯ ದಾರದಿಂದ 'ಸೂತ್ರಮಾಣೆ' ಎಂಬ ಮಂತ್ರವನ್ನು ಹೇಳುತ್ತಾ ಮಂಟಪಕ್ಕೆ ಏಳುಸುತ್ತು ದಾರವನ್ನು ಸುತ್ತಬೇಕು. ದಕ್ಷಿಣಾಸಹಿತವಾಗಿ ಛತ್ರಿ, ಮತ್ತು ಜೋಡು ಇವುಗಳನ್ನು ಆಚಾರ್ಯನಿಗೆ ಕೊಟ್ಟು ಆ ಮಂಟಪದಲ್ಲಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು, ಅನಂ

ಏವಂ ಪ್ರಪಾಯಾಂ ವಿಜ್ಞೇಯೋ ವಿಶೇಷೋ ವರುಣಂ ಯಜೇತ್ ।
ವಾಸುದೇವೇನ ಸಹಿತಂ ಸಾಂಗೋಪಾಂಗಂ ಸದಕ್ಷಿಣಂ ॥ ೪೬ ॥

ಸ್ಥಾಲೀಪಾಕವಿಧಾನೇನ ಪ್ರಕುರ್ಯಾದ್ದೇಶಿಕೋತ್ತಮಃ ।
ಆಚಾರ್ಯಾಯ ಗೃಹಂ ದದ್ಯಾತ್ಪರಿಚ್ಛದಸಮನ್ವಿತಂ ॥ ೪೭ ॥

ಋತ್ವಿಜೇ ತಾಮ್ರಪಾತ್ರಂ ಚ ಜಲಪೂರ್ಣಂ ಚ ಧಾನ್ಯಕಂ ।
ದಿಕ್ಪಾಲಾನ್ ದ್ವಾರದೇಶೇ ತು ಕೂಪಯಾಗೇ ವಿಶೇಷತಃ ॥ ೪೮ ॥

ಬ್ರಹ್ಮಾಣಂ ನಾಗರಾಜಾನಂ ದ್ವಾರಪಾಲೌ ಚ ಪಶ್ಚಿಮೇ ।
ಯಜೇನ್ಮಂತ್ರೈಃ ಪೃಥಗ್ದೇವಾನ್ ಮಂತ್ರೈರೇಭಿರ್ಯಥಾಕ್ರಮಂ ॥ ೪೯ ॥

ಬಲಿದಾನಂ ವಿಧಾನೇನ ಕೃತ್ವಾ ದದ್ಯಾದ್ಯಥಾವಿಧಿ ।
ಪತಾಕಾನಾಮತಸ್ತತ್ವಂ ಪ್ರವಕ್ಷ್ಯಾಮಿ ಯಥಾಕ್ರಮಂ ॥ ೫೦ ॥

ವಜ್ರೀ ಚ ಧೂಮಲೀ ಕೃಷ್ಣಾ ಪೀತಾ ಚೈವಾಥ ವಾರುಣೀ ।
ಶೀಘ್ರಾ ಗೌರೀ ಉಮಾ ಚೈವ ಪೀತಾ ಶುಕ್ಲಾ ಪ್ರಕೀರ್ತಿತಾ ॥ ೫೧ ॥

---

ತರ ಅವರಿಗೆ ಇಷ್ಟವಾದ ದಕ್ಷಿಣಾದಿಗಳನ್ನು ಕೊಡಬೇಕು. ಮೂರನೆಯದಿನ ಬ್ರಾಹ್ಮಣರೊಡನೆ ವಾದ್ಯಘೋಷದಿಂದ ಕೂಡಿ ಮನೆಗೆ ಪ್ರವೇಶಮಾಡಿ ಮನೆದೇವರನ್ನು ಪೂಜಿಸಬೇಕು. ಅರವಟ್ಟಿಗೆಯ ಪ್ರತಿಷ್ಠೆಯನ್ನೂ ಹೀಗೆಯೇ ಮಾಡಬೇಕು. ವಿಶೇಷವೇನೆಂದರೆ:—ಅರವಟ್ಟಿಗೆಯ ಪ್ರತಿಷ್ಠೆಯಲ್ಲಿ ವಾಸುದೇವನೊಡನೆ ಅಂಗೋಪಾಂಗ ದೇವತೆಗಳೊಡನೆ ವರುಣನನ್ನು ಪೂಜಿಸಿ ಸ್ಥಾಲೀಪಾಕಕ್ರಮದಿಂದ ಹೋಮಗಳನ್ನು ಮಾಡಬೇಕು. ಈ ಸಂದರ್ಭದಲ್ಲಿ ಆಚಾರ್ಯನಿಗೆ ಸಕಲ ಪರಿಕರಗಳೊಡನೆ ಕೂಡಿದ ಮನೆಯನ್ನು ದಾನಮಾಡಬೇಕು. ಋತ್ವಿಕ್ಕುಗಳಿಗೆ ನೀರುತುಂಬಿದ ತಾಮ್ರದಪಾತ್ರೆಗಳನ್ನೂ ಧಾನ್ಯವನ್ನೂ ದಾನಕೊಡಬೇಕು.

೪೮–೫೧. ಬಾವಿಯಪ್ರತಿಷ್ಠೆಯಲ್ಲಿ ತದ್ದ್ವಾರದಲ್ಲಿ ದಿಕ್ಪಾಲಕರನ್ನು ಪೂಜಿಸಬೇಕು. ಪಶ್ಚಿಮದಿಕ್ಕಿನಲ್ಲಿ ಬ್ರಹ್ಮ, ಆದಿಶೇಷ, ದ್ವಾರಪಾಲಕರು, ಇವರನ್ನು ಬೇರೆ ಬೇರೆಯಾಗಿ ಕ್ರಮವಾಗಿ ಆಯಾ ದೇವತಾಮಂತ್ರಗಳಿಂದ ಪೂಜಿಸಿ ವಿಧಿಗನುಸಾರವಾಗಿ ಬಲಿಪ್ರದಾನ ಮಾಡಬೇಕು. ಕ್ರಮವಾಗಿ ಪತಾಕಾರೂಪವಾದ ಹೆಸರುಗಳಿಂದ ದೇವತಾತತ್ವಗಳನ್ನು ಹೇಳುವೆನು. ವಜ್ರೀ, ಧೂಮಲೀ, ಕೃಷ್ಣಾ, ಪೀತಾ, ವಾರುಣೀ ಶೀಘ್ರಾ, ಗೌರೀ, ಉಮಾ, ಪೀತಾ, ಶುಕ್ಲಾ ಎಂಬಿವೇ ಪತಾಕಾದೇವತಾತತ್ವಗಳು.

**ಕುಂಭೇಷು ಪೂಜಯೇದ್ದೇವಾನ್ಮಹೇಶಂ ಪ್ರಥಮಂ ಬುಧಃ ।**
**ಗ್ರಹಾಂಶ್ಚ ಮಧ್ಯಕಲಶೇ ಬ್ರಹ್ಮಾಣಂ ಚ ತತಃ ಪರಂ ॥ ೫೨ ॥**

**ವೇದಿಕಾಪೂರ್ವಭಾಗೇ ತು ಉತ್ತರೇ ಕಲಶೇ ಶಿವಂ ।**
**ದಕ್ಷಿಣೇ ಕಲಶೇ ವಿಷ್ಣುಂ ಕರ್ಣಿಕಾಯಾಂ ಜಲೇಶ್ವರಂ ॥ ೫೩ ॥**

**ಕಲಶೇ ವಿಧಿವದ್ಭಕ್ತ್ಯಾ ಉಪಚಾರೈಃ ಪೃಥಗ್ವಿಧೈಃ ।**
**ಸಂಪೂಜ್ಯ ವಟಪತ್ರೇ ಚ ನಾಗಾನ್ ಸಂಲಿಖ್ಯ ನಾಗಜೈಃ ॥ ೫೪ ॥**

**ಯೇ ನಾಗಾಸ್ತಾನ್ಪ್ರವಕ್ಷ್ಯಾಮಿ ಅನಂತೋ ವಾಸುಕಿಸ್ತಥಾ ।**
**ತಥಾ ಕರ್ಕೋಟಕಶ್ಚೈವ ತಕ್ಷಕಃ ಕುಲಿಕಸ್ತಥಾ ॥ ೫೫ ॥**

**ಪದ್ಮಶ್ಚೈವ ಮಹಾಪದ್ಮೋ ಮಂತ್ರೈರೇಭಿಃ ಪೃಥಕ್‌ಪೃಥಕ್ ।**
**ಪುಂಡರೀಕದಲಾಭಾಸ ಶುಭಕರ್ಣಾಂತಲೋಚನ ॥**
**ಫಣಾಸಹಸ್ರಸಂಯುಕ್ತ ಶಂಖಾಬ್ಜಕೃತಲೋಚನ ॥ ೫೬ ॥**

**ಅನಂತ ನಾಗರಾಜೇಂದ್ರ ಇಹಾಗಚ್ಛ ನಮೋಽಸ್ತು ತೇ ।**
**ಸಿತಕುಂದೇಂದುವರ್ಣಾಭ ವಿಸ್ಫುರದ್ಭೋಗಮಂಡಲ ॥ ೫೭ ॥**

---

೫೨–೫೪. ಕಲಶಗಳಲ್ಲಿ ದೇವತೆಗಳನ್ನು ಪೂಜಿಸಬೇಕು. ಮೊದಲು ಮಹೇಶ್ವರನನ್ನೂ, ಮಧ್ಯದ ಕಲಶದಲ್ಲಿ ಆದಿತ್ಯಾದಿ ನವಗ್ರಹಗಳನ್ನೂ, ತರುವಾಯ ವೇದಿಕೆಯ ಪೂರ್ವಕಲಶದಲ್ಲಿ ಬ್ರಹ್ಮನನ್ನೂ, ಉತ್ತರಕಲಶದಲ್ಲಿ ಶಿವನನ್ನೂ, ದಕ್ಷಿಣಕಲಶದಲ್ಲಿ ವಿಷ್ಣುವನ್ನೂ, ನಡುವೆ ಕರ್ಣಿಕೆಯಲ್ಲಿ ವರುಣನನ್ನೂ, ಭಕ್ತಿಯಿಂದ ನಾನಾಉಪಚಾರ ಪೂಜೆಗಳನ್ನು ಮಾಡಿ ಆಲದೆಲೆಯಲ್ಲಿ ಈ ಮುಂದೆ ಹೇಳುವ ನಾಗರುಗಳನ್ನು ಬರೆದು ಅರ್ಚಿಸಬೇಕು.

೫೫. ಅನಂತ, ವಾಸುಕಿ, ಕರ್ಕೋಟಕ, ತಕ್ಷಕ ಪದ್ಮ, ಕುಲಿಕ, ಮಹಾಪದ್ಮ ಎಂಬ ನಾಗಗಳನ್ನು ಮುಂದೆ ಹೇಳುವ ಮಂತ್ರಗಳಿಂದ ಬೇರೆಬೇರೆಯಾಗಿ ಪೂಜಿಸಬೇಕು

೫೬–೫೮. ಕಮಲದಂತೆ ಕಾಂತಿಯುಳ್ಳವನೂ, ಮಂಗಲಕರವಾಗಿ ವಿಸ್ತಾರವಾದ ಕಣ್ಣುಳ್ಳವನೂ, ಸಾವಿರಹೆಡೆಗಳನ್ನು ಹೊಂದಿದವನೂ, ಆದ ಅನಂತನೆಂಬ ನಾಗರಾಜನೇ! ಇಲ್ಲಿ ನೆಲಸು ನಿನಗೆ ತಲೆಬಾಗಿ ನಮಸ್ಕಾರಮಾಡುವೆನು. ಬಿಳಿಯ

ಸರ್ವನಾಗಸ್ಯ ಶೂರಸ್ಯ ಕೃತಸ್ವಸ್ತಿಕಲಾಂಛನ ।
ನಾಗೇಂದ್ರ ತಕ್ಷಕಶ್ರೀಮನ್ನಿಹಾಗಚ್ಛ ನಮೋಽಸ್ತು ತೇ ॥ ೫೮ ॥

ನವೀನ ಜಲದಶ್ಯಾಮ ಶ್ರೀಮತ್ಕಮಲಲೋಚನ ।
ವಿಷದರ್ಪಬಲೋನ್ಮತ್ತ ಗ್ರೀವಾಯಾಮೇಕಶೇಖರ ॥ ೫೯ ॥

ಶಂಖಪಾಲ ಇತಿ ಖ್ಯಾತ ಜಲಾಧಾರಪ್ರತೀಕ್ಷಕ ।
ಅಧ್ಯಕ್ಷೋ ನಾಗಲೋಕಾನಾಮಿಹಾಗಚ್ಛ ನಮೋಽಸ್ತು ತೇ ॥ ೬೦ ॥

ಅತಿಪೀತಸುವರ್ಣಾಭ ಚಂದ್ರಾರ್ಧಾಂಕಿತಮಸ್ತಕ ।
ದೀಪ್ತಭೋಗಕೃತಾಟೋಪ ಶುಭಲಕ್ಷಣಲಕ್ಷಿತ ॥ ೬೧ ॥

ಕುಲೀರ ನಾಗರಾಜೇಂದ್ರ ಸರ್ವಸತ್ತ್ವಹಿತೇ ರತ ।
ತಿಷ್ಠೇಹ ಯಜ್ಞಸಿದ್ಧ್ಯರ್ಥಂ ಕಾಮರೂಪ ನಮೋಽಸ್ತು ತೇ ॥ ೬೨ ॥

---

ಮಲ್ಲೀಹೂ, ಚಂದ್ರ ಇವುಗಳ ಕಾಂತಿಯಂತೆ ಕಾಂತಿಯುಳ್ಳವನೂ, ಪ್ರಕಾಶವಾದ ಹೆಡೆಯ ಪ್ರದೇಶವುಳ್ಳವನೂ, ಸಮಸ್ತ ನಾಗಗಳಿಗಿಂತ ಶೂರನೂ, ಸ್ವಸ್ತಿಕವೆಂಬ ಗುರುತುಳ್ಳವನೂ, ನಾಗರಾಜನೂ, ಶ್ರೀಮಂತನೂ ಆದ ತಕ್ಷಕನೇ! ಇಲ್ಲಿ ನೆಲಸು ನಿನಗೆ ನಮಸ್ಕಾರಮಾಡುವೆನು.

೫೯-೬೦. ಹೊಸದಾದ ಮೇಘದಬಣ್ಣದಂತೆ ಕಪ್ಪುಬಣ್ಣದ ಕಾಂತಿಯಿಂದ ಕೂಡಿದವನೂ, ಕಮಲದಂತೆ ಕಣ್ಣುಳ್ಳವನೂ, ವಿಷದ ಮತ್ತು ಪರಾಕ್ರಮದ ಬಲದಿಂದ ಮದಿಸಿದವನೂ, ಕುತ್ತಿಗೆಯಲ್ಲಿ ಒಂದೇಒಂದು ಶಿಖಾಭರಣರತ್ನವುಳ್ಳವನೂ, ಜಲಾಧಾರಸ್ಥಾನವನ್ನೇ ನಿರೀಕ್ಷಿಸುತ್ತಿರುವವನೂ, ನಾಗಲೋಕಾಧಿಪತಿಯೂ ಆದ ಶಂಖಪಾಲನೇ! ಇಲ್ಲಿ ದಯಮಾಡು ನಿನಗೆ ನಮಸ್ಕಾರಮಾಡುವೆನು.

೬೧-೬೨. ಚಿನ್ನದಂತೆ ಹಳದಿಯಬಣ್ಣದಿಂದ ಕೂಡಿದವನೂ, ತಲೆಯಲ್ಲಿ ಅರ್ಧಚಂದ್ರನ ಗುರುತುಳ್ಳವನೂ, ಪ್ರಕಾಶಮಾನವಾದ ಹೆಡೆಯಿಂದ ಧ್ವನಿಮಾಡುತ್ತಿರುವವನೂ, ಮಂಗಳಕರವಾದ ಲಕ್ಷಣಗಳಿಂದ ಕೂಡಿದವನೂ, ಸಮಸ್ತ ಪ್ರಾಣಿಗಳಿಗೂ ಹಿತವನ್ನುಂಟುಮಾಡುವುದರಲ್ಲಿ ಆಸಕ್ತನೂ, ನಾಗಗಳಿಗೆ ರಾಜನೂ ಆದ ಎಲೈ ಕುಳೀರನೇ! ನನ್ನ ಯಜ್ಞಸಿದ್ಧಿಗಾಗಿ ನೀನು ಇಲ್ಲಿ ನೆಲಸಿರು, ಇಷ್ಟವಾದ ರೂಪವನ್ನು ಧರಿಸಬಲ್ಲ ನಿನಗೆ ನಮಸ್ಕಾರ.

**ಯಃ ಸುವರ್ಣೇನ ವರ್ಣೇನ ಪದ್ಮಪತ್ರಾಯತೇಕ್ಷಣಃ ।**
**ಪಂಚಬಿಂದುಕೃತಾಭೋಗೋ ಗ್ರೀವಾಯಾಮೇಕಶೇಖರಃ ॥ ೬೩ ॥**

**ತಸ್ಮೈ ತೇ ಪದ್ಮನಾಗೇಂದ್ರ ತೀವ್ರರೂಪ ನಮೋಽಸ್ತು ತೇ ।**
**ನಾಗಿನ್ಯೋ ನಾಗಕನ್ಯಾಶ್ಚ ತಥಾ ನಾಗಕುಮಾರಕಾಃ ॥**
**ಸರ್ವೇ ತೇ ಪ್ರೀತಮನಸಃ ಪೂಜಾಂ ಗೃಹ್ಣಂತು ಮೇ ಸದಾ ॥ ೬೪ ॥**

**ಸ್ವಗೃಹ್ಯೋಕ್ತೇನ ವಿಧಿನಾ ಕೃತ್ವಾಗ್ನಿಸ್ಥಾಪನಂ ಬುಧಃ ।**
**ಆಜ್ಯಂ ಸಂಸ್ಕೃತ್ಯ ಜುಹುಯಾದ್ದಿಗೀಶಾನಾಂ ಯಥಾಕ್ರಮಂ ॥ ೬೫ ॥**

**ಆದಿತ್ಯಾದಿ ಗ್ರಹಾಂಶ್ಚೈವ ಬ್ರಹ್ಮಾಣಂ ಕೃಷ್ಣಮೇವ ಚ ।**
**ಮಧುಪಿಷ್ಟೇನ ಚ ಶಿವಂ ವರುಣಂ ಜುಹುಯಾತ್ತತಃ ॥ ೬೬ ॥**

**ಪ್ರಾದೇಶಮಾತ್ರಂ ಸಂಪ್ರೋಕ್ಷ್ಯ ಯೂಪಂ ಚಾಸ್ಯ ಪ್ರಮಾಣಕಂ ।**
**ಚತುರಸ್ರಂ ಶೂಲಯುಕ್ತಂ ಗಣಾನಾನೀಯ ಪೂಜಯೇತ್ ॥ ೬೭ ॥**

---

೬೩-೬೪. ಚಿನ್ನದಬಣ್ಣದಿಂದ ಕೂಡಿದ ಶರೀರವೂ, ಕಮಲದಳದಂತೆ ವಿಸ್ತಾರವಾದ ಕಣ್ಣೂ, ಐದುಬಿಂದುರೂಪವಾದ ಚಿಹ್ನೆಗಳಿಂದ ಕೂಡಿದ ಹೆಡೆಯೂ, ಕುತ್ತಿಗೆಯಲ್ಲಿ ಒಂದೇಒಂದು ಶಿಖಾಭರಣರೂಪವಾದ ರತ್ನವೂ ಉಳ್ಳ ಪದ್ಮನೆಂಬ ನಾಗರಾಜನಿಗೆ ನಮಸ್ಕಾರಮಾಡುವೆನು. ನಾಗಸ್ತ್ರೀಯರೂ, ನಾಗಕುಮಾರ ಕುಮಾರಿಯರೂ, ಎಲ್ಲರೂ ಸಂತೋಷದಿಂದ ಯಾವಾಗಲೂ ನನ್ನ ಪೂಜೆಯನ್ನು ಸ್ವೀಕರಿಸಲಿ ಎಂದು ಸ್ತೋತ್ರಮಾಡಬೇಕು.

೬೫-೬೬. ಯಜಮಾನನು ಸ್ವಶಾಖೆಯ ಗೃಹ್ಯಸೂತ್ರದಲ್ಲಿ ಹೇಳಿದ ವಿಧಿಯಂತೆ ಅಗ್ನಿಪ್ರತಿಷ್ಠೆಯನ್ನು ಮಾಡಿ, ಆಜ್ಯಕ್ಕೆ ಸಂಸ್ಕಾರವನ್ನೂ ನಡೆಯಿಸಿ ಕ್ರಮವಾಗಿ ದಿಕ್ಪಾಲಕರಿಗೂ, ಆದಿತ್ಯಾದಿ ನವಗ್ರಹಗಳಿಗೂ, ಬ್ರಹ್ಮನಿಗೂ, ಕೃಷ್ಣನಿಗೂ ಆಜ್ಯಾಹುತಿಯನ್ನು ಕೊಡಬೇಕು. ಹಿಟ್ಟನ್ನು ಜೇನಿನಲ್ಲಿ ಕಲಸಿ ಶಿವನಿಗೂ ವರುಣನಿಗೂ ಆಹುತಿಗಳನ್ನು ಕೊಡಬೇಕು.

೬೭-೬೯. ಚಚ್ಚೌಕವುಳ್ಳದ್ದೂ, ತುದಿಯಲ್ಲಿ ಶೂಲಾಕೃತಿಯಿಂದ ಕೂಡಿದುದೂ, ಒಂದುಚೋಟುದ್ದವುಳ್ಳದೂ ಆದ ಯೂಪವನ್ನು ಮಂತ್ರೋದಕದಿಂದ ಪ್ರೋಕ್ಷಿಸಿ ದೇವಗಣಗಳನ್ನೆಲ್ಲಾ ಅದರಲ್ಲಿ ಆವಾಹನೆಮಾಡಿ ಪೂಜಿಸಿ ಅದನ್ನೂ; ಪೂಜೆ

**ಕೂಪೇ ನಿಕ್ಷಿಪ್ಯ ತಾನ್ನಾಗಾನ್ಪಂಚರತ್ನಂ ಕ್ಷಿಪೇತ್ತತಃ ।**
**ಸುತ್ರಾಮಾಣೇತಿ ಮಂತ್ರೇಣ ತ್ರಿಧಾ ಸಂವೇಷ್ಟ್ಯ ಸೂತ್ರಕೈಃ ॥ ೨೮ ॥**

**ರಂಜಿತೈಃ ಕದಲೀವೃಕ್ಷಂ ವರುಣಾಯ ಸಮುತ್ಸೃಜೇತ್ ।**
**ತ್ರಾತಾರಮಿತಿ ಮಂತ್ರೇಣ ವಸ್ತ್ರಮಾಲ್ಯೇನ ಭೂಷಯೇತ್ ॥**
**ಕರ್ಣವೇಧಂ ತತಃ ಕೃತ್ವಾ ಉತ್ಸೃಜೇದ್ವಾಕ್ಯಮುಚ್ಚರ್ರ್ ॥ ೨೯ ॥**

**ಓಂ ಅದ್ಯೇತ್ಯಾದಿಸರ್ವಭೂತೇಭ್ಯಃ ಫಲಪುಷ್ಪಪತ್ರಚ್ಛಾಯಾವೃತ**
**ಮುಖ್ಯನಾನಾತರುವಿರಚಿತಮಾರಾಮಂ ವನಸ್ಪತಿದೈವತಂ ಸುಪೂಜಿತಂ**
**ವೇದವ್ಯಾಸಾದ್ಯುಕ್ತಫಲಾವಾಪ್ತಯೇ ಅಮುಕಋಷಿಸಗೋತ್ರಃ**
**ಶ್ರೀಅಮುಕದೇವಶರ್ಮಾಹಮುತ್ಸೃಜೆ**
**ಮಹೋತ್ಸವಂ ತತಃ ಕುರ್ಯಾತ್ಕೃತ್ವಾ ಬದ್ಧಾಂಜಲಿಃ ಪಠೇತ್ ।**
**ವೃಕ್ಷಾಗ್ರಾತ್ಪತಿತಸ್ಯಾಪಿ ಆರೋಹಾತ್ಪತಿತಸ್ಯ ವಾ ॥ ೭೦ ॥**

---

ಮಾಡಿದ ನಾಗಗಳನ್ನೂ, ಪಂಚರತ್ನಗಳನ್ನೂ ಭಾವಿಯಲ್ಲಿ ಬಿಟ್ಟುಬಿಡಬೇಕು. ತರುವಾಯ 'ಸುತ್ರಾಮಣಿ' ಎಂಬ ಮಂತ್ರದಿಂದ ಅರಿಸಿನ ಸವರಿದ ದಾರವನ್ನು ಭಾವಿಯ ಸುತ್ತ ಮೂರುಸುತ್ತು ಸುತ್ತಿ ವರುಣಪ್ರೀತ್ಯರ್ಥವಾಗಿ ಬಾಳೆಯಗಿಡವನ್ನು ಭಾವಿಯ ಪಕ್ಕದಲ್ಲಿ ನಟ್ಟು 'ತ್ರಾತಾರಂ' ಎಂಬ ಮಂತ್ರಪೂರ್ವಕವಾಗಿ ವಸ್ತ್ರಗಳಿಂದಲೂ, ಹೂಗಳಿಂದಲೂ ಅದನ್ನು ಅಲಂಕಾರಮಾಡಬೇಕು. ಆ ಮೇಲೆ ತೋಟದ ಗಿಡಗಳಿಗೆ ಕರ್ಣವೇಧ (ಕಿವಿ ಚುಚ್ಚುವುದು) ಎಂಬ ಶಾಸ್ತ್ರವನ್ನು ಮಾಡಿ ಆ ತೋಟವನ್ನು ಮುಂದೆ ಹೇಳುವ ವಾಕ್ಯವನ್ನು ಹೇಳುತ್ತಾ ಎಲ್ಲರ ಉಪಯೋಗಕ್ಕಾಗಿ ಬಿಡಬೇಕು. ಓಂಕಾರಪೂರ್ವಕವಾಗಿ ಸಂಕಲ್ಪವನ್ನು ಮಾಡಿ, ಈ ಶುಭದಿನದಲ್ಲಿ ಸಮಸ್ತಪ್ರಾಣಿಗಳ ಉಪಯೋಗಕ್ಕಾಗಿ ಹಣ್ಣು, ಹೂ, ಎಲೆ, ನೆರಳು ಇವುಗಳಿಂದ ತುಂಬಿದ ಮುಖ್ಯವಾದ ಬಗೆಬಗೆಯ ಮರಗಳನ್ನು ಬೆಳೆಯಿಸಿ ಮಾಡಿದ ದೇವತಾಸ್ವರೂಪವಾದ ಪೂಜ್ಯವಾದ ಈ ತೋಟವನ್ನು ವೇದವ್ಯಾಸರೇ ಮೊದಲಾದ ಋಷಿಗಳು ಹೇಳಿದಪ್ರಕಾರದ ಫಲಪ್ರಾಪ್ತಿಗಾಗಿ ಇಂಥ ಗೋತ್ರದಲ್ಲಿ ಹುಟ್ಟಿದ ಶ್ರೀಕರವಾದ ಈ ಹೆಸರುಳ್ಳ ನಾನು ಬಿಟ್ಟಿರುವೆನು ಎನ್ನಬೇಕು.

೭೦-೭೪. ಬಳಿಕ ಮಹೋತ್ಸವವನ್ನು ನೆರವೇರಿಸಿದ ಮೇಲೆ ಕೈಮುಗಿದು ಕೊಂಡು ಮುಂದೆ ಹೇಳುವ ಅರ್ಥವುಳ್ಳ ಮಂತ್ರವನ್ನು ಹೇಳಬೇಕು. "ಈ ತೋಟದ ಮರದ ತುದಿಯಿಂದ ಬಿದ್ದವನಿಗೆ ಅಥವಾ ಹತ್ತುತ್ತಿರುವಾಗ ಮರದಿಂದ ಜಾರಿಬಿದ್ದವ

ಮರಣೇ ಚಾಸ್ಥಿಭಂಗೇ ವಾ ಕರ್ತಾ ಪಾಪೈರ್ನ ಲಿಪ್ಯತೇ ।
ವಜ್ರಘಾತಾದಿದೋಷೇಣ ಮ್ರಿಯಂತೇ ತರವೋ ಯದಾ ॥ ೭೧ ॥

ತದ್ದೋಷಶಮನಾರ್ಥಾಯ ತಸ್ಯಾಪ್ಯೇತತ್ಪ್ರತಿಷ್ಠಿತಂ ।
ಮಧ್ಯೇ ಯೂಪಂ ಸಮಾರೋಪ್ಯ ಚತುಷ್ಕೋಣೇಪಿ ಯತ್ನತಃ ॥ ೭೨ ॥

ಮಧುಲಾಜಾಕ್ಷಕಂ ದದ್ಯಾದಂಜನಂ ಮಾಲ್ಯಮೇವ ಚ ।
ನಿಶಾಸೂತ್ರೇಣ ಸಂವೇಷ್ಟ್ಯ ಕದಲೀವಿಟಪಂ ನ್ಯಸೇತ್ ॥ ೭೩ ॥

ವೇಷ್ಟಯೇತ್ಕ್ಷೀರಧಾರಾಂ ಚ ಪಾತಯೇದ್ಘೃತಧಾರಯಾ ।
ತೋಯಾನ್ವಿತಂ ಗುಚ್ಛಯುಕ್ತಂ ವೇಷ್ಟಯೇತ್ಸ್ವಗೃಹಂ ವ್ರಜೇತ್ ॥೭೪॥

ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ
ದ್ವಿತೀಯೋಽಧ್ಯಾಯಃ.

---

ನಿಗೆ ಮರಣವಾದರೂ ಅಥವಾ ಮೂಳೆ ಮುರಿದುಹೋದರೂ ಮರವನ್ನು ಬೆಳೆಯಿಸಿದವನಿಗೆ ಯಾವ ದೋಷವೂ ಇದರಿಂದ ಉಂಟಾಗದೆ ಇರಲಿ; ಸಿಡಿಲು ಬಡಿಯುವುದು ಮುಂತಾದ ದೋಷದಿಂದ ಮರಗಳು ನಾಶವಾಗುವುದಾದರೆ ಈ ಪ್ರತಿಷ್ಠಾಕಾರ್ಯವನ್ನು ಮಾಡಿದುದರಿಂದ ಆ ದೋಷ ಪರಿಹಾರವಾಗಲಿ" ಪ್ರತಿಷ್ಠೆಮಾಡಿದ ಗುರುಶಿಗಾಗಿ ತೋಟದ ನಡುವೆಯೂ ನಾಲ್ಕು ಮೂಲೆಗಳಲ್ಲಿಯೂ ಯೂಪಸ್ತಂಭವನ್ನು ನೆಟ್ಟು ಜೇನು, ಅರಳು, ಮಂತ್ರಾಕ್ಷತೆ, ಅಂಜನ, (ಕಾಡಿಗೆ) ಹೂ ಇವುಗಳಿಂದ ಅದನ್ನು ಪೂಜಿಸಿ, ಅರಿಸಿನದ ದಾರವನ್ನು ಸುತ್ತಿ, ಬಾಳೆಯಕಂಬವನ್ನು ಕಟ್ಟಬೇಕು. ಹಾಲು, ತುಪ್ಪ, ನೀರು ಇವುಗಳ ಧಾರೆಯನ್ನು ಆ ಯೂಪಗಳ ಸುತ್ತಲೂ ಹನಿಸಿ, ಚಿಗುರು ಮತ್ತು ಹೂಗೊಂಚಲುಗಳನ್ನು ಅದಕ್ಕೆ ಕಟ್ಟಿ ಅಲಂಕರಿಸಿ ಬಳಿಕ ತನ್ನ ಮನೆಗೆ ಹೋಗಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯ ಭಾಗದಲ್ಲಿ
ಎರಡನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ತೃತೀಯಭಾಗೇ

## ತೃತೀಯೋಽಧ್ಯಾಯಃ

---

॥ ಸೂತ ಉವಾಚ ॥

ಕ್ಷುದ್ರಾರಾಮಪ್ರತಿಷ್ಠಾಂ ಚ ವಕ್ಷ್ಯೇ ವೈ ದ್ವಿಜಸತ್ತಮಾಃ ।
ಅಮಂಡಲೇ ಶುಭೇ ಸ್ಥಾನೇ ದ್ವಿಹಸ್ತೇಽಪ್ಯಥ ಸ್ಥಂಡಿಲೇ ॥ ೧ ॥

ಸ್ಥಾಪಯೇತ್ಕಲಶಂ ತತ್ರ ವಿಷ್ಣುಂ ಸೋಮಂ ಸಮರ್ಚಯೇತ್ ।
ಆಚಾರ್ಯಮಾತ್ರಂ ವರಯೇನ್ನಿಶಾಸೂತ್ರೈಃ ಪ್ರವೇಷ್ಟಯೇತ್ ॥ ೨ ॥

ವೃಕ್ಷಾನ್ಮಾಲ್ಯೈರಲಂಕೃತ್ಯ ಭೂಷಯೇದ್ಭೂಷಣಾದಿನಾ ।
ದೋಹದಂ ಚ ತತೋ ದದ್ಯಾತ್ಸ್ಥಾಪಯೇಚ್ಛ್ರುತಧಾರಯಾತ ॥ ೩ ॥

---

### ಮೂರನೆಯ ಅಧ್ಯಾಯ

೧=೩. ಸೂತಮುನಿವರ್ಯನು ಹೇಳುತ್ತಾನೆ—ಎಲೈ ಬ್ರಾಹ್ಮಣಶ್ರೇಷ್ಠರೇ! ಚಿಕ್ಕತೋಟದ ಪ್ರತಿಷ್ಠೆಯ ವಿಷಯವನ್ನು ಹೇಳುವೆನು ಕೇಳಿರಿ. ಮಂಡಲವನ್ನು ರಚಿಸದೆ ಇರುವ ಶುಭಕರವಾದ ಸ್ಥಳದಲ್ಲಿ, ಎಂದರೆ ಎರಡುಮೊಳ ವಿಸ್ತಾರವಾದ ನೆಲದಲ್ಲಿ ಕಲಶವನ್ನು ಸ್ಥಾಪಿಸಿ ಆ ಕಲಶದಲ್ಲಿ ವಿಷ್ಣುವನ್ನೂ, ಸೋಮನನ್ನೂ ಪೂಜಿಸಬೇಕು. ಈ ಕಾರ್ಯದಲ್ಲಿ ಒಬ್ಬ ಆಚಾರ್ಯನನ್ನು ಮಾತ್ರ ವರಣಮಾಡಬೇಕು. ಅರಿಸಿನದ ದಾರವನ್ನು ಮರಗಳಿಗೆ ಸುತ್ತಿ ಕಟ್ಟಿ, ಆಭರಣ ಮತ್ತು ಹೂಗಳಿಂದ ಅಲಂಕರಿಸಿ, ಮರಗಳಿಗೆ ದೋಹದ ಮಾಡುವುದಕ್ಕಾಗಿ ಓಷಧಿಯ ನೀರನ್ನು ಸುರಿದು ಪ್ರತಿಷ್ಠೆ ಮಾಡಿಸುತ್ತ ಜಲಧಾರೆಯನ್ನು ಹನಿಸಬೇಕು.

**ಭೋಜಯೇತ್ಪಂಚ ವಿಪ್ರಾನ್ವಿ ಪುರತಸ್ತಾಂ ವಿಶೇಷಯೇತ್ ।**
**ಕರ್ಣವೇಧಂ ತತಃ ಕೃತ್ವಾ ಉತ್ಸೃಜೇದ್ವಾಕ್ಯಪೂರ್ವಕಂ ॥ ೪ ॥**

**ದದ್ಯಾದ್ಯೂಪಂ ಮಧ್ಯದೇಶೇ ರೋಪಯೇತ್ಕದಲೀಂ ತತಃ ।**
**ರಂಭಾಶ್ಚ ರೋಪಯೇದ್ದಿಕ್ಷು ಸ್ಥಾಲೀಪಾಕವಿಧಾನತಃ ॥ ೫ ॥**

**ಅಷ್ಟಾವಷ್ಟೌ ಚ ಜುಹುಯಾದನ್ಯೇಷಾಂ ಚ ಘೃತೇನ ತು ।**
**ಏಕೈಕಾಮಾಹುತಿಂ ದದ್ಯಾತ್ಸ್ವಿಷ್ಟಕೃತ್ತದನಂತರಂ ॥ ೬ ॥**

**ದಕ್ಷಿಣಾಂ ಚ ತತೋ ದದ್ಯಾತ್ಪೂರ್ಣಾಂ ದತ್ವಾಹುತಿಂ ವ್ರಜೇತ್ ।**
**ಏವಂ ಕರೋತಿ ಯೋ ಮರ್ತ್ಯಃ ಸರ್ವಪುಣ್ಯಫಲಂ ಭಜೇತ್ ॥ ೭ ॥**

**ಏಕಾದಿವೃಕ್ಷಂ ವೃಕ್ಷಾಣಾಂ ವಿಧಿಂ ವಕ್ಷ್ಯೇ ದ್ವಿಜೋತ್ತಮಾಃ ।**
**ಸಮುತ್ಸೃಜ್ಯ ತತೋ ಯೂಪಂ ಕರ್ಮಣಾ ಸಹ ಧರ್ಮವಿತ್ ॥ ೮ ॥**

**ವೃಕ್ಷಮೂಲೇ ಯಜೇದ್ಧರ್ಮಂ ಪೃಥಿವೀಂ ಚ ವಿಶಂ ತಥಾ ।**
**ದಿಗೀಶಾಂಶ್ಚ ತಥಾ ಯಕ್ಷನಾಚಾರ್ಯಂ ತೋಷಯೇತ್ತತಃ ॥ ೯ ॥**

---

೪-೭. ಅನಂತರ ಐದು ಜನ ಬ್ರಾಹ್ಮಣರಿಗೆ ಭೋಜನ ಮಾಡಿಸಿ, ಗಿಡಕ್ಕೆ ಕರ್ಣವೇಧವನ್ನು ಮಾಡಿ, ಹಿಂದಿನ ಅಧ್ಯಾಯದಲ್ಲಿ ಹೇಳಿದಂತೆ ಉತ್ಸರ್ಜನ ವಾಕ್ಯವನ್ನು ಹೇಳಿ ಎಲ್ಲರ ಪ್ರಯೋಜನಕ್ಕಾಗಿ ತೋಟವನ್ನು ಬಿಡಬೇಕು. ನಡುವೆ ಯೂಪವನ್ನು ನೆಟ್ಟು ಬಾಳೆಯ ಕಂಬವನ್ನು ಕಟ್ಟಬೇಕು. ಅಲ್ಲದೆ ನಾಲ್ಕು ದಿಕ್ಕುಗಳಲ್ಲಿಯೂ ಬಾಳೆಯ ಕಂಬಗಳನ್ನು ನೆಡಬೇಕು. ಹೋಮಪಕ್ಷದಲ್ಲಿ ಸ್ಥಾಲೀಪಾಕವನ್ನು ಮಾಡಿ ಪ್ರಧಾನ ದೇವತೆಗಳನ್ನುದ್ದೇಶಿಸಿ ಎಂಟೆಂಟು ಹೋಮಗಳನ್ನೂ ಮಿಕ್ಕ ದೇವತೆಗಳಿಗೆ ಒಂದೊಂದು ಆಜ್ಯಾಹುತಿ ಹೋಮವನ್ನೂ ಮಾಡಿದಮೇಲೆ ಸ್ವಿಷ್ಟಕೃತ್ ಹೋಮವನ್ನು ಮಾಡಬೇಕು. ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ಪೂರ್ಣಾಹುತಿ ಹೋಮವನ್ನು ಮಾಡಿ ಅನಂತರ ಮನೆಗೆ ಹೋಗಬೇಕು.

೮-೧೦ ಒಂದೇ ವೃಕ್ಷವನ್ನೋ ಅಥವಾ ಅನೇಕ ವೃಕ್ಷಗಳನ್ನೋ ಸಕಲಜನರ ಪ್ರಯೋಜನಾರ್ಥವಾಗಿ ಬಿಡುವಾಗ ಆಚರಿಸಬೇಕಾದ ವಿಧಾನವನ್ನು ಹೇಳುತ್ತೇನೆ. ಪತಿಷ್ಠಾವೃಕ್ಷದೊಡನೆ ಯೂಪಸ್ತಂಭವನ್ನೂ ನೆಟ್ಟು, ಗಿಡದ ಬುಡದಲ್ಲಿ ಧರ್ಮ, ಭೂದೇವಿ, ದಿಕ್ಪಾಲಕರು, ಯಕ್ಷರು, ಇವರನ್ನೆಲ್ಲಾ ಪೂಜಿಸಿ ಆಚಾರ್ಯನಿಗೆ ಗೋ

ಧೇನುಂ ಚ ದಕ್ಷಿಣಾಂ ದದ್ಯಾದ್ದೋಹನಂ ವೃಕ್ಷಪೂಜನಂ ।
ಕೃತ್ವಾ ಸಮ್ಯಗ್ವಿಧಾನೇನ ಸವಿತ್ರೇಽರ್ಘ್ಯಂ ನಿವೇದಯೇತ್ ॥ ೧೦ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ
ತೃತೀಯೋಽಧ್ಯಾಯಃ.



---

ವನ್ನೂ ದಕ್ಷಿಣೆಯನ್ನೂ ಕೊಟ್ಟು, ಮರಗಳ ಬುಡಕ್ಕೆ ದೋಹದಾರ್ಥವಾಗಿ ಓಷಧಿಗಳ ರಸವನ್ನು ಸುರಿದು ಆ ಮರಗಳಿಗೆಲ್ಲಾ ಪೂಜೆಯನ್ನು ಮಾಡಿ ವಿಧಿಗನುಸಾರವಾಗಿ ಸೂರ್ಯನಿಗೆ ಅರ್ಘ್ಯವನ್ನು ಕೊಡಬೇಕು.

ಇಲ್ಲಿಗೆ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯ ಭಾಗದಲ್ಲಿ
ಮೂರನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ತೃತೀಯಭಾಗೇ
## ಚತುರ್ಥೋಽಧ್ಯಾಯಃ

---

॥ ಸೂತ ಉವಾಚ ॥

ಅಥಾಶ್ವತ್ಥಪ್ರತಿಷ್ಠಾಯಾಂ ಮೂಲೇ ಬಾಹುಪ್ರಮಾಣಕೇ ।
ಸ್ಥಂಡಿಲಂ ಕಾರಯೇತ್ತತ್ರ ಚಂದನೇನೋಕ್ಷಿತಂ ತಥಾ ॥ ೧ ॥

ಪದ್ಮಂ ಪ್ರಕಲ್ಪಯೇತ್ತತ್ರ ಸಾಮಾನಾರ್ಘ್ಯಂ ವಿಧಾಯ ಚ ।
ಪೂರ್ವೇದ್ಯೂ ರಾತ್ರಿಸಮಯೇ ತದ್ವಿಷ್ಣೋರಿತಿ ವೈ ಋಚಾ ॥ ೨ ॥

ಸ್ಥಾಪಯೇದ್ವಾರಿಣಾಪೂರ್ಣಂ ಕಯಾನೇತಿ ಚ ಗಂಧಕಂ ।
ಗಂಧದ್ವಾರೇತಿ ತೈಲೇನ ಶ್ರೀಶ್ಚತೇತಿ ಚ ಚಂದನಂ ॥ ೩ ॥

---

### ನಾಲ್ಕನೆಯ ಅಧ್ಯಾಯ

೧-೫. ಸೂತಮುನಿವರ್ಯನು ಮುಂದುವರಿಸಿ ಹೇಳುತ್ತಾನೆ.—ಅಶ್ವತ್ಥಪ್ರತಿಷ್ಠೆಯನ್ನು ಮಾಡುವ ಸಂದರ್ಭದಲ್ಲಿ ಆ ಮರದ ಬುಡದಲ್ಲಿ ಒಂದು ತೋಳುದ್ದ ಮತ್ತು ಅಷ್ಟೇ ಅಗಲವಾದ ನೆಲದಲ್ಲಿ ಶ್ರೀಗಂಧದ ನೀರನ್ನು ಚುಮುಕಿಸಿ, ಆಮೇಲೆ ಅಲ್ಲಿ ಒಂದು ಪದ್ಮಾಕೃತಿಯನ್ನು ಬರೆದು ಸಾಮಾನ್ಯ ರೀತಿಯಲ್ಲಿ ಅರ್ಘ್ಯವನ್ನು ಕೊಡಬೇಕು ಹಿಂದಿನ ರಾತ್ರಿಯಲ್ಲಿ ಕಲಶವನ್ನು ಸ್ಥಾಪಿಸಿ 'ತದ್ವಿಷ್ಣೋಃ' ಎಂಬ ಮಂತ್ರ ಹೇಳಿ ನೀರು ತಂಬಬೇಕು. 'ಕಯಾನ' ಎಂಬ ಮಂತ್ರದಿಂದ ಗಂಧಕವನ್ನೂ 'ಗಂಧದ್ವಾರಾಂ' ಎಂಬ ಮಂತ್ರದಿಂದ ಎಣ್ಣೆಯನ್ನೂ 'ಶ್ರೀಶ್ಚತೇ' ಎಂಬ ಮಂತ್ರದಿಂದ ಶ್ರೀಗಂಧವನ್ನೂ ಗರಿಕೆಯನ್ನೂ ಅಕ್ಷತೆಯನ್ನೂ ಕಲಶದೊಳಕ್ಕೆ ಹಾಕಿ ಕಲ್ಪೋಕ್ತವಾಗಿ ಪೂಜೆಮಾಡಿರ

ದದ್ಯಾದ್ದೂರ್ವಾಕ್ಷತಂ ಕಲ್ಪೇ ಬ್ರಾಹ್ಮಣತ್ರಯಭೋಜನಂ ।
ಕಾರಯೇತ್ಸಿತಸೂತ್ರೈಶ್ಚ ವೇಷ್ಟಯೇಚ್ಚಂದನೋಕ್ಷಿತೈಃ ॥ ೪ ॥

ಕುಂಭೇ ವಿನಾಯಕಂ ಪೂಜ್ಯ ಬ್ರಹ್ಮಾಣಂ ಚ ಪರೇ ಘಟೇ ।
ಸ್ವದಿಕ್ಷು ದಿಕ್ಪತೀಂಶ್ಚೈವ ವೃಕ್ಷಮೂಲೇ ನವಗ್ರಹಾನ್ ॥ ೫ ॥

ಮಂಡಲೇ ಶಿವಮಭ್ಯರ್ಚ್ಯ ಪೀಠಪೂಜಾ ಪುರಃಸರಂ ।
ಅಥ ಧ್ಯಾನಂ ಪ್ರವಕ್ಷ್ಯಾಮಿ ಶ್ವೇತಂ ವೃಷಭವೋವ ಚ ॥ ೬ ॥

ದ್ವಿಭುಜಂ ಶೂಲಹಸ್ತಂ ಚ ಸರ್ವಾಭರಣಸಂಯುತಂ ।
ಆರೋಪಯೇತ್ಸ್ವಸಾಮರ್ಥ್ಯಾದ್ಭೂತಶುದ್ಧಿಂ ಸಮಾಚರೇತ್ ॥ ೭ ॥

ತತೋಽರ್ಘ್ಯಪಾತ್ರಂ ಕೃತ್ವಾ ತು ಪೀಠಪೂಜಾಂ ಸಮಾಚರೇತ್ ।
ಗಣೇಶಂ ಗುರುಪಾದಂ ಚ ಜಯಂ ಭದ್ರಂ ಸಮಾಹಿತಃ ॥ ೮ ॥

ಮಧ್ಯೇ ಆಧಾರಶಕ್ತಿಂ ಚ ಕುರ್ಮಾನಂತೌ ಸಪದ್ಮಕೌ ।
ಚಂದ್ರಸೂರ್ಯಾಗ್ನಿಕಾದೀನಾಂ ಮಂಡಲಾನಿ ಕ್ರಮಾದ್ಯಜೇತ್ ॥ ೯ ॥

---

ಬೇಕು. ತ್ರಿಮೂರ್ತಿಪ್ರೀತಿಗಾಗಿ ಮೂರು ಜನ ಬ್ರಾಹ್ಮಣರಿಗೆ ಭೋಜನಮಾಡಿಸ ಬೇಕು. ಆಮೇಲೆ ಗಂಧದ ನೀರಿನಿಂದ ನೆನೆಸಿದ ಬಿಳಿಯ ದಾರವನ್ನು ಮರಕ್ಕೆ ಸುತ್ತ ಬೇಕು.

೫-೯. ಒಂದು ಕಲಶದಲ್ಲಿ ವಿನಾಯಕನನ್ನೂ ಮತ್ತೊಂದರಲ್ಲಿ ಬ್ರಹ್ಮನನ್ನೂ ಪೂಜಿಸಿ, ಎಂಟು ದಿಕ್ಕುಗಳಲ್ಲಿಯೂ ದಿಕ್ಪಾಲಕರುಗಳನ್ನೂ, ಮರದ ಬುಡದಲ್ಲಿ ನವ ಗ್ರಹಗಳನ್ನೂ, ಮಂಡಲದಲ್ಲಿ ಶಿವನನ್ನೂ ಆವಾಹಿಸಬೇಕು. ಪೀಠಪೂಜಾದಿಯಾಗಿ ಆರಂಭಿಸಿ ಪೂಜಿಸಬೇಕು. ಶಿವನನ್ನು ಧ್ಯಾನಮಾಡುವನಾಗಿ ಬಿಳಿಯ ಎತ್ತಿನಮೇಲೆ ಕುಳಿತಿರುವವನೂ, ಎರಡು ತೋಳುಗಳುಳ್ಳವನೂ, ಕೈಯಲ್ಲಿ ತ್ರಿಶೂಲವನ್ನು ಹಿಡಿದು ಕೊಂಡಿರುವವನೂ, ಸಮಸ್ತ ಆಭರಣಗಳಿಂದ ಅಲಂಕಾರ ಮಾಡಿಕೊಂಡಿರುವವನೂ ಆದವನೆಂದು ಶಿವನನ್ನು ಧ್ಯಾನಿಸಿ ಆ ಶಿವನ ಪ್ರತಿಮೆಯನ್ನಿಟ್ಟು ಭೂತ ಶುದ್ಧಿ, ಪ್ರತಿಮಾ ಶುದ್ಧಿ, ಮುಂತಾದುವನ್ನು ಮಾಡಿ, ಅರ್ಘ್ಯ ಪಾತ್ರೆಯನ್ನಿಟ್ಟು ಪೀಠ ಪೂಜೆ ಯನ್ನು ಮಾಡಬೇಕು. ಕ್ರಮವಾಗಿ ಗಣೇಶನನ್ನೂ ಗುರುಪಾದವನ್ನೂ ಜಯ ಭದ್ರ ಇವರನ್ನೂ ಪೂಜಿಸಿ, ನಡುವೆ ಆಧಾರಶಕ್ತಿ ಪದ್ಮಸಹಿತವಾದ ಕೂರ್ಮ, ಅನಂತ, ಚಂದ್ರಮಂಡಲ, ಸೂರ್ಯಮಂಡಲ, ವಹ್ನಿಮಂಡಲ, ಇವುಗಳನ್ನು ಪೂಜಿಸಬೇಕು.

**ಪುನಃ ಪಾತ್ರಾಂತರಸ್ಥಂ ಚ ಗೃಹೀತ್ವಾ ಕುಸುಮಂ ಬುಧಃ ।**
**ಪಾಣಿಕಚ್ಛಪಿಕಾಂ ಕೃತ್ವಾ ಧ್ಯಾಯೇದ್ವೈ ವರುಣಂ ತಥಾ ॥ ೧೦ ॥**

**ಪೂರ್ವವಚ್ಚ ವಿಧಾನೇನ ದದ್ಯಾತ್ಪಾದ್ಯಾದಿಕಂ ತ್ರಯಂ ।**
**ಮಧುಪರ್ಕಂ ಚಾಸನಂ ಚ ಪ್ರಚ್ಛೇಚ್ಚ ಸ್ವಾಗತಂ ಪುನಃ ॥ ೧೧ ॥**

**ಮುದ್ರಾಂ ಪ್ರದರ್ಶ್ಯ ವಿಧಿವದಂಗಪೂಜಾಂ ಸಮಾಚರೇತ್ ।**
**ಪೂರ್ವಾದಿಪತ್ರೇ ಇಂದ್ರಾದೀನ್ ಬ್ರಹ್ಮಾಣಂ ಮಧ್ಯತೋ ಯಜೇತ್ ॥ ೧೨ ॥**

**ಅನಂತಂ ಪುರತಶ್ಚೈವ ತೇಷಾಮಸ್ತ್ರಾಣಿ ತದ್ಬಹಿಃ ।**
**ಮಧ್ಯೇ ತೋಯಾಧಿಪಂ ರುದ್ರಂ ಶಾಂತಂ ಚೈವ ಪ್ರಶಾಂತಕಂ ॥ ೧೩ ॥**

**ಭೂಸ್ತತ್ವಂ ಚ ಭುವಸ್ತತ್ವಂ ಸ್ವಸ್ತತ್ವಾದಿ ಚ ತತ್ವಕಂ ।**
**ಕಾಮಂ ಧರ್ಮಮಧರ್ಮಂ ಚ ದಿಕ್ಷು ನಾರಾಯಣಂ ಶಿವಂ ॥ ೧೪ ॥**

**ನೈಋತೇ ಚ ಯಜೇದ್ದುರ್ಗಾಂ ಪಾರ್ಶ್ವಯೋಶ್ಚ ಶತಕ್ರತುಂ ।**
**ವಿನಾಯಕಂ ಚ ವಿಷ್ಣುಂ ಚ ಗಂಗಾಂ ಪೃಥಿವಿಷಷ್ಟಿಕಂ ॥ ೧೫ ॥**

**ಷೋಡಶೇನೋಪಚಾರೇಣ ಪೂಜಯೇಚ್ಚ ವಿಶೇಷತಃ ।**
**ಮಂಡಲಸ್ಯೋತ್ತರೇ ಭಾಗೇ ನಾಗರೂಪಮನಂತಕಂ ॥ ೧೬ ॥**

---

೧೦-೧೬. ಆಮೇಲೆ ಬೇರೆ ಪಾತ್ರೆಯಲ್ಲಿರುವ ಹೂವನ್ನು ತೆಗೆದುಕೊಂಡು ಕೂರ್ಮಮುದ್ರೆಯನ್ನು ಮಾಡಿ, ವರುಣನನ್ನು ಧ್ಯಾನಿಸಿ ಹಿಂದಿನಂತೆ ಮೂರು ಪಾತ್ರೆಗಳನ್ನು ಕೊಟ್ಟು, ಸ್ವಾಗತವನ್ನು ಬಯಸಿ, ಆಸನವನ್ನೂ ಮಧುಪರ್ಕವನ್ನೂ ಸಮರ್ಪಿಸಬೇಕು. ವಿಧಿಗನುಸಾರವಾಗಿ ಪೂಜಾಮುದ್ರೆಯನ್ನು ಪ್ರದರ್ಶಿಸಿ ಅಂಗದೇವತಾ ಪೂಜೆಯನ್ನು ಮಾಡಬೇಕು. ಪೂರ್ವಾದಿ ಪತ್ರಗಳಲ್ಲಿ ಇಂದ್ರಾದಿ ದೇವತೆಗಳನ್ನೂ ಮಧ್ಯದಲ್ಲಿ ಬ್ರಹ್ಮನನ್ನೂ ಪೂಜಿಸಬೇಕು. ಮುಂಭಾಗದಲ್ಲಿ ಅನಂತನನ್ನೂ ಅದರ ಹೊರಭಾಗದಲ್ಲಿ ಆ ದೇವತೆಗಳ ಅಸ್ತ್ರಗಳನ್ನೂ ಪೂಜಿಸಬೇಕು. ನಡುವೆ ಶಾಂತನೂ ಜಲಾಧಿಪತಿಯೂ ಆದ ವರುಣನನ್ನೂ ಪ್ರಶಾಂತನಾದ ರುದ್ರನನ್ನೂ ಪೂಜಿಸಬೇಕು. ಬಳಿಕ ಭೂಸ್ತತ್ವವನ್ನೂ, ಭುವಸ್ತತ್ವವನ್ನೂ, ಸ್ವಸ್ತತ್ವವನ್ನೂ, ಕಾಮನನ್ನೂ, ಧರ್ಮವನ್ನೂ, ದಿಕ್ಕುಗಳಲ್ಲಿ ನಾರಾಯಣನನ್ನೂ, ಶಿವನನ್ನೂ, ನೈರುತ್ಯದಲ್ಲಿ ದುರ್ಗೆಯನ್ನೂ ಪಾರ್ಶ್ವಗಳಲ್ಲಿ ದೇವೇಂದ್ರನನ್ನೂ ವಿನಾಯಕ ವಿಷ್ಣು ಗಂಗೆ ಭೂಮಿ ಇವರುಗಳನ್ನೂ ವಿಶೇಷ ರೀತಿಯ ಷೋಡಶೋಪಚಾರಗಳಿಂದ ಪೂಜಿಸಬೇಕು.

ಪಂಚಕೃಷ್ಣಾಲಕೈಃ ಕುರ್ಯಾದ್ಬ್ರಹತ್ವರ್ವಪ್ರಮಾಣಕಂ ।
ಆರೋಪಯೇಚ್ಚಾಕ್ಷತಾದ್ಯೈಃ ಶ್ವೇತಚಂದನಪುಷ್ಪಕೈಃ ॥ ೧೭ ॥

ಪೂಜಯೇತ್ಪರಯಾ ಭಕ್ತ್ಯಾ ಅಗ್ನಿಕಾರ್ಯಮಥಾಚರೇತ್ ।
ವರುಣಂ ಜುಹುಯಾತ್ಪೂರ್ವಂ ಮಧುನಾ ಪಾಯಸೇನ ವಾ ॥ ೧೮ ॥

ತಿಲಾಕ್ಷತೈರ್ವಾ ಆಜ್ಯೈರ್ವಾ ತ್ರಿಮಧ್ವಕ್ತೈರಥಾಪಿ ವಾ ।
ಅಷ್ಟೋತ್ತರಶತಂ ಕುರ್ಯಾದ್ದಿಗೀಶಾನಾಂ ಘೃತೇನ ತು ॥ ೧೯ ॥

ಏಕೈಕಾಮಾಹುತಿಂ ದದ್ಯಾತ್ಪುಷ್ಪೈಸ್ತಿಲಘೃತೇನ ಚ ।
ನಾರಾಯಣಂ ಶಿವಂ ದುರ್ಗಾಂ ಗಣೇಶಂ ಚ ಗ್ರಹಾನ್ನಿಶಿ ॥ ೨೦ ॥

ಅಷ್ಟಾವಷ್ಟೌ ಚ ಜುಹುಯಾದ್ಘೃತೈರೇಕಾಹುತಿರ್ಭವೇತ್ ।
ಬ್ರಹ್ಮಯುಧ್ಯಾನಮಂತ್ರೇಣ ಬ್ರಹ್ಮಾಣಂ ಪಾಯಸೇನ ತು ॥ ೨೧ ॥

---

೧೭. ಮಂಡಲದ ಉತ್ತರಭಾಗದಲ್ಲಿ ಕಪ್ಪಾದ ಐದು ಫಣಗಳಿಂದ ಕೂಡಿರುವಂತೆ ಬೆರಳಿನ ಗಿಣ್ಣಿನಲ್ಲಿರುವ ಗೆರೆಯ ಪ್ರಮಾಣದಲ್ಲಿ ನಾಗರೂಪವಾದ ಅನಂತನನ್ನು ಮಾಡಿ ಅತ್ಯಂತ ಭಕ್ತಿಯುಳ್ಳವನಾಗಿ ಅಕ್ಷತೆ, ಬಿಳಿಯಗಂಧ, ಹೂ ಮುಂತಾದುವುಗಳಿಂದ ಪೂಜಿಸಬೇಕು.

೧೮-೨೦. ಆ ರಾತ್ರಿ ಹೋಮಕಾರ್ಯವನ್ನು ಆರಂಭಿಸಬೇಕು. ಮೊದಲು ಜೇನುತುಪ್ಪದಿಂದಲಾಗಲಿ, ಪಾಯಸದಿಂದಲಾಗಲಿ, ಎಳ್ಳು ಮತ್ತು ಅಕ್ಷತೆ ಇವುಗಳಿಂದಲಾಗಲಿ, ತುಪ್ಪದಿಂದಲಾಗಲಿ ವರುಣನಿಗೆ ನೂರೆಂಟು ಆಹುತಿಗಳನ್ನು ಕೊಡಬೇಕು. ದಿಕ್ಪಾಲಕರಿಗೆ ಹೂ, ಎಳ್ಳು, ತುಪ್ಪ ಇವುಗಳಿಂದ ಕೂಡಿದ ಒಂದೊಂದು ಹೋಮವನ್ನು ಮಾಡಬೇಕು. ನಾರಾಯಣ, ಶಿವ, ದುರ್ಗಾ, ಗಣೇಶ, ಆದಿತ್ಯಾದಿ ನವಗ್ರಹಗಳು ಈ ದೇವತೆಗಳಿಗೆ ತುಪ್ಪ ಒಂದರಿಂದಲೇ ಎಂಟೆಂಟು ಹೋಮಗಳನ್ನು ಮಾಡಬೇಕು.

೨೧-೨೨. 'ಬ್ರಹ್ಮಯುಧ್ಯಾನಂ' ಎಂಬ ಮಂತ್ರದಿಂದ ಬ್ರಹ್ಮನನ್ನು ಉದ್ದೇಶಿಸಿ ಪಾಯಸದ ಆಹುತಿಯಿಂದ ಒಂದು ಹೋಮವನ್ನು ಮಾಡಬೇಕು. ಅಥವಾ 'ಆಪೋಹಿಷ್ಠಾ' ಎಂಬ ಮಂತ್ರದಿಂದ ಮೂರು ಹೋಮವನ್ನು ಮಾಡಬಹುದು. ಆ ಮೇಲೆ

**ಏಕಾಹುತಿಂ ತತೋ ದದ್ಯಾದಾಪ್ಪೋಹಿಷ್ಠೇತಿ ವಾ ತ್ರಿಭಿಃ ।**
**ತತೋ ವರುಣಮುದ್ದಿಶ್ಯ ದದ್ಯಾದಾಜ್ಯಾಹುತಿತ್ರಯಂ ॥ ೨೨ ॥**

**ಇಮಂವರುಣಂ ಇತಿ ವಾ ತದ್ವರೋಮಾ ಋಚಾ ಪುನಃ ।**
**ವರುಣಸ್ಯೋತ್ತಂಭನಮಸೀತಿ ಯೇನಾಪಾವಕ ಏವ ಚ ॥ ೨೩ ॥**

**ವಾತಸ್ಯಯಮಿತಿ ಪುನಃ ಪಂಚವರ್ಣಂ ಯಥಾಕ್ರಮಾತ್ ।**
**ತತೋ ವರುಣಮುದ್ದಿಶ್ಯ ಘೃತೇನ ಚ ಗುಡೈಃ ಸಹ ॥ ೨೪ ॥**

**ತತಃ ಸ್ವಿಷ್ಟಕೃತೇ ದದ್ಯಾದ್ಬಲಿಂ ದದ್ಯಾದನುಕ್ರಮಾತ್ ।**
**ಮಧ್ವಾಜ್ಯಪಾಯಸಂ ದದ್ಯಾದ್ವರುಣಾಯ ವಿಶೇಷತಃ ॥ ೨೫ ॥**

**ಯವಕ್ಷೀರಂ ದಿಗೀಶೇಭ್ಯೋ ಹ್ಯನ್ಯೇಭ್ಯಃ ಪಾಯಸೇನ ತು ।**
**ನಾಗಾಯ ಪಿಷ್ಟಕಂ ದದ್ಯಾಲ್ಲಾಜಾಹೋಮಾಷ್ಟಕಂ ಪುನಃ ॥ ೨೬ ॥**

**ಅನಂತಸ್ಯೋತ್ತರೇ ತೀರೇ ಪದ್ಮಪತ್ರಂ ಪರಿಸ್ತರೇತ್ ।**
**ಅಷ್ಟಾಷ್ಟಾಪದಮಾನೇನ ವರುಣಂ ರಾಜತೇನ ತು ॥ ೨೭ ॥**

---

ವರುಣನನ್ನು ಉದ್ದೇಶಿಸಿ 'ಇಮಂ ಮೇ ವರುಣ' ಎಂಬ ಮಂತ್ರದಿಂದಲಾಗಲಿ, 'ತದ್ವರೋಮಾ' ಎಂಬ ಮಂತ್ರದಿಂದಲಾಗಲೀ ಮೂರು ಆಜ್ಯಹೋಮವನ್ನು ಮಾಡಬೇಕು.

೨೩-೨೬. ಆ ಬಳಿಕ ಕ್ರಮವಾಗಿ 'ಇಮಂ ಮೇ ವರುಣ' 'ತದ್ವರೋಮಾ' 'ವರುಣಸ್ಯೋತ್ತಂಭನಮಸಿ' 'ಯೇನಾಪಾವಕ' 'ವಾತಸ್ಯಯಂ' ಎಂಬ ಐದುಮಂತ್ರಗಳಿಂದ ವರುಣನಿಗೆ ತುಪ್ಪ ಮತ್ತು ಬೆಲ್ಲ ಇವುಗಳ ಆಹುತಿಯಿಂದ ಹೋಮಮಾಡಿ ಬಳಿಕ ಸ್ವಿಷ್ಟಕೃತುಹೋಮವನ್ನು ಮಾಡಬೇಕು. ಬಳಿಕ ಕ್ರಮವಾಗಿ ಜೇನುತುಪ್ಪ, ತುಪ್ಪ, ಪಾಯಸ ಇವುಗಳಿಂದ ವರುಣನಿಗೆ ಬಲಿಯನ್ನು ಸಮರ್ಪಿಸಬೇಕು. ದಿಕ್ಪಾಲಕರಿಗೆ ಯವಧಾನ್ಯ, ಹಾಲು ಇವುಗಳಿಂದಲೂ, ಇತರ ದೇವತೆಗಳಿಗೆ ಪಾಯಸದಿಂದಲೂ, ನಾಗಗಳಿಗೆ ಹಿಟ್ಟು ಮತ್ತು ಅರಳುಗಳಿಂದಲೂ ಬಲಿಯನ್ನು ಸಮರ್ಪಣೆಮಾಡಬೇಕು.

೨೭-೨೯. ಜಲಾಶಯಪ್ರತಿಷ್ಠೆಯ ಸಂದರ್ಭದಲ್ಲಿ ಆ ಭೂಮಿಯ ಉತ್ತರದಿಕ್ಕಿನ ತೀರದಲ್ಲಿ ಪದ್ಮಪತ್ರವನ್ನು ಬರೆದು ಎಂಟು ಅಷ್ಟಾಪದ ಪ್ರಮಾಣದ ಬೆಳ್ಳಿಯ ಪ್ರತಿಮೆ

**ಕುರ್ಯಾತ್ಪೂರ್ವದ್ವಯೇನಾಪಿ ಬಾಣರಕ್ತಿಸುವರ್ಣಕ್ಯೈಃ ।**
**ಕುರ್ಯಾತ್ಪುಷ್ಕರಿಣೀಂ ತತ್ರ ಪೂರ್ವಾರ್ಧೇ ಚತುರಸ್ರಕೇ ॥ ೨೮ ॥**

**ವರುಣಂ ವಿನ್ಯಸೇತ್ತತ್ರ ತಥಾ ಪುಷ್ಕರಿಣೀಮಪಿ ।**
**ವಿಧಿವದ್ವಾಕ್ಯಪೂರ್ವೇಣ ಉತ್ಸೃಜೇಚ್ಚ ಜಲೇಶಯಂ ॥ ೨೯ ॥**

**ಓಂ ಅದ್ಯೇತ್ಯಾದಿ ವಿಷ್ಣುರೂಪಾಯ ವರುಣಾಯ ಶ್ರುತಿಸ್ಮೃತ್ಯಾದ್ಯುಕ್ತ ವೇದವ್ಯಾಸಪ್ರಣೀತಾಗ್ನಿಷ್ಟೋಮ ಫಲಪ್ರಾಪ್ತಯೇ ಪುಷ್ಕರಿಣೀ ಪ್ರತಿಷ್ಠಾ ಕರ್ಮಣಿ ಇಮಾಂ ಪುಷ್ಕರಿಣೀಂ ಸುವರ್ಣರಾಜತಾಂ ಸ್ವಗೃಹ್ಯೋದಿತಾಂ ಸಾಲಂಕಾರಾಂ ಸುಪೂಜಿತಾಂ ಅಮುಕಗೋತ್ರಃ ಶ್ರೀ ಅಮುಕದೇವಶರ್ಮಾ ತುಭ್ಯಮಹಂ ಸಂಪ್ರದದೇ ಇತ್ಯುತ್ಸರ್ಗವಾಕ್ಯಂ ॥**

**ಓಂ ಅದ್ಯೇತ್ಯಾದಿ ಬ್ರಾಹ್ಮಣಮುಖ್ಯೇಭ್ಯಃ ಮಮಾಗ್ನಿಷ್ಟೋಮಾದ್ಯನೇಕಫಲ ಪ್ರಾಪ್ತಯೇ ಇಮಂ ಜಲಾಶಯಂ ವರುಣದೈವತಂ ಸುಪೂಜಿತಂ ಚತುರ್ಮುಖ ಸಹಿತಂ ಚತುಃಸತ್ವಾವಚ್ಛಿನ್ನ ಸ್ನಾನಪಾನಾದ್ಯುಪಭೋಗಾಯ ಅಮುಕಸ**

---

ಯನ್ನು ಮಾಡಬೇಕು. ಐದುರತ್ತೀ ತೂಕ ಚಿನ್ನದಿಂದಲಾಗಲಿ, ಎಂಟು ಅಷ್ಟಾಪದ ಪ್ರಮಾಣ ಬೆಳ್ಳಿಯಿಂದಲಾಗಲಿ, ಪುಷ್ಕರಿಣಿಯನ್ನು (ಕೊಳವನ್ನು) ಮಾಡಿಸಿ, ಚತುರಸ್ರಮಂಡಲದ ಪೂರ್ವಭಾಗದಲ್ಲಿ ವರುಣ ಪ್ರತಿಮೆ ಪುಷ್ಕರಿಣೀ ಪ್ರತಿಮೆಗಳನ್ನಿಟ್ಟು ಪೂಜಿಸಿ ವಿಧಿಗನುಸಾರವಾಗಿ ಈ ವಾಕ್ಯಗಳನ್ನು ಹೇಳುತ್ತಾ ಆ ಎರಡು ಪ್ರತಿಮೆಗಳನ್ನೂ ದಾನಮಾಡಬೇಕು. ಸಂಕಲ್ಪವನ್ನುಚ್ಚರಿಸಿ ಈ ದಿವಸ ವಿಷ್ಣುಸ್ವರೂಪನಾದ ವರುಣಪ್ರೀತಿಗಾಗಿ ವೇದವ್ಯಾಸರಚಿತವಾದ ಶ್ರುತಿಸ್ಮೃತಿ ಮುಂತಾದುವುಗಳಲ್ಲಿ ಹೇಳಿದ ಅಗ್ನಿಷ್ಟೋಮವೆಂಬ ಯಜ್ಞದ ಫಲಪ್ರಾಪ್ತಿಗಾಗಿ ಈ ಪುಷ್ಕರಿಣೀ ಪ್ರತಿಷ್ಠಾ ಕಾರ್ಯದಲ್ಲಿ ಚಿನ್ನ ಮತ್ತು ಬೆಳ್ಳಿಯಿಂದ ಮಾಡಿ ಅಲಂಕರಿಸಿ ಪೂಜೆಮಾಡಿದ ಈ ಪುಷ್ಕರಿಣಿಯನ್ನು ಇಂಥ ಗೋತ್ರದ ಶ್ರೀ ಈ ಹೆಸರುಳ್ಳ ನಾನು ನಿನಗೆ ಕೊಟ್ಟುಬಿಡುವೆನು ಎಂದು ಉತ್ಸರ್ಜನ ಮಾಡಬೇಕು. "ಇದು ದಾನಮಂತ್ರದ ಅರ್ಥ."

'ಓಂ' ಈ ದಿವಸ ಬ್ರಾಹ್ಮಣರೇ ಮುಂತಾದ ಸಮಸ್ತರಿಂದಲೂ ನನಗೆ ಅಗ್ನಿಷ್ಟೋಮವೇ ಮುಂತಾದ ಅನೇಕ ಸತ್ಕರ್ಮಪ್ರಾಪ್ತಿಗೋಸ್ಕರವಾಗಿ ವರುಣದೇವತಾಕವಾಗಿ ಪೂಜಾಯೋಗ್ಯವೆನಿಸಿದುದೂ ಚತುರ್ಮುಖ ಬ್ರಹ್ಮದೇವತಾಸಹಿತವೂ, ಜಲಚರ ಪ್ರಾಣಿಗಳಿಂದ ಕೂಡಿದುದೂ ಆದ ಈ ಜಲಾಶಯವನ್ನು ಸರ್ವರ ಸ್ನಾನಪಾನಾದಿಗಳ

**ಗೋತ್ರಃ ಶ್ರೀ ಅಮುಕದೇವಶರ್ಮಾಽಹಮುತ್ಸೃಜೆ**
**ಇತಿ ಚ ಉತ್ಸರ್ಗವಾಕ್ಯಂ ॥**

**ತತೋ ನೌಕಾಂ ಸಮಾದಾಯ ಮಧ್ಯಾತ್ಕಿಂಚಿದಥೋತ್ತರೇ ।**
**ಜಲಾಶಯಸ್ಯ ಮಧ್ಯಂ ತು ಋತ್ವಿಗ್ಘೋಮಂ ಚರೇತ್ತತಃ ॥ ೩೦ ॥**

**ಪೂರ್ವಾವಸ್ಥಾಯಿನೀಂ ಯಷ್ಟಿಂ ಸಮಾರೋಪ್ಯ ವಿಧಾನತಃ ।**
**ತತೋ ವರುಣಸೂಕ್ತೇನ ವರುಣಂ ರಾಜತೋದ್ಭವಂ ॥**
**ಪುಷ್ಕರಿಣ್ಯಾ ಸಮಂ ತೇನ ನಾಗಯಷ್ಟ್ಯಂತರೇ ಕ್ಷಿಪೇತ್ ॥ ೩೧ ॥**

**ತತ್ರೈವಾನಂತನಾಗಂ ಚ ಮಂತ್ರಮೇತದುದೀರಯೇತ್ ।**
**ಪುಂಡರೀಕದಲಾಭಾಸ ಶುಭರಕ್ತಾಂತಲೋಚನ ॥**
**ಫಣಾಸಹಸ್ರಸಂಯುಕ್ತ ಸುಪ್ರತಿಷ್ಠ ನಮೋಽಸ್ತು ತೇ ॥ ೩೨ ॥**

**ದಕ್ಷಿಣಾಂ ಚ ತತೋ ದದ್ಯಾತ್ತತಃ ಪೂರ್ಣಾಂ ವಿಧಾಯ ಚ ।**
**ಮೋಚಯೇನ್ಮಕರಾನ್ ಗ್ರಾಹಾನ್ ಮೀನ ಕೂರ್ಮಾನ್ ಜಲೇಚರಾನ್ ॥೩೩॥**

---

ಉಪಯೋಗಕ್ಕಾಗಿ ಇಂಥ ಗೋತ್ರದ ಈ ಹೆಸರುಳ್ಳ ನಾನು ಬಿಟ್ಟಿರುವೆನು ಎಂದು ಉತ್ಸರ್ಜನ ಮಾಡಬೇಕು. (ಇಂಥ ಇದು ಜಲಾಶಯಪ್ರತಿಷ್ಠಾ ಉತ್ಸರ್ಜನಮಂತ್ರಾರ್ಥ.)

೩೦-೩೨. ತರುವಾಯ ದೋಣಿಯಲ್ಲಿ ಕುಳಿತು ಜಲಾಶಯದ ನಡುವೆ ಸ್ವಲ್ಪ ಉತ್ತರಕ್ಕೆ ಹೋಗಿ ಆ ಮಧ್ಯಪ್ರದೇಶದಲ್ಲಿ ಋತ್ವಿಜನು ನೀರಿನಲ್ಲಿಯೇ ಹೋಮಮಾಡಬೇಕು. ವಿಧಿಗನುಸಾರವಾಗಿ ಹಿಂದೆಯೇ ಸಿದ್ಧಪಡಿಸಿದ್ದ ಒಂದು ಯಷ್ಟಿಯನ್ನು ಜಲಾಶಯದ ನಡುವೆ ನೆಟ್ಟು, ವರುಣಸೂಕ್ತ ಮಂತ್ರದಿಂದ ಬೆಳ್ಳಿಯ ವರುಣಪ್ರತಿಮೆಯನ್ನು ಪುಷ್ಕರಿಣಿಯ ಪ್ರತಿಮೆಯೊಡನೆ ಜಲಾಶಯದಲ್ಲಿ ನಾಗಯಷ್ಟಿಯ ನಡುವೆ ತೂಗಿಬಿಡಬೇಕು. ಅಲ್ಲಿಯೇ ಅನಂತನೆಂಬ ನಾಗನನ್ನುದ್ದೇಶಿಸಿ "ಕಮಲದಂತೆ ಶುಭಕರವಾದ ಮುಖವುಳ್ಳವನೂ, ಕೊನೆಯಲ್ಲಿ ಕೆಂಪಾದ ಕಣ್ಣುಗಳುಳ್ಳವನೂ, ಸಾವಿರ ಹೆಡೆಗಳಿಂದ ಕೂಡಿದವನೂ, ಮಹಾಕೀರ್ತಿಶಾಲಿಯೂ ಆದ ಅನಂತನೆ! ನಿನಗೆ ನಮಸ್ಕಾರ" ಈ ಅರ್ಥವುಳ್ಳ ಮಂತ್ರವನ್ನು ಹೇಳಬೇಕು.

೩೩-೩೫. ಬಳಿಕ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ಪ್ರತಿಷ್ಠಾಕರ್ಮವನ್ನು ಪೂರೈಸಿ, ಆ ಜಲಾಶಯದೊಳಕ್ಕೆ ಮೊಸಳೆ, ಮೀನು, ಆಮೆ ಮುಂತಾದ ಜಲ

**ಪದ್ಮೋತ್ಪಲಂ ಚ ಶೈವಾಲಂ ಮಂತ್ರನೇವ ಪ್ರಯತ್ನತಃ ।**
**ಪುಷ್ಕರಿಣ್ಯಾಂ ಚ ತ್ರಿಃ ಕುರ್ಯಾತ್ಪಾತಂ ಸರ್ವಪ್ರದಕ್ಷಿಣಾಂ ॥ ೩೪ ॥**

**ಆದಿತ್ಯಾಧ್ಯಾಯಕಂ ಜಪ್ತ್ವಾ ಕ್ಷಿಪೇಲ್ಲಾಜಕಪರ್ದಕಾನ್ ।**
**ಪಾತಯೇತ್ಕ್ಷೀರಧಾರಾಂ ಚ ಸಹಸ್ರೇಣ ಶತೇನ ಚ ॥ ೩೫ ॥**

**ಸೂತ್ರೇಣ ವೇಷ್ಟಯೇತ್ಪ್ರಾಜ್ಞೋ ಶಕ್ತೇನ ಚ ಚತುಷ್ಕ್ರಮಾತ್ ।**
**ಪಥಿ ಸಂತೋಷಯೇದ್ದೀನಾನ್ ಸಂತೋಷ್ಯ ಚ ಗೃಹಂ ವ್ರಜೇತ್ ॥ ೩೬ ॥**

**ಇತಿ ಶ್ರೀ ಭವಿಷ್ಯೇ ಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ ಚತುರ್ಥೋಽಧ್ಯಾಯಃ.**



---

ಚರಪ್ರಾಣಿಗಳನ್ನು ತಂದುಬಿಡಬೇಕು. ಕಮಲ, ನೈದಿಲೆ, ಪಾಚಿ ಇವುಗಳನ್ನು ತಂದು ಹಾಕಿ ಬೆಳೆಸಬೇಕು. ಮುಂದೆ ಹೇಳುವ ಮಂತ್ರಗಳನ್ನು ಹೇಳುತ್ತಾ ಆ ಜಲಾಶಯದ ಸುತ್ತ ಪ್ರಯತ್ನಪೂರ್ವಕವಾಗಿ ಮೂರು ಪ್ರದಕ್ಷಿಣೆಯನ್ನು ಮಾಡಬೇಕು. ಆದಿತ್ಯಾಧ್ಯಾಯ ಮಂತ್ರಗಳನ್ನು ಜಪಿಸಿ ಅರಳಿನ ಬುಟ್ಟಿಗಳನ್ನು ಅದರೊಳಕ್ಕೆ ಬಿಡಬೇಕು.

೩೬. 'ಸಹಸ್ರೇಣ ಶತೇನ ಚ' ಎಂಬ ಮಂತ್ರದಿಂದ ಕ್ಷೀರಧಾರೆಯನ್ನು ಸುರಿಸಬೇಕು. ಕೆಂಪಾದ ದಾರವನ್ನು ಸುತ್ತಲೂ ನಾಲ್ಕುಸುತ್ತು ಸುತ್ತಬೇಕು. ದಾರಿಯಲ್ಲಿ ಬಡವರಿಗೆ ದಾನದಕ್ಷಿಣೆಗಳನ್ನು ಕೊಟ್ಟು ಸಂತೋಷಪಡಿಸಿ ಮನೆಗೆ ಬರಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯ ಭಾಗದಲ್ಲಿ ನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮ ಪರ್ವಣಿ ತೃತೀಯಭಾಗೇ

## ಪಂಚಮೋಽಧ್ಯಾಯಃ

॥ ಸೂತ ಉವಾಚ ॥

ನಲಿನ್ಯಾಶ್ಚ ತಥಾ ವಾಪ್ಯಾ ಹ್ರದಸ್ಯ ದ್ವಿಜಸತ್ತಮಾಃ ।
ವಿಧಿಂ ವಕ್ಷ್ಯೇ ಸಹಾಂಗೇನ ವಿಧಾನಂ ಶೃಣುತ ದ್ವಿಜಾಃ ॥ ೧ ॥

ಸ್ವರ್ಣಪಾದೇನ ಮಾನೇನ ಪೂರ್ವೇದ್ಯುರಧಿವಾಸಯೇತ್ ।
ಆಪೋಹಿಷ್ಠೇತಿ ಮಂತ್ರೇಣ ತಥಾ ಅಬ್ಜೈಃ ಶತೈರಪಿ ॥ ೨ ॥

ಸ್ವಮಂಡಲೇ ಶುಭೇ ಸ್ಥಾನೇ ವಿಶೇತ್ಪೂರ್ವಮುಖೇನ ತು ।
ಗಣೇಶಂ ವರುಣಂ ಚೈವ ಘಟೇ ಸಂಪೂಜಯೇಚ್ಛಿವಂ ॥ ೩ ॥

---

### ಐದನೆಯ ಅಧ್ಯಾಯ

೧-೬. ಸೂತಮುನಿವರ್ಯರು ಹೇಳುತ್ತಾರೆ—ದ್ವಿಜವರ್ಯರೇ! ಕಮಲಸರೋವರ, ಇಳಿಯುವ ಭಾವಿ, ಮಡು, ಮುಂತಾದ ಜಲಾಶಯಗಳನ್ನು ಪ್ರತಿಷ್ಠೆ ಮಾಡುವ ವಿಧಿಯನ್ನು ಅಂಗಸಹಿತವಾಗಿ ಹೇಳುವೆನು ಕೇಳಿರಿ. ಪಾದವೆಂಬ ಅಳತೆಯುಳ್ಳ ಹಾಗೆ ಸುವರ್ಣದಿಂದ ಮಾಡಿದ ಜಲಾಧಿದೇವತೆಯಾದ ವರುಣನ ಪ್ರತಿಮೆಯನ್ನು 'ಆಪೋಹಿಷ್ಠಾ' ಎಂಬ ಮಂತ್ರಪೂರ್ವಕವಾಗಿ ಪ್ರತಿಷ್ಠೆಯ ಹಿಂದಿನ ದಿನ ನೂರು ಕಮಲಗಳಿಂದ ಅಧಿವಾಸ ಮಾಡಿಸಬೇಕು. ಬಳಿಕ ಶುಭವಾದ ಪ್ರದೇಶದಲ್ಲಿ ಒಂದು ಚತುರಸ್ರಮಂಡಲವನ್ನು ಮಾಡಿ ಪೂರ್ವಾಭಿಮುಖವಾಗಿ ಆ ಮಂಡಲದೊಳಗೆ ಪ್ರವೇಶಿಸಿ ಒಂದೊಂದು ಕಲಶದಲ್ಲಿ ಒಂದೊಂದು ದೇವತೆಯಂತೆ ಗಣೇಶ, ವರುಣ, ಶಿವ, ಬ್ರಹ್ಮ ಮತ್ತು ವಿಷ್ಣು ಇವರನ್ನು ಆವಾಹಿಸಿ ಪೂಜಿಸಬೇಕು. ಮತ್ತು ಸೂರ್ಯನಲ್ಲಿಯೂ

ವಾಗೀಶಂ ಚ ತಥಾ ವಿಷ್ಣುಂ ಸೂರ್ಯೇ ಕುಂಭೇ ಸಮರ್ಚಯೇತ್ ।
ಪಾಯಸೇನಾಹುತಿಂ ದದ್ಯಾದ್ವರುಣಾಯ ಘೃತೇನ ಚ ॥ ೪ ॥

ಏಕೈಕಾಮಾಹುತಿಂ ದದ್ಯಾದನ್ಯೇಷಾಂ ಚ ಸ್ರುವೇಣ ಚ ।
ಬಲಿದಾನಂ ಪಾಯಸೇನ ಉತ್ಸೃಜೇತ್ತದನಂತರಂ ॥ ೫ ॥

ಯೂಪಂ ನಿವೇಶಯೇತ್ಪಶ್ಚಾದ್ದದ್ಯಾದ್ಧೇನುಂ ಚ ದಕ್ಷಿಣಾಂ ।
ಪೂರ್ಣಾಂ ದದ್ಯಾತ್ಸವಿತ್ರೇऽರ್ಘ್ಯಂ ದತ್ವಾ ತು ಸ್ವಗೃಹಂ ವ್ರಜೇತ್ ॥ ೬ ॥

ಆರಾಮಸ್ಯ ವಿಧಿಂ ವಕ್ಷ್ಯೇ ಪ್ರತಿಷ್ಠಾವಿಧಿವಿಸ್ತರಂ ।
ಹೀನಾರಾಮಸ್ಯ ಚ ತಥಾ ಏಕವೃಕ್ಷಸ್ಯ ಚ ದ್ವಿಜಾಃ ॥ ೭ ॥

ಅರಣ್ಯಮಧ್ಯೇ ಪಾಶ್ಚಾತ್ಯೇ ಉತ್ತರೇ ವಾ ವಿಶೇಷತಃ ।
ಮಂಡಪಂ ವರ್ತುಲಂ ಕುರ್ಯಾದರ್ಘ್ಯಹಸ್ತಪ್ರಮಾಣಕಂ ॥ ೮ ॥

ತದ್ದಕ್ಷಿಣೇ ಭವೇತ್ಕುಂಡಂ ಚತುರಸ್ರಂ ಸಮಂ ಶುಭಂ ।
ಚತುರ್ಮುಖಂ ಚ ಕರ್ತವ್ಯಂ ತೋರಣಾದ್ಯೈರಲಂಕೃತಂ ॥ ೯ ॥

---

ಈ ದೇವತೆಗಳನ್ನು ಪೂಜಿಸಬೇಕು. ಹೋಮಮಾಡಬೇಕಾದ ಸಂದರ್ಭದಲ್ಲಿ ವರುಣನಿಗೆ ಪಾಯಸ, ತುಪ್ಪ ಇವುಗಳಿಂದ ಒಂದೊಂದು ಆಹುತಿಯನ್ನೂ, ಇತರ ದೇವತೆಗಳಿಗೆ ತುಪ್ಪದ ಒಂದೊಂದು ಆಹುತಿಯನ್ನೂ ಕೊಡಬೇಕು. ಆ ಮೇಲೆ ಪಾಯಸದಿಂದ ಬಲಿಪ್ರದಾನ ಮಾಡಿ ಜಲಾಶಯವನ್ನು ಎಲ್ಲರ ಉಪಯೋಗಕ್ಕಾಗಿ ಬಿಡಬೇಕು ಅನಂತರದಲ್ಲಿ ಯೂಪಸ್ತಂಭವನ್ನು ಪ್ರತಿಷ್ಠಿಸಿ ದಕ್ಷಿಣೆಯೊಡನೆ ಗೋದಾನವನ್ನು ಮಾಡಿ ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು ಮನೆಗೆ ಬರಬೇಕು.

೭-೧೧. ಈಗ ದೊಡ್ಡತೋಟ, ಸಣ್ಣತೋಟ, ಒಂದೇಒಂದುಮರ ಇವುಗಳ ಪ್ರತಿಷ್ಠಾವಿಧಿಯನ್ನು ಹೇಳುವೆನು. ಅರಣ್ಯದ ನಡುವೆ ಪಶ್ಚಿಮದಲ್ಲಿಯಾಗಲಿ, ಉತ್ತರದಿಕ್ಕಿನಲ್ಲಾಗಲಿ ವರ್ತುಲಾಕಾರವಾದ ಮಂಟಪವನ್ನು ರಚಿಸಿ ಅದರ ದಕ್ಷಿಣದಿಕ್ಕಿನಲ್ಲಿ ಸಮಚತುರಸ್ರವೂ, ಶುಭಕರವೂ ಆದ ಅಗ್ನಿಕುಂಡವನ್ನು ಮಾಡಬೇಕು. ಅದಕ್ಕೆ ನಾಲ್ಕುದಿಕ್ಕುಗಳಲ್ಲಿಯೂ, ದ್ವಾರಗಳನ್ನು ಮಾಡಿ ತೋರಣಗಳಿಂದ ಅಲಂಕಾರಮಾಡಬೇಕು. ದ್ವಾರದಲ್ಲಿ ಮಂದರಾದಿಪರ್ವತಗಳನ್ನು ಆವಾಹನೆಮಾಡಿ ಕ್ರಮವಾಗಿ ಪೂಜಿಸಬೇಕು. ಅಲ್ಲಿಯೇ ಸರ್ವಾಭರಣಭೂಷಿತನಾದ ವಿಷ್ವಕ್ಸೇನನನ್ನು ಸುವಾ

**ಮಂದರಾದಿಕಮಾವಾಹ್ಯ ತತಃ ಸಂಪೂಜಯೇತ್ಕ್ರಮಾತ್ ।**
**ವಿಷ್ವಕ್ಸೇನಂ ಚ ತತ್ರೈವ ಪೂಜಯೇದ್ಗಂಧಚಂದನೈಃ　　॥ ೧೦ ॥**

**ಭೃಗುಂ ಕರ್ಣಸಮಾರೂಢಂ ಸರ್ವಭೂಷಣಭೂಷಿತಂ ।**
**ವಿಷ್ವಕ್ಸೇನಸ್ಯ ಮಂತ್ರೋಽಯಂ ಪೂಜಾಯಾಂ ಚೈವ ಸರ್ವತಃ　　॥ ೧೧ ॥**

**ದ್ವಾರಪಾಲಂ ಚ ಸಂಪೂರ್ಣಂ ಗೌರ್ಯಾದೀನ್ ಕಲಶೇಷು ಚ ।**
**ಸ್ವಾಸು ದಿಕ್ಷು ದಿಗೀಶಾನಾಂ ಬಲಿಪುಷ್ಪಾಕ್ಷತಾದಿನಾ　　॥ ೧೨ ॥**

**ನೈಋತ್ಯವರುಣಯೋರ್ಮಧ್ಯೇ ಅನಂತಂ ಪ್ರತಿಪೂಜಯೇತ್ ।**
**ಇಂದ್ರೇಶಾನಯೋಶ್ಚ ಮಧ್ಯೇ ಬ್ರಹ್ಮಾಣಂ ಚ ಪ್ರಕಲ್ಪಯೇತ್　　॥ ೧೩ ॥**

**ವೇದಿಪಾರ್ಶ್ವೇ ತತೋ ಗತ್ವಾ ವೇದಿಮಾವಾಹ್ಯ ಪೂಜಯೇತ್ ।**
**ಆಸನಂ ಕಲ್ಪಯಿತ್ವಾ ತು ಸಾಮಾನ್ಯಾರ್ಘ್ಯಂ ವಿಧಾಯ ಚ　　॥ ೧೪ ॥**

**ಐಶಾನೇ ಕಲಶೇ ವಿದ್ಯಾದ್ಬ್ರಹ್ಮಾಣಂ ಚ ತಥಾ ಗ್ರಹಾನ್ ।**
**ಸ್ವೈಃಸ್ವೈರ್ಮಂತ್ರೈರ್ಗಂಧಪುಷ್ಪೈರ್ನೈವೇದ್ಯೈಶ್ಚ ಪೃಥಗ್ವಿಧೈಃ　　॥ ೧೫ ॥**

---

ಸನೆಯಾದ ಶ್ರೀಗಂಧ ಚಂದನಗಂಧದಿಂದ ಪೂಜಿಸಬೇಕು. ಅವನ ಪೂಜೆಗೆ ಎಲ್ಲೆಡೆ ಯಲ್ಲಿಯೂ ಸಾಮಾನ್ಯವಾಗಿ ರೂಢಿಯಲ್ಲಿರುವ ಮಂತ್ರವನ್ನೇ ಉಪಯೋಗಿಸಬೇಕು

೧೨-೧೬. ಬಳಿಕ ದ್ವಾರಪಾಲಕರನ್ನು ಪೂಜಿಸಿ ಕಲಶದಲ್ಲಿ ಗೌರೀ ಮುಂತಾದ ದೇವತೆಗಳನ್ನೂ, ಆಯಾ ದಿಕ್ಕುಗಳಲ್ಲಿ ದಿಕ್ಪಾಲಕರನ್ನೂ ಹೂವು ಅಕ್ಷತೆ ಬಲಿಹರಣಾ ದಿಗಳಿಂದ ಪೂಜಿಸಬೇಕು. ಪಶ್ಚಿಮದಿಕ್ಕಿಗೂ, ನೈಋತ್ಯದಿಕ್ಕಿಗೂ ನಡುವೆ ಅನಂತ ನನ್ನೂ, ಪೂರ್ವಕ್ಕೂ ಈಶಾನ್ಯದಿಕ್ಕಿಗೂ ನಡುವೆ ಬ್ರಹ್ಮನನ್ನೂ ಪೂಜಿಸಿ ಯಜ್ಞವೇ ದಿಯ ಸಮೀಪಕ್ಕೆ ಹೋಗಿ ಆ ವೇದಿಯನ್ನು ಆವಾಹನೆಮಾಡಿ ಪೂಜಿಸಿ ಆಸನವನ್ನು ಕಲ್ಪಿಸಿಕೊಳ್ಳಬೇಕು. ಸಾಮಾನ್ಯಾರ್ಘ್ಯವನ್ನು ಕೊಟ್ಟು ಈಶಾನ್ಯದಿಕ್ಕಿನ ಕಲಶದಲ್ಲಿ ಬ್ರಹ್ಮನನ್ನೂ, ಆದಿತ್ಯಾದಿ ನವಗ್ರಹಗಳನ್ನೂ ಆಯಾ ದೇವತೆಗಳ ಮಂತ್ರಪೂರ್ವಕ ವಾಗಿ ಗಂಧ, ಪುಷ್ಪ, ನೈವೇದ್ಯಾದಿಗಳಿಂದ ಬೇರೆಬೇರೆಯಾಗಿ ಪೂಜಿಸಬೇಕು. ಮುಂಡ ಲಕ್ಕೆ ಅಧಿಪತಿಯಾದ ವಾಸುದೇವನನ್ನೂ, ಬೃಹಸ್ಪತಿಯನ್ನೂ ವಿಶೇಷ ಭಕ್ತಿಯಿಂದ ಪೂಜಿಸಬೇಕು. ಪಾಯಸಾನ್ನವನ್ನು ಬಲಿಪ್ರದಾನಾರ್ಥವಾಗಿ ಸಮರ್ಪಿಸಬೇಕು.

ಮಂಡಲೇಶಂ ವಾಸುದೇವಂ ಸಾಸನಂ ಚ ಬೃಹಸ್ಪತಿಂ ।
ಪೂಜಯೇತ್ಪರಯಾ ಭಕ್ತ್ಯಾ ಪಾಯಸಾನ್ನಂ ಬಲಿಂ ಹರೇತ್ ॥ ೧೬ ॥

ದ್ವಿಭುಜಂ ವಾಸುದೇವಂ ಚ ಶಂಖಚಕ್ರಧರಂ ವಿಭುಂ ।
ಪದ್ಮಾಸನಗತಂ ಧ್ಯಾಯೇತ್ ಪೀತವಸ್ತ್ರಂ ಸುಶೋಭನಂ ॥ ೧೭ ॥

ನೀಲೋತ್ಪಲದಲಾಭಾಸಂ ಹರಿಚಂದನಚರ್ಚಿತಂ ।
ದೇವರ್ಷಿಸಿದ್ಧಸಹಿತಂ ಕಲತ್ರದ್ವಯಸಂಯುತಂ ॥ ೧೮ ॥

ಧ್ಯಾತ್ವಾ ಆರೋಪಯೇದ್ದೇವಂ ಬಾಲಾದೀನಥ ನಾಯಕಾನ್ ।
ವಿಮಲಾದ್ಯಾ ನಾಯಿಕಾಶ್ಚ ದಿಗೀಶಾಂಶ್ಚ ಯಥಾವಿಧಿ ॥ ೧೯ ॥

ಷೋಡಶೋಪಚಾರೈಃ ಪೃಥಗ್ರೂಪೈಃ ಪ್ರತಿಪುಷ್ಪಾಂಜಲಿಕ್ರಮಾತ್ ।
ಪರಿತಃ ಪೂಜಯೇದ್ವಿಷ್ಣುಂ ಶಿವಂ ದುರ್ಗಾಂ ಸರಸ್ವತೀಂ ॥ ೨೦ ॥

ಶುದ್ಧಸ್ಫಟಿಕಸಂಕಾಶಂ ಧ್ಯಾಯೇತ್ಸೋಮಂ ಚತುರ್ಮುಖಂ ।
ಅಶ್ವಾರೂಢಂ ದಿವ್ಯರೂಪಂ ಪದ್ಮಾಕ್ಷಂ ಧೃತಪುಷ್ಪಕಂ ॥ ೨೧ ॥

---

೧೬-೨೦. ಬಳಿಕ ಶಂಖಚಕ್ರಗಳನ್ನು ಧರಿಸಿದವನೂ, ಪೀತಾಂಬರವನ್ನುಟ್ಟಿರುವವನೂ, ಪದ್ಮಾಸನದಲ್ಲಿ ಕುಳಿತವನೂ, ಮಂಗಳಕರವಾದ ಎರಡು ತೋಳುಗಳುಳ್ಳವನೂ ಆದ ವಾಸುದೇವನನ್ನು ಧ್ಯಾನಿಸಬೇಕು. ಆ ವಾಸುದೇವನು ನೀಲಿಯ ಬಣ್ಣದ ತಾವರೆಯಂತೆ ಮೈಕಾಂತಿಯುಳ್ಳವನೂ, ಶ್ರೀಗಂಧವನ್ನು ಮೈಗೆ ಬಳಿದುಕೊಂಡಿರುವವನೂ, ದೇವರ್ಷಿಗಳು ಸಿದ್ಧರು ಇವರೊಡನೆ ಕೂಡಿರುವನೂ, ಇಬ್ಬರು ಪತ್ನಿಯರಿಂದ ಸಮೇತನೂ, ಆಗಿರುವನೆಂದು ಧ್ಯಾನಿಸಿ ಬಾಲಾದಿನಾಯಕರನ್ನೂ, ವಿಮಲಾದಿ ನಾಯಿಕೆಯರನ್ನೂ, ದಿಕ್ಪಾಲಕರನ್ನೂ ವಿಧಿಗನುಸಾರವಾಗಿ ಷೋಡಶೋಪಚಾರಗಳಿಂದ ಪುಷ್ಪಾಂಜಲಿ ಪರ್ಯಂತವಾಗಿ ಪೂಜಿಸಿ ಅನಂತರ ಸುತ್ತಲೂ ವಿಷ್ಣು, ಶಿವ, ದುರ್ಗಾ, ಸರಸ್ವತೀ ಇವರನ್ನೂ ಪೂಜಿಸಬೇಕು.

೨೧-೨೩. ಶಿವನನ್ನು ಶುದ್ಧವಾದ ಸ್ಫಟಿಕದಂತೆ ಪ್ರಕಾಶಿಸುವನೂ, ಉಮಾದೇವೀಸಮೇತನೂ ಎಂದೂ ಚತುರ್ಮುಖ ಬ್ರಹ್ಮನನ್ನು ಕುದುರೆಯಮೇಲೆ ಕುಳಿತವನೂ ದಿವ್ಯವಾದ ರೂಪವನ್ನು ಹೊಂದಿರುವವನೂ, ಕಮಲದಂತೆ ಕಣ್ಣುಳ್ಳವನೂ, ಹೂವಿನ ಮಾಲೆಯನ್ನು ಧರಿಸಿದವನೂ, ದೇವಗಂಧರ್ವರ ಸೇವೆಯನ್ನು ಸ್ವೀಕರಿಸುತ್ತಾ ವರ

ವರದಂ ದೇವಗಂಧರ್ವೈಃ ಸೇವಿತಂ ಮುನಿಭಿಃ ಸ್ತುತಂ ।
ಶ್ವೇತಂ ವನಸ್ಪತಿಂ ಧ್ಯಾಯೇದ್ದ್ವಿಭುಜಂ ಪೀತವಾಸಸಂ ॥ ೨೨ ॥

ಸ್ವರಥಸ್ಥಂ ಮಹಾಬಾಹುಂ ಶಂಖಾಂಕುಶಸಖೇಟಕಂ ।
ವಿದ್ಯಾಂ ಚ ವಾಮತೋ ಧ್ಯಾಯೇತ್ ಸ್ವಮಂತ್ರೇಣ ಚ ಸ್ಥಾಪಯೇತ್ ॥ ೨೩ ॥

ದಶಸ್ವರಾನ್ವಿತಂ ತೋಯಂ ಸ್ವಭಾವಂ ತಮಸಾನ್ವಿತಂ ।
ಮಂತ್ರೋऽಯಂ ದೇವದೇವಸ್ಯ ಪೂಜಾಯಾಂ ವಿನಿಯೋಜಯೇತ್ ॥ ೨೪ ॥

ನೀಲಂ ಜಯಂ ಭೃಂಗಿಣಂ ಚ ಪರಿತಶ್ಚ ಯಥಾಕ್ರಮಾತ್ ।
ತತಃ ಕುಶಕಂಡಿಕಾಂ ಕೃತ್ವಾ ಸ್ಥಾಲೀಪಾಕಂ ವಿಧಾನತಃ ॥ ೨೫ ॥

ಅಷ್ಟೋತ್ತರಶತಂ ಚೈವ ಸೋಮಾಯ ದ್ವಾದಶಾಹುತೀಃ ।
ವಾನಸ್ಪತೇಸ್ತಥಾಷ್ಟೌ ಚ ಆಜ್ಯೇऽನ್ಯೇಷಾಂ ವಿಧೀಯತಾಂ ॥ ೨೬ ॥

ಏಕೈಕಾಮಾಹುತಿಂ ದದ್ಯಾತ್ಸಪ್ತಜಿಹ್ವಾಮನಂತರಂ ।
ವಾಸ್ತೋಷ್ಪತಯ ಇತಿ ಮಂತ್ರೇಣ ಸ್ಥಾಲೀಪಾಕದ್ವಯಂ ನಯೇತ್ ॥ ೨೭ ॥

---

ಕೊಡುವವನೂ ಆಗಿದ್ದಾನೆಂದು ಧ್ಯಾನಮಾಡಬೇಕು. ಎರಡು ತೋಳುಗಳುಳ್ಳವನೂ, ಪೀತಾಂಬರವನ್ನುಟ್ಟವನೂ, ಬಿಳಿಯ ಮೈಬಣ್ಣವುಳ್ಳವನೂ, ತನ್ನ ರಥದ ಮೇಲೆ ಕುಳಿತು ತನ್ನ ಉದ್ದವಾದ ತೋಳುಗಳಲ್ಲಿ ಶಂಖ, ಅಂಕುಶ, ಗುರಾಣಿ ಇವನ್ನು ಧರಿಸಿದವನೂ ಎಂದು ವನಸ್ಪತಿಯನ್ನು ಧ್ಯಾನಿಸಬೇಕು. ಆ ದೇವನ ಎಡಭಾಗದಲ್ಲಿ ವಿದ್ಯಾದೇವತೆಯನ್ನು ಧ್ಯಾನಿಸಿ ಆ ದೇವತಾ ಮಂತ್ರಪೂರ್ವಕವಾಗಿ ಸ್ಥಾಪನೆ ಮಾಡಬೇಕು.

೨೪-೨೮. ಹತ್ತುಸ್ವರಗಳಿಂದ ಕೂಡಿದುದೂ, ಜಲದೇವತಾಕವಾದುದೂ, ತಮೋಗುಣಪ್ರಚುರವಾದುದೂ ಆದ ಮಂತ್ರವನ್ನು ಆ ದೇವನ ಪೂಜೆಯಲ್ಲಿ ಉಪಯೋಗಿಸಬೇಕು. ಸುತ್ತಲೂ ನೀಲ, ಜಯ, ಭೃಂಗಿ ಇವರನ್ನು ಪೂಜಿಸಿ, ಬಳಿಕ ಅಗ್ನಿಪ್ರತಿಷ್ಠಾಪನೆ ಮಾಡಿ, ಸ್ಥಾಲೀಪಾಕ ವಿಧಿಯಿಂದ ಪ್ರಧಾನದೇವತೆಗೆ ನೂರೆಂಟು ಹೋಮ ಮಾಡಬೇಕು. ಸೋಮನಿಗೆ ಹನ್ನೆರಡು, ವನಸ್ಪತಿಗೆ ಎಂಟು, ಈ ರೀತಿ ಹೋಮಗಳನ್ನು ತುಪ್ಪದಿಂದ ಮಾಡಿ, ಅಗ್ನಿಯ ಸಪ್ತಜಿಹ್ವೆಗಳಿಗೂ ಒಂದೊಂದು ಘೃತಾಹುತಿಗ

**ವನಸ್ಪತಿಂ ಸಮುದ್ದಿಶ್ಯ ತತೋಽಯಮೀರಯೇದ್ವಚಃ ।**
**ವೃಕ್ಷಾದೀನ್ ಸ್ಥಾಪಯೇತ್ಪೂರ್ವೇ ಗಾಯತ್ರ್ಯಾ ಪ್ರಥಮಂ ಬುಧಃ ॥ ೨೮ ॥**

**ಅಬ್ಜೈರಗ್ರ್ಯಂ ಕಾಂಸ್ಯವಸ್ತ್ರಂ ರತ್ನಂ ದಿಕ್ಷು ಯಥಾಕ್ರಮಂ ।**
**ವ್ರೀಹಯಶ್ಚೇತಿಮಂತ್ರೇಣ ತಥಾ ಚ ಸರಿತಶ್ಚ ಮೇ ॥ ೨೯ ॥**

**ಮಿತ್ರತ್ರಯಶ್ಚೇತಿ ತಥಾ ಪೂಷಾ ಚಮು ಋಚಾ ತಥಾ ।**
**ಸಂಸ್ಥಾಪ್ಯ ವ್ರೀಹೀನ್ಸಂವಾಪ್ಯ ತತ್ರೈವ ವಿಧಿಪೂರ್ವಕಂ ॥ ೩೦ ॥**

**ಕ್ಷಿಪೇದ್ಗಂಗಾಜಲಂ ತೋಯೇ ಸರ್ವೌಷಧ್ಯುದಕೇನ ಚ ।**
**ಸಂಸ್ನಾಪ್ಯ ಯಜಮಾನಂ ಚ ಸುರಾಸ್ತ್ವಾಮಿತಿ ಮಂತ್ರಕೈಃ ॥ ೩೧ ॥**

**ಆಚಾರ್ಯಮಾತ್ಮನೇ ತತ್ರ ಸಂಸ್ಥಿತಂ ದ್ವಿಜಪುಂಗವೈಃ ।**
**ಸಮಾಪ್ಯ ನಿತ್ಯವಿಧಿನಾಚಾರ್ಯಾಯಾಥ ಚ ದಕ್ಷಿಣಾಂ ॥ ೩೨ ॥**

---

ಳನ್ನು ಕೊಡಬೇಕು. 'ವಾಸ್ತೋಷ್ಪತೇ' ಎಂಬ ಮಂತ್ರದಿಂದ ಸ್ಥಾಲೀಪಾಕಮಾಡಿದ ಹವಿಸ್ಸನ್ನು, ವನಸ್ಪತಿದೇವತೆಯನ್ನು ಉದ್ದೇಶಿಸಿ ಹೋಮಮಾಡಿ ಪ್ರತಿಷ್ಠಾವಚನವನ್ನು ಹೇಳಬೇಕು. ಮೊದಲು ಗಾಯತ್ರೀಮಂತ್ರಪೂರ್ವಕವಾಗಿ ವೃಕ್ಷಾದಿಗಳನ್ನು ಸ್ಥಾಪಿಸಿ ಅದರ ನಾಲ್ಕುದಿಕ್ಕುಗಳಲ್ಲಿಯೂ ಕ್ರಮವಾಗಿ ನೀರಿನಲ್ಲಿ ಬೆಳೆದ ಕಮಲಾದಿ ಪುಷ್ಪಗಳು, ಕಂಚಿನಪಾತ್ರೆ, ವಸ್ತ್ರ, ರತ್ನ, ಇವನ್ನು ಇಟ್ಟು ಅಲಂಕರಿಸಬೇಕು.

೨೮-೩೧. 'ವ್ರೀಹಯಶ್ಚಮೇ' ಎಂಬ ಮಂತ್ರದಿಂದಲೂ, 'ಸರಿತಶ್ಚಮೇ' ಎಂಬ ಮಂತ್ರದಿಂದಲೂ, 'ಮಿತ್ರತ್ರಯಶ್ಚ' 'ಪೂಷಾಚಮ' ಎಂಬ ಮಂತ್ರಗಳಿಂದಲೂ ವನಸ್ಪತಿಸ್ಥಾಪನೆಯನ್ನು ಮಾಡಿ (ಬತ್ತವನ್ನು ಬಿತ್ತಿ) ಗಂಗಾಜಲವನ್ನು ಸುರಿಯಬೇಕು. ಅನಂತರ ಆಚಾರ್ಯನು ಸಮಸ್ತ ಔಷಧಿಗಳ ನೀರಿನಿಂದ 'ಸುರಾಸ್ತ್ವಾಮಭಿಷಿಂಚಂತು' ಎಂಬ ಮಂತ್ರಪೂರ್ವಕವಾಗಿ ಬ್ರಾಹ್ಮಣಶ್ರೇಷ್ಠರ ಸಮೇತ ಯಜಮಾನನಿಗೆ ಅಭಿಷೇಕ ಮಾಡಿ ವೃಕ್ಷಪ್ರತಿಷ್ಠಾಕರ್ಮವನ್ನು ಪೂರ್ಣಮಾಡಬೇಕು.

೩೨,೩೩. ಆಮೇಲೆ ಯಜಮಾನನು ನಿತ್ಯಕರ್ಮಗಳನ್ನು ನೆರವೇರಿಸಿ ಆಚಾರ್ಯ

**ಧೇನುಂ ಚ ಲೋಹಪಾತ್ರಂ ಚ ದತ್ವಾ ಇಷ್ಟಾಂ ಚ ದಕ್ಷಿಣಾಂ ।**
**ಬ್ರಾಹ್ಮಣೇಭ್ಯೋ ಯಥಾಶಕ್ತಿ ದದ್ಯಾತ್ಪೂರ್ಣಾಂ ಗೃಹಂ ವ್ರಜೇತ್ ॥ ೩೩ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ ಪಂಚಮೋಽಧ್ಯಾಯಃ.**



---

ನಿಗೆ ದಕ್ಷಿಣೆಯನ್ನೂ, ಗೋವನ್ನೂ, ಲೋಹಪಾತ್ರೆಯನ್ನೂ ಕೊಟ್ಟು, ಬ್ರಾಹ್ಮಣರಿಗೆ ತನ್ನ ಶಕ್ತ್ಯನುಸಾರವಾಗಿ ಪೂರ್ಣಪಾತ್ರರೂಪವಾದ ದಕ್ಷಿಣೆಯನ್ನು ಕೊಟ್ಟಮೇಲೆ ಮನೆಗೆ ಬರಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಮಧ್ಯಮಪರ್ವದ ಮೂರನೆಯ ಭಾಗದಲ್ಲಿ ಐದನೆಯ ಅಧ್ಯಾಯ ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ತೃತೀಯಭಾಗೇ

## ಷಷ್ಠೋಽಧ್ಯಾಯಃ

---

॥ ಸೂತ ಉವಾಚ ॥

ಕ್ಷುದ್ರಾರಾಮಪ್ರತಿಷ್ಠಾಂ ಚ ವಕ್ಷ್ಯೇ ಚ ದ್ವಿಜಸತ್ತಮ ।
ಅಮಂಡಲೇ ಶುಭೇ ಸ್ಥಾನೇ ದ್ವಿಹಸ್ತಮಯಸ್ಥಂಡಿಲೇ ॥ ೧ ॥

ಸ್ಥಾಪಯೇತ್ಕಲಶಂ ತತ್ರ ಸೋಮಂ ವಿಷ್ಣುಂ ಸಮರ್ಚಯೇತ್ ।
ಆಚಾರ್ಯಮಾತ್ರಂ ವರಯೇನ್ನಿಶಾಸೂತ್ರೈಃ ಪ್ರವೇಷ್ಟಯೇತ್ ॥ ೨ ॥

ವೃಕ್ಷಾನ್ಮಾಲ್ಯೈರಲಂಕೃತ್ಯ ಭೂಷಯೇದ್ಭೂಷಣಾದಿನಾ ।
ದೋಹದಂ ಚ ತತೋ ದದ್ಯಾತ್ ಸ್ಥಾಪಯೇಚ್ಛಿತಧಾರಯಾ ॥ ೩ ॥

---

### ಆರನೆಯ ಅಧ್ಯಾಯ

೧-೪. ಸೂತಮುನಿವರ್ಯನು ಹೇಳುತ್ತಾನೆ— ಚಿಕ್ಕದಾದ ಆರಾಮಪ್ರತಿಷ್ಠೆಯ ವಿಚಾರವನ್ನು ಹೇಳುವೆನು. ಎಲೈ ಬ್ರಾಹ್ಮಣರೇ ! ಕೇಳಿ ; ಮಂಡಲವನ್ನು ಮಾಡದಿರುವ ಶುದ್ಧವಾದ ಸ್ಥಳದಲ್ಲಿ ಎರಡುಮೊಳ ವಿಸ್ತಾರವಾದ ನೆಲದಲ್ಲಿ ಕಲಶವನ್ನು ಸ್ಥಾಪಿಸಿ ಸೋಮನನ್ನೂ, ವಿಷ್ಣುವನ್ನೂ ಪೂಜಿಸಬೇಕು. ಈ ಕರ್ಮಕ್ಕೆ ಒಬ್ಬನೇ ಆಚಾರ್ಯನನ್ನು ಗೊತ್ತುಮಾಡಿಕೊಳ್ಳಬೇಕು. ಅರಿಶಿನದ ದಾರವನ್ನು ಕಲಶಗಳಿಗೂ ಮರಗಳಿಗೂ ಸುತ್ತಿ ಮರಗಳನ್ನು ಹೂಗಳಿಂದಲೂ, ಆಭರಣಗಳಿಂದಲೂ ಅಲಂಕರಿಸಿ, ಮರಗಳಬುಡಕ್ಕೆ ದೋಹದಾರ್ಥವಾಗಿ ಔಷಧಿಗಳರಸವನ್ನು ಚೆಲ್ಲಿ, ಪ್ರತಿಷ್ಠಾಕಾರ್ಯವನ್ನು ಸಾಂಗವಾಗಿ ಮಾಡಬೇಕು. ಬಳಿಕ ಐದುಜನ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಮರಗಳಿಗೆ ಕರ್ಣವೇಧನ ಶಾಸ್ತ್ರವನ್ನು ಮಾಡಿ ಪ್ರತಿಷ್ಠಾ ಕರ್ಮಾಂ

**ಭೋಜಯೇತ್ತ್ವಂಚ ವಿಪ್ರಾಂಶ್ಚ ಪುರತೋಽಂತೇ ವಿಶೇಷತಃ ।**
**ಕರ್ಣವೇಧಂ ತತಃ ಕೃತ್ವಾ ಉತ್ಸೃಜೇದ್ವಾಕ್ಯಪೂರ್ವಕಂ ॥ ೪ ॥**

**ದದ್ಯಾದ್ಯೂಪಂ ಮಧ್ಯದೇಶೇ ರೋಪಯೇತ್ಕದಲೀಂ ತತಃ ।**
**ರಂಭಾಂ ಚ ರೋಪಯೇದ್ದಿಕ್ಷು ಸ್ಥಾಲೀಪಾಕವಿಧಾನತಃ ॥ ೫ ॥**

**ಅಷ್ಟಾವಷ್ಟೌ ಚ ಜುಹುಯಾದನ್ಯೇಷಾಂ ಚ ಘೃತೇನ ತು ।**
**ಏಕೈಕಾಮಾಹುತಿಂ ದದ್ಯಾತ್ಸ್ವಿಷ್ಟಕೃತ್ತದನಂತರಂ ॥ ೬ ॥**

**ದಕ್ಷಿಣಾಂ ಚ ತತೋ ದದ್ಯಾತ್ಪೂರ್ಣಾಂ ದದ್ಯಾದ್ಗೃಹಂ ವ್ರಜೇತ್ ॥ ೭ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ ಷಷ್ಠೋಽಧ್ಯಾಯಃ.**



---

ಗವಾಗಿ ಉತ್ಸರ್ಜನ ವಾಕ್ಯಗಳನ್ನು ಹೇಳಿ ಆ ಮರಗಳನ್ನು ಎಲ್ಲರ ಉಪಯೋಗಕ್ಕಾಗಿ ಬಿಡಬೇಕು.

೫-೭. ತೋಟದ ನಡುವೆ ಯೂಪಸ್ತಂಭವನ್ನು ಸ್ಥಾಪಿಸಿ ಅದರ ಬಳಿಯಲ್ಲಿ ಸುತ್ತಲೂ ನಾಲ್ಕುದಿಕ್ಕುಗಳಲ್ಲಿಯೂ ಬಾಳೆಯಕಂಬಗಳನ್ನು ನೆಡಬೇಕು. ಸ್ಥಾಲೀ ಪಾಕವಿಧಿಯಿಂದ ಪ್ರಧಾನದೇವತೆಗೆ ಎಂಟೆಂಟು ಆಹುತಿಗಳನ್ನು ಮಿಕ್ಕ ದೇವತೆಗಳಿಗೆ ತುಪ್ಪದಿಂದ ಒಂದೊಂದು ಆಹುತಿಯನ್ನೂ ಹೋಮ ಮಾಡಿ ಬಳಿಕ ಸ್ವಿಷ್ಟಕೃತು ಹೋಮವನ್ನು ಮಾಡಬೇಕು. ಆ ಮೇಲೆ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ಪೂರ್ಣಾಹುತಿಯನ್ನು ನೆರವೇರಿಸಿ ಪ್ರತಿಷ್ಠಾಕರ್ಮವನ್ನು ಪೂರೈಸಿ ಮನೆಗೆ ಹೋಗ ಬೇಕು.

ಇಬಲ್ಲಿಗೆ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯ ಭಾಗದಲ್ಲಿ ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ತೃತೀಯಭಾಗೇ
## ಸಪ್ತಮೋಽಧ್ಯಾಯಃ

---

॥ ಸೂತ ಉವಾಚ ॥

ಏಕಾದಿವರವೃಕ್ಷಾಣಾಂ ವಿಧಿಂ ವಕ್ಷ್ಯೇ ದ್ವಿಜೋತ್ತಮಾಃ ।
ವೃಕ್ಷಸ್ಯ ಪಶ್ಚಿಮೇ ಭಾಗೇ ಸ್ಥಾಪಯೇತ್ಕಲಶಂ ತತಃ

ವೃಕ್ಷಂ ಸಂಸ್ಥಾಪಯೇತ್ಪೂರ್ವಂ ಸೂತ್ರೇಣ ಪರಿವೇಷ್ಟಯೇತ್ ।
ಬ್ರಹ್ಮಾಣಂ ಕಲಶೇಭ್ಯಶ್ಚ ಸೋಮಂ ವಿಷ್ಣುಂ ವನಸ್ಪತಿಂ

ತತಸ್ತಿಲಯವೈರ್ಹೋಮಾನಷ್ಟಾಷ್ಟೌ ವಿಧಿವಚ್ಚರೇತ್ ।
ಸಮುತ್ಸೃಜ್ಯ ತತೋ ಯೂಪಂ ಕದಲ್ಯಾ ಸಹ ಧರ್ಮವಿತ್

---

## ಏಳನೆಯ ಅಧ್ಯಾಯ.

೧-೫. ಸೂತಮುನಿವರ್ಯನು ಹೇಳುತ್ತಾನೆ. ಶ್ರೇಷ್ಠ ವೃಕ್ಷಗಳ ಪ್ರತಿಷ್ಠಾವಿಧಿಯನ್ನು ಹೇಳುವೆನು, ಎಲೈ ಬ್ರಾಹ್ಮಣಶ್ರೇಷ್ಠರೇ! ಕೇಳಿರಿ; ಪ್ರತಿಷ್ಠೆ ಮಾಡತಕ್ಕದಾಗಿರುವ ಸ್ಥಳದ ಪಶ್ಚಿಮದಿಕ್ಕಿನಲ್ಲಿ ಕಲಶವನ್ನು ಸ್ಥಾಪಿಸಿ, ಅದರ ಪೂರ್ವದಿಕ್ಕಿನಲ್ಲಿ ವೃಕ್ಷವನ್ನು ಮಂತ್ರವತ್ತಾಗಿ ಸ್ಥಾಪಿಸಿ ದಾರವನ್ನು ಸುತ್ತಿ, ಕಲಶದಲ್ಲಿ ಬ್ರಹ್ಮನನ್ನೂ ಸೋಮನನ್ನೂ ವಿಷ್ಣುವನ್ನೂ ವನಸ್ಪತಿಯನ್ನೂ ಆಯಾ ಮಂತ್ರಗಳಿಂದ ಪೂಜಿಸಬೇಕು. ಬಳಿಕ ಎಳ್ಳು ಯವಧಾನ್ಯ ಇವುಗಳಿಂದ ಪ್ರಧಾನ ದೇವತೆಗಳಿಗೆ ಎಂಟೆಂಟು ಹೋಮಗಳನ್ನು ಮಾಡಬೇಕು. ಬಳಿಕ ಮರವನ್ನು ಎಲ್ಲರ ಉಪಯೋಗಕ್ಕಾಗಿ ಉತ್ಸರ್ಜನವಾಕ್ಯಪೂರ್ವಕವಾಗಿ ಬಿಟ್ಟುಬಿಡಬೇಕು. ಬಾಳೆಯ ಕಂಭದೊಡನೆ ಯೂಪಸ್ತಂಭವನ್ನು ನೆಟ್ಟು ಮರದ ಬುಡದಲ್ಲಿ ಧರ್ಮನನ್ನೂ ಭೂಮಿಯನ್ನೂ ದಿಕ್ಪಾಲಕರನ್ನೂ

ವೃಕ್ಷಮೂಲೇ ಯಜೇದ್ಧರ್ಮಂ ಪೃಥಿವೀಂ ಚ ವಿಶಂ ತಥಾ ।
ದಿಗೀಶಾಂಶ್ಚ ತಥಾ ಯಕ್ಷಾನಾಚಾರ್ಯಂ ತೋಷಯೇತ್ತತಃ ॥ ೪ ॥

ಧೇನುಂ ಚ ದಕ್ಷಿಣಾಂ ದದ್ಯಾದ್ದೋಹದಂ ವೃಕ್ಷಪೂಜನಂ ।
ಕೃತ್ವಾ ಸಮ್ಯಗ್ವಿಧಾನೇನ ಸವಿತ್ರೇಽರ್ಘ್ಯಂ ನಿವೇದಯೇತ್ ॥ ೫ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ
ಸಪ್ತಮೋಽಧ್ಯಾಯಃ.



---

ಯಕ್ಷರನ್ನೂ ಪೂಜಿಸಬೇಕು. ಆಚಾರ್ಯನಿಗೆ ಗೋವನ್ನೂ ದಕ್ಷಿಣೆಯನ್ನೂ ಕೊಟ್ಟು, ದೋಹದಾರ್ಥವಾಗಿ ಔಷಧಿಗಳ ರಸವನ್ನು ಮರದ ಬುಡದಲ್ಲಿ ಚೆಲ್ಲಿ, ಮರಕ್ಕೆ ಪೂಜೆಯನ್ನು ಮಾಡಿ ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು ಮನೆಗೆ ಬರಬೇಕು.

ಇಲ್ಲಿಗೆ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯ ಭಾಗದಲ್ಲಿ
ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮ ಪರ್ವಣಿ ತೃತೀಯಭಾಗೇ

## ಅಷ್ಟಮೋಽಧ್ಯಾಯಃ

---

॥ ಸೂತ ಉವಾಚ ॥

ಅಥಾಶ್ವತ್ಥಪ್ರತಿಷ್ಠಾಯಾಂ ಮೂಲೇ ಬಾಹುಪ್ರಮಾಣಕಂ ।
ಸ್ಥಂಡಿಲಂ ಕಾರಯೇತ್ತತ್ರ ಚಂದನೇನಾಂಕಿತಂ ಯಥಾ ॥ ೧ ॥

ಪದ್ಮಂ ಪ್ರಕಲ್ಪಯೇತ್ತತ್ರ ಸಾಮಾನ್ಯಾರ್ಘ್ಯಂ ವಿಧಾಯ ಚ ।
ಪೂರ್ವೇದ್ಯೂ ರಾತ್ರಿಸಮಯೇ ತದ್ವಿಷ್ಣೋರಿತಿ ವೈ ಋಚಾ ॥ ೨ ॥

ಸ್ಥಾಪಯೇದ್ವಾರಿಣಾ ಪೂರ್ಣಂ ಕಯಾನೇತಿ ಚ ಗಂಧಕಂ ।
ಗಂಧದ್ವಾರೇತಿ ತೈಲೇನ ಶ್ರೀಶ್ಚತೇತಿ ಚ ಚಂದನಂ ॥ ೩ ॥

ದದ್ಯಾದ್ದೂರ್ವಾಕ್ಷತಂ ಕಲ್ಯೇ ಬ್ರಾಹ್ಮಣತ್ರಯಭೋಜನಂ ।
ಕಾರಯೇತ್ಸಿತಸೂತ್ರೈಶ್ಚ ವೇಷ್ಟಯೇಚ್ಚಂದನಸ್ಯ ಚ ॥ ೪ ॥

---

## ಎಂಟನೆಯ ಅಧ್ಯಾಯ

೧–೫. ಸೂತಮುನಿವರ್ಯನು ಮುಂದುವರಿಸಿ ಹೇಳುತ್ತಾನೆ—ಅಶ್ವತ್ಥ ಪ್ರತಿಷ್ಠೆಯ ಸಂದರ್ಭದಲ್ಲಿ ಆ ಮರದ ಬುಡದಲ್ಲಿ ಒಂದು ತೋಳುದ್ದ, ಅಷ್ಟೇ ಅಗಲದ ನೆಲವನ್ನು ಚೌಕವಾಗಿ ರಚಿಸಿ ಅದರಲ್ಲಿ ಶ್ರೀಗಂಧದಿಂದ ಗುರುತುಮಾಡಿ ಪದ್ಮವನ್ನು ಬರೆದುಸಾಮಾನ್ಯವಾಗಿ ಹೇಳುವ ಅರ್ಘ್ಯಮಂತ್ರಪೂರ್ವಕವಾಗಿ ಅರ್ಘ್ಯವನ್ನು ಕೊಡಬೇಕು ಹಿಂದಿನ ದಿನದ ರಾತ್ರಿಯಲ್ಲಿ “ತದಿಷ್ಣೋಃ” ಎಂಬ ಮಂತ್ರದಿಂದ ನೀರು ತುಂಬಿದ ಕಲಶವನ್ನು ಸ್ಥಾಪಿಸಿ, ‘ಕಯಾನ’ ಎಂಬ ಮಂತ್ರದಿಂದ ಗಂಧಕವನ್ನೂ ‘ಗಂಧದ್ವಾರಾಂ’ ಎಂಬ ಮಂತ್ರದಿಂದ ಎಣ್ಣೆಯನ್ನೂ, ‘ಶ್ರೀಶ್ಚತೇ’ ಎಂಬ ಮಂತ್ರ

ಕುಂಭೇ ವಿನಾಯಕಂ ಪೂಜ್ಯ ಬ್ರಹ್ಮಾಣಂ ಚ ಪರೇ ಘಟೇ ।
ಸ್ವದಿಕ್ಷು ದಿಕ್ಪತೀಂಶ್ಚಾಪಿ ವೃಕ್ಷಮೂಲೇ ನವಗ್ರಹಾನ್ ॥ ೫ ॥

ಮಂಡಲೇ ಶಿವಮಭ್ಯರ್ಚ್ಯ ಪೀಠಪೂಜಾಪುರಃಸರಂ ।
ಪೂರ್ವೇ ಚಂಡಂ ಪ್ರಚಂಡಂ ಚ ದಕ್ಷಿಣೇ ನಂದಿಭೃಂಗಿಣೌ ॥ ೬ ॥

ಅನಂತಂ ಪಶ್ಚಿಮೇ ಕಾಮಮುತ್ತರೇ ಗಣನಾಯಕಂ ।
ಕಾರ್ತಿಕೇಯಂ ಮಧ್ಯದೇಶೇ ಆಧಾರಶಕ್ತಿಪೂರ್ವಕಂ ॥ ೭ ॥

ಅನಂತಂ ಪೃಥಿವೀಂ ಚೈವ ತ್ರಿವೃತ್ತಂ ಚ ತ್ರಿಮಂಡಲಂ ।
ಅಥ ಧ್ಯಾನಂ ಪ್ರವಕ್ಷ್ಯಾಮಿ ಶ್ವೇತಂ ವೃಷಭಮೇವ ಚ ॥ ೮ ॥

ದ್ವಿಭುಜಂ ಶೂಲಹಸ್ತಂ ಚ ಸರ್ವಾಭರಣಸಂಯುತಂ ।
ಆರೋಪಯೇತ್ಸ್ವತಂತ್ರೇಣ ಮೂಲೇ ವಿಷ್ಣುಂ ಸಮರ್ಚಯೇತ್ ॥ ೯ ॥

---

ದಿಂದ ಶ್ರೀಗಂಧವನ್ನೂ ಗರಿಕೆಯನ್ನೂ ಅಕ್ಷತೆಯನ್ನೂ, ಅದರಲ್ಲಿ ಹಾಕಬೇಕು. ಮಾರನೆಯ ದಿನ ಬೆಳಿಗ್ಗೆ ಮೂವರು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಬಿಳಿಯ ದಾರಕ್ಕೆ ಶ್ರೀಗಂಧವನ್ನು ಬಳಿದು ವೃಕ್ಷಕ್ಕೆ ಸುತ್ತಬೇಕು. ಒಂದು ಕಲಶದಲ್ಲಿ ವಿನಾಯಕನನ್ನೂ, ಮತ್ತೊಂದು ಕಲಶದಲ್ಲಿ ಬ್ರಹ್ಮನನ್ನೂ, ಎಂಟು ದಿಕ್ಕುಗಳಲ್ಲಿಯೂ ದಿಕ್ಪಾಲಕರನ್ನೂ, ಮರದ ಬುಡದಲ್ಲಿ ನವಗ್ರಹಗಳನ್ನೂ ಪೂಜಿಸಬೇಕು.

೬-೭. ಮೂರು ವೃತ್ತಗಳನ್ನು ರಚಿಸುವ ಮೂಲಕ ಮೂರು ಮಂಡಲಗಳನ್ನು ಮಾಡಿ ಆ ಮಂಡಲದಲ್ಲಿ ಶಿವನ ಪೂಜೆಗೆ ಆರಂಭಿಸಿ ಪೀಠಪೂಜೆ ಮಾಡುವಾಗ ಪೂರ್ವದಿಕ್ಕಿನಲ್ಲಿ ಚಂಡ, ಪ್ರಚಂಡರನ್ನೂ ದಕ್ಷಿಣದಿಕ್ಕಿನಲ್ಲಿ ನಂದಿ, ಭೃಂಗಿಗಳನ್ನೂ ಪಶ್ಚಿಮ ದಿಕ್ಕಿನಲ್ಲಿ ಅನಂತ, ಕಾಮ, ಇವರನ್ನೂ, ಉತ್ತರದಿಕ್ಕಿನಲ್ಲಿ ಗಣಪತಿ ಮತ್ತು ಕುಮಾರಸ್ವಾಮಿ ಇವರನ್ನೂ ನಡುವೆ ಆಧಾರಶಕ್ತಿ ಅನಂತ, ಪೃಥಿವೀ ಇವರುಗಳನ್ನೂ ಪೂಜಿಸಬೇಕು.

೮-೯. ಈಗ ಧ್ಯಾನಪ್ರಕಾರವನ್ನು ಹೇಳುವೆನು. ಬಿಳಿಯ ಎತ್ತಿನ ಮೇಲೆ ಕುಳಿತಿರುವವನೂ ಎರಡು ತೋಳುಗಳುಳ್ಳವನೂ, ಶೂಲವನ್ನು ಹಿಡಿದವನೂ ಸಮಸ್ತ ಆಭರಣಗಳಿಂದ ಅಲಂಕರಿಸಿಕೊಂಡಿರುವವನೂ ಆದವನೆಂದು ಶಿವನನ್ನು ಧ್ಯಾನಿಸಬೇಕು.

**ಶಂಕರಂ ಚ ತಥಾ ಮಧ್ಯೇ ಅಗ್ರೇ ಬ್ರಹ್ಮಾಣಕಂ ಯಜೇತ್ ।**
**ಬಲಿಂ ಚ ಪಿಷ್ಟಕಾನ್ನಂ ಚ ದತ್ವಾ ಚ ಶ್ರಪಯೇಚ್ಚರುಂ ॥ ೧೦ ॥**

**ಜುಹುಯಾದ್ರುದ್ರಮುದ್ದಿಶ್ಯ ರುದ್ರಸಂಖ್ಯಾಹುತಿಂ ಕ್ರಮಾತ್ ।**
**ಅನ್ಯೇಷಾಂ ಚ ಸ್ರುವೇಣೈವ ಹೋಮಂ ದದ್ಯಾತ್ಪ್ರಯತ್ನತಃ ॥ ೧೧ ॥**

**ರೋಪಯೇತ್ಕದಲೀವೃಕ್ಷಮಾಚಾರ್ಯಂ ಪರಿತೋಷಯೇತ್ ।**
**ಕೃತ್ವಾ ಪೂರ್ಣಾಂ ಪಂಚಧಾರಾಂ ಕೃತ್ವಾ ಚಾಪಿ ಪ್ರದಕ್ಷಿಣಾಂ ॥ ೧೨ ॥**

**ಕ್ಷೀರಧಾರಾಂ ಚ ಸಂಪಾದ್ಯ ಅರ್ಘ್ಯಂ ದತ್ವಾ ಗೃಹಂ ವ್ರಜೇತ್ ॥ ೧೩ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ ಅಷ್ಟಮೋಽಧ್ಯಾಯಃ.**



---

೧೦. ಅರಳಿಯಮರದ ಬುಡದಲ್ಲಿ ವಿಷ್ಣುವನ್ನೂ, ಮಧ್ಯದಲ್ಲಿ ಶಿವನನ್ನೂ, ತುದಿಯಲ್ಲಿ ಬ್ರಹ್ಮನನ್ನೂ ಪೂಜಿಸಬೇಕು. ಹಿಟ್ಟನ್ನೂ, ಅನ್ನವನ್ನೂ ಬಲಿಸಮರ್ಪಣೆ ಮಾಡಬೇಕು. ಹೋಮ ಮಾಡುವ ಸಂದರ್ಭದಲ್ಲಿ ಆ ಅಗ್ನಿಯಲ್ಲಿಯೇ ಚರುವನ್ನು ಮಾಡಬೇಕು.

೧೧-೧೨. ಆ ಚರುವಿನಿಂದ ಶಿವನಿಗೆ ಹನ್ನೊಂದು ಆಹುತಿಯನ್ನೂ, ಮಿಕ್ಕ ದೇವತೆಗಳಿಗೆ ಒಂದೊಂದು ಆಜ್ಯಹೋಮವನ್ನೂ ಮಾಡಿ, ಪೂರ್ಣಾಹುತಿ ಕೊಡುವ ಸ್ಥಳದ ಸಮೀಪದಲ್ಲಿ ಬಾಳೆಯಕಂದನ್ನು ನೆಟ್ಟಿರಬೇಕು. ಆಚಾರ್ಯನಿಗೆ ದಕ್ಷಿಣೆಯನ್ನು ಕೊಟ್ಟು ಸಂತೋಷಪಡಿಸಬೇಕು. ಆ ಮೇಲೆ ಹಾಲನ್ನು ಧಾರಾಕಾರವಾಗಿ ಸುರಿಸುತ್ತಾ ಅಶ್ವತ್ಥವೃಕ್ಷಕ್ಕೆ ಐದು ಪ್ರದಕ್ಷಿಣೆಯನ್ನು ಮಾಡಿ ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು ಅನಂತರ ಮನೆಗೆ ಬರಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯಭಾಗದಲ್ಲಿ ಎಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ತೃತೀಯಭಾಗೇ

## ನವಮೋಽಧ್ಯಾಯಃ

॥ ಸೂತ ಉವಾಚ ॥

ವಟಿಸ್ಥಾನಮಥೋ ವಕ್ಷ್ಯೇ ತಸ್ಯ ಮೂಲೇ ತು ದಕ್ಷಿಣೇ ।
ತ್ರಿಹಸ್ತವೇದಿಮುಪರಿ ಸ್ಥಾಪಯೇತ್ಕಲಶತ್ರಯಂ ॥ ೧ ॥

ಗಣೇಶಂ ಚ ಶಿವಂ ವಿಷ್ಣುಂ ಪೂಜಯಿತ್ವಾ ಹುನೇಚ್ಚರುಂ ।
ರಕ್ತಸೂತ್ರೈಸ್ತ್ರಿಗುಣಿತೈಃ ಸ್ವರ್ಣಮೇವ ಪುರಃಸರಂ ॥ ೨ ॥

ಯವಕ್ಷೀರಬಲಿಂ ದದ್ಯಾದುತ್ಸೃಜೇದ್ವಾಕ್ಯಮುಚ್ಚರನ್ ।
ಯೂಪಮಾರೋಪಯೇತ್ಪಶ್ಚಾದ್ವಟಮೂಲೈಃ ಸಮರ್ಪಯೇತ್ ॥ ೩ ॥

---

### ಒಂಭತ್ತನೆಯ ಅಧ್ಯಾಯ

೧-೪. ಸೂತಮುನಿವರ್ಯನು ಹೇಳುತ್ತಾನೆ—ಆಲದ ಮರವನ್ನು ಉತ್ಸರ್ಜನ ಮಾಡುವ ಕ್ರಮವನ್ನು ಹೇಳುವೆನು. ಕೇಳಿರಿ,

ಆಲದಮರದ ಬುಡದಲ್ಲಿ ದಕ್ಷಿಣದಿಕ್ಕಿನಕಡೆ ಮೂರುಮೊಳ ಅಳತೆಯ ಜಗುಲಿಯನ್ನು ಮಾಡಿ ಅದರಮೇಲೆ ಮೂರು ಕಲಶವನ್ನು ಸ್ಥಾಪಿಸಬೇಕು. ಆ ಕಲಶಗಳಲ್ಲಿ ಗಣೇಶ, ಶಿವ, ವಿಷ್ಣು ಇವರನ್ನು ಆವಾಹಿಸಿ ಪೂಜಿಸಬೇಕು. ಅಗ್ನಿಪ್ರತಿಷ್ಠೆ ಮಾಡಿ ಚರುವನ್ನು ಅಗ್ನಿಯಲ್ಲಿ ಹೋಮಮಾಡಬೇಕು. ಮೂರೆಳೆಯ ಕೆಂಪುದಾರವನ್ನು ಮರದ ಸುತ್ತಲೂ ಮೂರುಸುತ್ತು ಸುತ್ತಬೇಕು. ಯವಧಾನ್ಯ ಹಾಲು ಇವುಗಳಿಂದ ಬಲಿಪ್ರದಾನಮಾಡಿ ಉತ್ಸರ್ಜನವಾಕ್ಯವನ್ನು ಹೇಳುತ್ತಾ ಮರವನ್ನು ಸಕಲ ಪ್ರಾಣಿಗಳ ಉಪಯೋಗಕ್ಕಾಗಿ ಬಿಡಬೇಕು. ಯಕ್ಷರು, ನಾಗರು, ಗಂಧರ್ವರು, ಸಿದ್ಧರು,

**ಯಕ್ಷಾನ್ನಾಗಾಂಶ್ಚ ಗಂಧರ್ವಾನ್ ಸಿದ್ಧಾಂಶ್ಚೈವ ಮರುದ್ಗಣಾನ್ ॥ ೪ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ ನವಮೋಽಧ್ಯಾಯಃ.**



---

ದೇವತೆಗಳು ಇವರನ್ನೂ ಅಲ್ಲಿ ಪೂಜಿಸಿ ಯೂಪಸ್ತಂಭವನ್ನು ಆಲದಮರದ ಬುಡದಲ್ಲಿ ನೆಡಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯಭಾಗದಲ್ಲಿ ಒಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ತೃತೀಯಭಾಗೇ

## ದಶಮೋಽಧ್ಯಾಯಃ

---

॥ ಸೂತ ಉವಾಚ ॥

ವಕ್ಷ್ಯೇ ಬಿಲ್ವಪ್ರತಿಷ್ಠಾಂ ಚ ಪೂರ್ವೇದ್ಯುರಧಿವಾಸಯೇತ್ ।
ತ್ರ್ಯಂಬಕಂ ಚೇತಿ ಮಂತ್ರೇಣ ಸ್ಥಾಪಯೇದ್ಗಂಧವಾರಿಣಾ ॥ ೧ ॥

ಸುನಾಭೇತಿ ಚ ಮಂತ್ರೇಣ ಮೇ ಗೃಹ್ಣಾಮೀತಿ ಚಾಕ್ಷತಂ ।
ಕಯಾನೇತಿ ತತೋ ಧೂಪಂ ವಸ್ತ್ರಂ ಮಾಲ್ಯಂ ನಿವೇದಯೇತ್ ॥ ೨ ॥

ಯಜೇದ್ರುದ್ರಂ ತತೋ ದೇವಂ ಮಧ್ಯೇ ದುರ್ಗಾಂ ಧನೇಶ್ವರಂ ।
ತತಃ ಕಲ್ಯೇ ಸಮುತ್ಥಾಯ ನಿತ್ಯಂ ನಿರ್ವರ್ತ್ಯ ಶಾಸ್ತ್ರತಃ ॥ ೩ ॥

---

### ಹತ್ತನೆಯ ಅಧ್ಯಾಯ

೧-೪. ಸೂತಮುನಿವರ್ಯನು ಹೇಳುತ್ತಾನೆ—ಈಗ ಬಿಲ್ವಪ್ರತಿಷ್ಠೆಯ ಕ್ರಮವನ್ನು ಹೇಳುವೆನು. ಪ್ರತಿಷ್ಠೆಗೆ ಗೊತ್ತಾದ ದಿನದ ಹಿಂದಿನದಿನ ಅಧಿವಾಸ ಮಾಡಿದ ಕಲಶವನ್ನು 'ತ್ರ್ಯಂಬಕಂ' ಎಂಬ ಮಂತ್ರದಿಂದ ಸ್ಥಾಪನೆ ಮಾಡಿ 'ಸುನಾಭ' ಎಂಬ ಮಂತ್ರದಿಂದ ಗಂಧದ ನೀರನ್ನು ಕಲಶದೊಳಕ್ಕೆ ಹಾಕಿ, 'ಮೇ ಗೃಹ್ಣಾಮಿ' ಎಂಬ ಮಂತ್ರದಿಂದ ಅಕ್ಷತೆಯನ್ನೂ 'ಕಯಾನ' ಎಂಬ ಮಂತ್ರದಿಂದ ಧೂಪವನ್ನೂ ವಸ್ತ್ರವನ್ನೂ ಹೂವನ್ನೂ ಪೂಜಿಸಿ, ಮೇಲ್ಗಡೆ ರುದ್ರನನ್ನೂ, ಮಧ್ಯೇ ದುರ್ಗಿಯನ್ನೂ ಕುಬೇರನನ್ನೂ ಪೂಜಿಸಬೇಕು. ಅಮೇಲೆ ಬೆಳಗಾಗುತ್ತಲೆ ಎದ್ದು ಶಾಸ್ತ್ರಾನುಸಾರವಾಗಿ ನಿತ್ಯಕರ್ಮವನ್ನು ಮಾಡಿ ತನ್ನ ಮನೆಯಲ್ಲಿ ಏಳುಜನ ಬ್ರಾಹ್ಮಣ ದಂಪತಿಗಳಿಗೆ

ಸ್ವಗೃಹೇ ಸಪ್ತವಿಪ್ರಾಂಶ್ಚ ಭೋಜಯೇದ್ದ್ವಿಜದಂಪತೀ ।
ಮೂಲೇ ಹಸ್ತದ್ವಯಂ ದತ್ವಾ ವರ್ತುಲಾ ವೇದಿಕಾ ಭವೇತ್ ॥ ೪ ॥

ತತ್ರ ಗೈರಿಕಯುಕ್ತೇನ ಕುಸುಂಭಚೂರ್ಣಕೇನ ವಾ ।
ನಿಶಾರಕ್ತೇನ ವಾ ಕುರ್ಯಾದಷ್ಟಪತ್ರಂ ಸುಶೋಭನಂ ॥ ೫ ॥

ನಿವೇಷ್ಟನಂ ತತಃ ಕುರ್ಯಾದ್ವೃಕ್ಷಸ್ಯ ದ್ವಿಜಸತ್ತಮಾಃ ।
ರಕ್ತಸೂತ್ರೈರ್ವೇಷ್ಟಯೇಚ್ಚ ಪಂಚಸಪ್ತನವಭಿಸ್ತು ॥ ೬ ॥

ವ್ರೀಹೀಂಶ್ಚ ವಾಪಯೇತ್ತತ್ರ ಉತ್ತರಾಭಿಮುಖಸ್ತಥಾ ।
ಶಿವಂ ವಿಷ್ಣುಂ ಚ ಬ್ರಹ್ಮಾಣಂ ಪೂಜಯೇದ್ಭೂತಿಮಿಚ್ಛತಾ ॥ ೭ ॥

ಶಿವಂ ಚ ನಾಯಕಂ ಕುರ್ಯಾದಾದಿತ್ಯಾನ್ ಪತ್ರಮೂಲಕೇ ।
ಶೇಷಂ ಚ ತರುಮೂಲೇ ತು ಮಧ್ಯೇಽನಂತಂ ಶತಕ್ರತುಂ ॥ ೮ ॥

---

ಭೋಜನವನ್ನು ಮಾಡಿಸಬೇಕು. ಮರದಬುಡದಲ್ಲಿ ಎರಡುಮೊಳ ವಿಸ್ತಾರವಾದ ಗುಂಡಾದ ಜಗುಲಿಯನ್ನು ಮಾಡಬೇಕು.

೫-೮. ಅಲ್ಲಿ ಗೈರಿಕಾದಿಧಾತುವಿನಿಂದಲಾಗಲಿ, ಕುಸುಮೇ (ಕೌಸುಂಭ) ಬಣ್ಣದಂತಿರುವ ರಂಗವಲ್ಲಿಯಿಂದಲಾಗಲೀ, ಅರಿಸಿನ ಸುಣ್ಣ ಸೇರಿಸಿ ಕೆಂಪಗೆ ಮಾಡುವುದರಿಂದಲಾಗಲೀ, ಮಂಗಳಕರವಾದ ಎಂಟುದಳಗಳುಳ್ಳ ಪದ್ಮವನ್ನು ರಚಿಸಿ, ಅಲ್ಲಿ ಬಿಲ್ವೆ ವೃಕ್ಷವನ್ನಿಟ್ಟು ಕೆಂಪಾದ ದಾರದಿಂದ ಐದುಸುತ್ತು ಅಥವಾ ಏಳುಸುತ್ತು ಅಥವಾ ಒಂಭತ್ತುಸುತ್ತುಗಳನ್ನು ಸುತ್ತಿ, ಉತ್ತರಾಭಿಮುಖವಾಗಿ ನಿಂತು ಆ ಪ್ರದೇಶದಲ್ಲಿ ಬತ್ತವನ್ನು ಚೆಲ್ಲಬೇಕು. ಸಂಪತ್ತನ್ನಪೇಕ್ಷಿಸುವ ಮನುಷ್ಯನು ಶಿವ, ವಿಷ್ಣು ಮತ್ತು ಬ್ರಹ್ಮ ಇವರನ್ನು ಅಲ್ಲಿ ಪೂಜಿಸಬೇಕು. ಆಗ ಶಿವನನ್ನೇ ಪ್ರಮುಖನನ್ನಾಗಿ ಮಾಡಬೇಕು. ಪತ್ರೆಗಳಬುಡದಲ್ಲಿ ದ್ವಾದಶಾದಿತ್ಯರನ್ನೂ, ಗಿಡದಬುಡದಲ್ಲಿ ಶೇಷನನ್ನೂ, ಮಧ್ಯದಲ್ಲಿ ಅನಂತನನ್ನೂ ದೇವೇಂದ್ರನನ್ನೂ ಪೂಜಿಸಬೇಕು. ಕ್ರಮವಾಗಿ ವನಪಾಲಕ, ಸೋಮ, ಸೂರ್ಯ, ಭೂಮಿ ಇವರುಗಳನ್ನೂ ಪೂಜಿಸಬೇಕು.

ವನಪಾಲಂ ಚ ಸೋಮಂ ಚ ಸೂರ್ಯಂ ಪೃಥ್ವೀಮನುಕ್ರಮಾತ್ ।
ಹೋಮಸ್ತಿಲಾಕ್ಷತೈಃ ಕಾರ್ಯೋ ಬಲಿಂ ದದ್ಯಾದ್ಘೃತೋದನೈಃ ॥ ೯ ॥

ಯಕ್ಷೇಭ್ಯೋ ಮಾಷಭಕ್ತಂ ಚ ವಾಯನಾನಿ ಚ ದ್ವಾದಶ ।
ಗ್ರಹಾಣಾಂ ಪ್ರೀತಯೇ ದದ್ಯಾತ್ಕ್ಷೀರೇಣಾವೇಷ್ಟ್ಯ ದಕ್ಷಿಣಾಂ ॥ ೧೦ ॥

ಕಾಂಚನಂ ಕಾಂಸ್ಯಪಾತ್ರಂ ಚ ತಾಂಬೂಲಂ ತಾಮ್ರಪಾತ್ರಕಂ ।
ಯೂಪಾರೋಪಂ ಕರ್ಣವೇಧಂ ಸವಿತ್ರೇಽರ್ಘ್ಯಂ ನಿವೇದಯೇತ್॥ ೧೧ ॥

ಅಥ ರಾತ್ರಿಪ್ರತಿಷ್ಠಾಂ ಚ ವಕ್ಷ್ಯೇ ಶಾಸ್ತ್ರಾನುಸಾರತಃ ।
ಯಕ್ಷೈಕವೃಕ್ಷಸಂಸ್ಕಾರೇ ನ ಪುನರ್ಜಾಯತೇ ಭುವಿ ॥ ೧೨ ॥

ಪೂರ್ವೇದ್ಯುರುಪವಾಸೇ ತು ವೃಕ್ಷಮೂಲೇ ಘಟಂ ನ್ಯಸೇತ್ ।
ವಿಷ್ಣುಂ ಶಿವಂ ಗಣೇಶಂ ಚ ಪೂಜಯಿತ್ವಾ ತು ಸ್ಥಾಪಯೇತ್ ॥ ೧೩ ॥

ಕಲಶಾನ್ ಪಂಚ ವಾ ಸಪ್ತ ಗಂಧತೈಲೈರಲಂಕೃತಾನ್ ।
ದುಗ್ಧೇನ ಪಂಚಗವ್ಯೇನ ಶಂಖತೋಯೇನ ಯತ್ನತಃ ॥ ೧೪ ॥

---

೯-೧೧. ತಿಲಾಕ್ಷತೆಗಳಿಂದ ಹೋಮವನ್ನು ಮಾಡಿ ತುಪ್ಪದಅನ್ನವನ್ನು ಬಲಿ ಸಮರ್ಪಣೆಮಾಡಬೇಕು. ಯಕ್ಷರಿಗೆ ಉದ್ದಿನ ಅನ್ನವನ್ನೂ, ಗ್ರಹಗಳಿಗಾಗಿ ಹನ್ನೆರಡು ಬಾಗಿನಗಳನ್ನೂ ಕೊಡಬೇಕು. ಹಾಲಿನಿಂದ ಮರದ ಸುತ್ತಲೂ ಸುತ್ತುಗಟ್ಟಿ ಸುವರ್ಣದಕ್ಷಿಣೆಯನ್ನೂ, . ಕಂಚಿನಪಾತ್ರೆಯನ್ನೂ, ತಾಂಬೂಲವನ್ನೂ, ತಾಮ್ರದ ಪಾತ್ರೆಯನ್ನೂ ದಾನಮಾಡಬೇಕು. ಯೂಪವನ್ನು ಪ್ರತಿಷ್ಠಿಸಿ ಮರಕ್ಕೆ ಕರ್ಣವೇಧನ ಶಾಸ್ತ್ರವನ್ನು ಮಾಡಿದ ಬಳಿಕ ಸೂರ್ಯನಿಗೆ ಅರ್ಘ್ಯವನ್ನು ಕೊಡಬೇಕು.

೧೨-೧೬. ರಾತ್ರಿಯ ಕಾಲದಲ್ಲಿ ಬಿಲ್ವಪ್ರತಿಷ್ಠಾ ವಿಧಿಯನ್ನು ಶಾಸ್ತ್ರಾನುಸಾರವಾಗಿ ಹೇಳುವೆನು ಯಕ್ಷಸ್ವರೂಪವೆಂದು ಭಾವಿಸಿ ಬಿಲ್ವವೃಕ್ಷಕ್ಕೆ ಪ್ರತಿಷ್ಠಾರೂಪವಾದ ಸಂಸ್ಕಾರವನ್ನು ಮಾಡಿದ ಮನುಷ್ಯನು ಪುನರ್ಜನ್ಮವನ್ನು ಪಡೆಯುವುದಿಲ್ಲ. ಪ್ರತಿಷ್ಠೆಗೆ ಹಿಂದಿನದಿನದಲ್ಲಿ ಉಪವಾಸವಿದ್ದು ಬಿಲ್ವವೃಕ್ಷದ ಬುಡದಲ್ಲಿ ಒಂದು ಕಲಶವನ್ನು ಸ್ಥಾಪಿಸಿ, ಅದರಲ್ಲಿ ಶಿವ, ವಿಷ್ಣು, ಗಣೇಶ ಇವರನ್ನು ಪೂಜಿಸಬೇಕು. ಸುಗಂಧ

**ಸೂತ್ರೈಃ ಸಂವೇಷ್ಟನಂ ಕೃತ್ವಾ ವಸ್ತ್ರಮಾಲ್ಯೈರಲಂಕೃತಂ ।**
**ಕಾಂಡಾದಿತಿ ಚ ಮಂತ್ರೇಣ ದದ್ಯಾದ್ದೂರ್ವಾಕ್ಷತಂ ತತಃ ॥ ೧೫ ॥**

**ವಿಷ್ಣುಸೂಕ್ತೇನ ಚ ಪುನಃ ಸಿಂಧೂರಾಂಜನಚಂದನಂ ।**
**ದದ್ಯಾತ್ಫಲಂ ಚ ದೀಪಂ ಚ ಸ್ವಯಂ ತತ್ರ ಸ್ವಪೇತ್ತತಃ ॥ ೧೬ ॥**

**ತತಃ ಪ್ರಭಾತೇ ವಿಮಲೇ ಬ್ರಾಹ್ಮಣಾನ್ಸಪ್ತ ಭೋಜಯೇತ್ ।**
**ಪೂರ್ವವತ್ಕಲಶಂ ಕೃತ್ವಾ ಶಿವಂ ವಿಷ್ಣುಂ ಗಣಾಧಿಪಂ ॥ ೧೭ ॥**

**ಸೋಮಂ ವನಸ್ಪತಿಂ ಚೈವ ಏಕಕುಂಭೇ ಸಮರ್ಚಯೇತ್ ।**
**ಹುನೇತ್ಪಂಚಾಹುತೀಸ್ತತ್ರ ಯೂಪಂ ದದ್ಯಾತ್ಸಮುತ್ಸೃಜೇತ್ ॥ ೧೮ ॥**

---

ವಾದ ತೈಲಾದಿಗಳಿಂದ ಅಲಂಕರಿಸಿ ಹಾಲು, ಪಂಚಗವ್ಯ, ಶಂಖೋದಕಗಳನ್ನು ಹಾಕಿದ ಐದು ಅಥವಾ ಏಳುಕಲಶಗಳನ್ನು ದಾರದಿಂದ ಸುತ್ತಬೇಕು. ಅದನ್ನು ಹೂವು ಮತ್ತು ವಸ್ತ್ರಗಳಿಂದ ಅಲಂಕರಿಸಿ 'ಕಾಂಡಾತ್ಕಾಂಡಾತ್' ಎಂಬ ಮಂತ್ರದಿಂದ ಗರಿಕೆಯನ್ನೂ, ಅಕ್ಷತೆಯನ್ನೂ ಹಾಕಿ, ವಿಷ್ಣುಸ್ತೋತ್ರವನ್ನು ಹೇಳುತ್ತಾ ಚಂದಿರ, ಅಂಜನ, ಶ್ರೀಗಂಧ, ಫಲ ಇವುಗಳನ್ನು ಸಮರ್ಪಿಸಿ, ದೀಪವನ್ನು ಹತ್ತಿಸಿ, ತಾನೂ ಆ ಕಲಶಗಳ ಸಮೀಪದಲ್ಲಿಯೇ ಮಲಗಬೇಕು.

೧೭-೧೯. ಆ ಮೇಲೆ ಪ್ರಾತಃಕಾಲದಲ್ಲಿದ್ದು ಏಳುಜನ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಬೇಕು. ಮತ್ತೆ ಹಿಂದಿನಂತೆ ಒಂದುಕಲಶವನ್ನು ಸ್ಥಾಪಿಸಿ, ಆ ಕಲಶದಲ್ಲಿ ಶಿವ, ವಿಷ್ಣು, ಗಣಪತಿ, ಸೋಮ, ವನಸ್ಪತಿ ಈ ದೇವತೆಗಳನ್ನು ಪೂಜಿಸಿ, ಈ ದೇವತೆಗಳಿಗಾಗಿ ಐದುಆಹುತಿಗಳನ್ನು ಅಗ್ನಿಯಲ್ಲಿ ಹೋಮಮಾಡಬೇಕು. ಆಮೇಲೆ ಯೂಪಸ್ತಂಭವನ್ನು ಪ್ರತಿಷ್ಠಿಸಿ ವೃಕ್ಷವನ್ನು ಸಕಲರ ಉಪಯೋಗಕ್ಕಾಗಿ ಬಿಡಬೇಕು. ಪಾಯಸದ ಬಲಿಸಮರ್ಪಣೆಮಾಡಿ, ಕರ್ಣವೇಧನ ಶಾಸ್ತ್ರವನ್ನು ಮಾಡಬೇಕು. ಹಾಲು ನೀರು ಇವನ್ನು ಬೆರಸಿ ಮರದ ಸುತ್ತಲೂ ಸುತ್ತುಗಟ್ಟಬೇಕು. ಬಳಿಕ ಅರ್ಘ್ಯಪ್ರದಾನಮಾಡಿ ಪೂರ್ಣಾಹುತಿ ಹೋಮವನ್ನು ಮಾಡಬೇಕು. ಆಚಾರ್ಯನಿಗೆ

**ಬಲಿಂ ಚ ಪಾಯಸೇನೈವ ಪ್ರಕುರ್ಯಾತ್ಕರ್ಣವೇಧನಂ ।**
**ವೇಷ್ಟಯೇತ್ಕ್ಷೀರತೋಯೇನ ಧಾನ್ಯಂ ಧೇನುಂ ಚ ದಕ್ಷಿಣಾಂ ॥**
**ದದ್ಯಾದರ್ಘ್ಯಂ ಹುನೇತ್ಪೂರ್ಣಾಂ ಭೋಜಯೇದ್ದ್ವಿಜದಂಪತೀ ॥ ೧೯ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ ದಶಮೋಽಧ್ಯಾಯಃ.**



---

ಗೋವನ್ನೂ, ಧಾನ್ಯವನ್ನೂ, ದಕ್ಷಿಣೆಯನ್ನೂ ಸಮರ್ಪಿಸಬೇಕು. ಅನಂತರ ಬ್ರಾಹ್ಮಣ ದಂಪತಿಗಳಿಗೆ ಭೋಜನಮಾಡಿಸಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯಭಾಗದಲ್ಲಿ ಹತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ತೃತೀಯಭಾಗೇ
## ಏಕಾದಶೋಽಧ್ಯಾಯಃ

॥ ಸೂತ ಉವಾಚ ॥

ಶತಹಸ್ತಮಿತಾಂ ಮುಷ್ಟಿಂ ನಾನಾತರುವಿಭೂಷಿತಾಂ ।
ಪೂಗಾಮ್ರಾದಿಫಲೈರ್ಯುಕ್ತಂ ವಾಸ್ತುಂ ಕೃತ್ವಾ ಯಜೇತ್ತು ಯಃ ॥ ೧ ॥

ಷಷ್ಟಿ ವರ್ಷಸಹಸ್ರಾಣಿ ಸ್ವರ್ಗಲೋಕೇ ವಸೇಚ್ಚಿರಂ ।
ತದ್ವಿಧಾನಂ ಪ್ರವಕ್ಷ್ಯಾಮಿ ಯಥಾಶಾಸ್ತ್ರಾನುಸಾರತಃ ॥ ೨ ॥

ನಿತ್ಯಂ ನಿರ್ವರ್ತ್ಯ ವಿಧಿವತ್ಪಂಚ ವಿಪ್ರಾನ್ಸಮರ್ಚಯೇತ್ ।
ಭೋಜಯೇತ್ಪೂಜಯೇದ್ವಿಷ್ಣುಂ ಪ್ರಜಾಪತಿಸಮನ್ವಿತಂ ॥ ೩ ॥

---

## ಹನ್ನೊಂದನೆಯ ಅಧ್ಯಾಯ

೧-೨. ಸೂತಮುನಿವರ್ಯರು ಮುಂದುವರಿಸಿ ಹೇಳುತ್ತಾನೆ—ಒಂದುನೂರು ಮೊಳ ಉದ್ದವೂ, ಅಗಲವೂ ಉಳ್ಳುದಾದ ಆರಾಮವು ಮುಷ್ಟಿ ಎಂಬ ವ್ಯಾವಹಾರಿಕ ನಾಮಯುಕ್ತವಾಗುವುದು. ಆ ಪ್ರದೇಶವು ಅಡಿಕೆ, ಮಾವು ಮುಂತಾದ ಹಣ್ಣು ಬಿಡುವ ಮರಗಳಿಂದ ಕೂಡಿರಬೇಕು. ಇಂಥ ತೋಟದ ನಡುವೆ ವಾಸ್ತುಪ್ರತಿಮೆಯನ್ನು ಸ್ಥಾಪಿಸಿ ಯಾವನು ದೇವತಾಪೂಜಾದಿಗಳನ್ನು ಮಾಡಿ ಹೋಮವನ್ನು ಮಾಡುವನೋ ಅವನು ಅರವತ್ತುಸಾವಿರ ವರ್ಷಗಳವರೆಗೆ ಸ್ವರ್ಗಲೋಕದಲ್ಲಿ ಸುಖವನ್ನನುಭವಿಸುವನು.

೩-೪. ಶಾಸ್ತ್ರಾನುಸಾರವಾಗಿ ಅದರ ವಿಧಿಯನ್ನು ಹೇಳುವೆನು. ಯಜಮಾನನು ಶಾಸ್ತ್ರವಿಧಿಗೆ ಅನುಸಾರವಾಗಿ ನಿತ್ಯಕರ್ಮಗಳನ್ನು ನೆರವೇರಿಸಿ ಐದು ಜನ

**ಅಗ್ನಿಕಾರ್ಯಂ ತತಃ ಕೃತ್ವಾ ದದ್ಯಾದ್ವಿಪ್ರಾಯ ದಕ್ಷಿಣಾಂ ॥ ೪ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ ಏಕಾದಶೋಽಧ್ಯಾಯಃ.**



---

ಬ್ರಾಹ್ಮಣರನ್ನು ಆಹ್ವಾನಿಸಿ ಪ್ರಜಾಪತಿಸಹಿತನಾದ ವಿಷ್ಣುವನ್ನುದ್ದೇಶಿಸಿ ಅವರನ್ನು ಪೂಜಿಸಬೇಕು. ಬಳಿಕ ಹೋಮಾದಿಗಳನ್ನು ಮಾಡಿ ಬ್ರಾಹ್ಮಣರ ಭೋಜನವನ್ನು ಮಾಡಿಸಿ ಅವರಿಗೆ ದಕ್ಷಿಣೆಯನ್ನು ಕೊಡಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯಭಾಗದಲ್ಲಿ ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ತೃತೀಯಭಾಗೇ
## ದ್ವಾದಶೋಽಧ್ಯಾಯಃ

॥ ಸೂತ ಉವಾಚ ॥

ಪ್ರತಿಷ್ಠಾಂ ಮಂಡಪಸ್ಯೈವ ಶೈಲದಾರುಮಯಸ್ಯ ಚ ।
ತೃಣಕಾಷ್ಠಸ್ಯ ಚ ವಿಭೋ ತೃಣವತ್ತಸ್ಯ ಚ ದ್ವಿಜಾಃ ॥ ೧ ॥

ಅಧಿವಾಸಸ್ಯ ಪೂರ್ವೇದ್ಯುಃ ಶುಭೇ ಲಗ್ನೇ ಘಟಂ ನ್ಯಸೇತ್ ।
ಸೂರ್ಯಂ ಸೋಮಂ ತಥಾ ವಿಷ್ಣುಂ ಕಲಶೇ ತು ಸಮರ್ಚಯೇತ್ ॥ ೨ ॥

ಪ್ರೋಕ್ಷಯೇತ್ಕುಶತೋಯೇನ ಆಪೋಹಿಷ್ಠೇತಿ ವೈ ಋಚಾ ।
ಆಪ್ಯಾಯಸ್ವೇತಿ ಗಂಧೇನ ಗಂಧದ್ವಾರೇತಿ ಗಂಧಕಂ ॥ ೩ ॥

---

## ಹನ್ನೆರಡನೆಯ ಅಧ್ಯಾಯ

೧-೪. ಸೂತಮುನಿವರ್ಯನು ಹೇಳುತ್ತಾನೆ—ಎಲೈ ಬ್ರಾಹ್ಮಣರೇ! ಕಲ್ಲಿನಿಂದಲೋ, ಮರದಿಂದಲೋ, ಅಥವಾ ಹುಲ್ಲಿನ ಚಾವಣಿಯಿಂದಲೋ ಮಾಡಿದ ಮಂಡಪ ಪ್ರತಿಷ್ಠೆಯ ವಿಷಯವನ್ನು ಹೇಳುವೆನು ಕೇಳಿ; ಪ್ರತಿಷ್ಠೆಯ ಹಿಂದಿನದಿನ ಶುಭಲಗ್ನದಲ್ಲಿ ಕಲಶಸ್ಥಾಪನೆಯನ್ನು ಮಾಡಿ ಆ ಕಲಶದಲ್ಲಿ ಸೂರ್ಯ, ಸೋಮ, ವಿಷ್ಣು ಈ ಮೂರುದೇವತೆಗಳನ್ನೂ ಪೂಜಿಸಬೇಕು. 'ಆಪೋಹಿಷ್ಠಾ' ಎಂಬ ಮಂತ್ರಪೂರ್ವಕವಾಗಿ ದರ್ಭೆಯ ನೀರಿನಿಂದ ಪ್ರೋಕ್ಷಿಸಿ 'ಆಪ್ಯಾಯಸ್ವ' ಎಂಬ ಮಂತ್ರಪೂರ್ವಕವಾಗಿ ಗಂಧ, 'ಗಂಧದ್ವಾರಾಂ' ಎಂಬ ಮಂತ್ರದಿಂದ ಗಂಧಕ, 'ಆಕೃಷ್ಣೇನ' ಎಂಬ ಮಂತ್ರದಿಂದ ಎಣ್ಣೆ, ಇವುಗಳಿಂದ ಅಲಂಕರಿಸಿ 'ಶ್ರೀಶ್ಚತೇ ಲಕ್ಷ್ಮೀಶ್ಚ' ಎಂಬ ಮಂತ್ರದಿಂದ

ಆಕ್ರಷ್ಣೇನೇತಿ ತೈಲೇನ ಶ್ರೀಶ್ಚತೇ ಇತಿ ಚಂದನಂ ।
ಸಿಂಧೂರಾಲಕ್ತಕಂ ದದ್ಯಾದಂಜನಂ ದೂರ್ವಯಾ ಸಹ ॥ ೪ ॥

ತತಃ ಪ್ರಭಾತೇ ವಿಮಲೇ ಶ್ರಾದ್ಧಂ ವೃದ್ಧ್ಯಾತ್ಮಕಂ ಚರೇತ್ ।
ದಿಕ್ಪಾಲಾಂಶ್ಚೈವ ವಿನ್ಯಸ್ಯ ಮಂಡಪೇ ಶುಭಲಕ್ಷಣೇ ॥ ೫ ॥

ಮಧ್ಯೇ ವೇದ್ಯಂತರೇ ಚೈವ ರಾಜಭಿರ್ಮಂಡಲಂ ಲಿಖೇತ್ ।
ಸೂರ್ಯಮಾವಾಹಯೇತ್ತತ್ರ ಸೋಮಂ ವಿಷ್ಣುಂ ಚ ಪಾರ್ಶ್ವಯೋಃ ॥ ೬ ॥

ಗಣೇಶಂ ಚ ಗ್ರಹಾಂಶ್ಚೈವ ದಿಕ್ಪಾಲಾಂಶ್ಚ ಘಟೇಽರ್ಚಯೇತ್ ।
ಪಾಯಸಂ ಜುಹುಯಾದಗ್ನಾವಷ್ಟೋತ್ತರಶತಂ ತಥಾ ॥ ೭ ॥

ಆದಿತ್ಯಸ್ಯ ತಥಾ ವಿಷ್ಣೋಃ ಸೋಮಸ್ಯ ದ್ವಾದಶಾಹುತೀಃ ।
ಬಲಿಂ ಚ ಪಾಯಸಂ ದದ್ಯಾತ್ತೈಲಂ ಕ್ಷೀರಮಥಾಪಿ ವಾ ॥ ೮ ॥

ತತ ಉತ್ಸೃಜ್ಯ ವಿಧಿವದ್ವಾಕ್ಯಮೇತದುದೀರಯೇತ್ ।
ಜಾನುಭ್ಯಾಮವನಿಂ ಗತ್ವಾ ಶನೈರೋಷ್ಠಂ ನ ಚಾಲಯೇತ್ ॥ ೯ ॥

---

ಶ್ರೀಗಂಧವನ್ನೂ ಚಂದಿರ ಮತ್ತು ಅರಗಿನರಸ, ಕಾಡಿಗೆ, ಗರಿಕೆ ಇವುಗಳನ್ನೂ ಕಲಶದೊಳಕ್ಕೆ ಹಾಕಿ ಪೂಜಿಸಬೇಕು.

೫-೮. ಮಾರನೆಯದಿನ ಪ್ರಾತಃಕಾಲದಲ್ಲಿ ನಾಂದೀಪೂಜೆಯನ್ನು ಮಾಡಿ ಶುಭಕರವಾದ ಆ ಮಂಟಪದ ಸುತ್ತ ದಿಕ್ಪಾಲಕರನ್ನು ಸ್ಥಾಪಿಸಿ ಮಂಟಪದ ನಡುವೆ ರಂಗವಲ್ಲಿಯಿಂದ ಮಂಡಲವನ್ನು ಬರೆದು ನಡುವೆ ಸೂರ್ಯನನ್ನೂ, ಪಕ್ಕಗಳಲ್ಲಿ ಸೋಮನನ್ನೂ ವಿಷ್ಣುವನ್ನೂ ಪೂಜಿಸಬೇಕು. ಕಲಶದಲ್ಲಿ ಗಣೇಶ, ನವಗ್ರಹಗಳು, ದಿಕ್ಪಾಲಕರು ಇವರುಗಳನ್ನು ಪೂಜಿಸಬೇಕು. ಅಗ್ನಿಯಲ್ಲಿ ಸೂರ್ಯಪ್ರೀತ್ಯರ್ಥವಾಗಿ ಪಾಯಸದಿಂದ ನೂರೆಂಟು ಆಹುತಿ ಹೋಮವನ್ನೂ, ವಿಷ್ಣುವಿಗೂ ಅಷ್ಟೇ ಹೋಮವನ್ನೂ, ಸೋಮನಿಗೆ ಹನ್ನೆರಡು ಹೋಮವನ್ನೂ, ಮಾಡಬೇಕು. ಪಾಯಸವನ್ನೋ ಎಣ್ಣೆ ಹಾಲು ಇವುಗಳನ್ನೋ ಬಲಿಸಮರ್ಪಣೆ ಮಾಡಬೇಕು

೯-೧೧. ಆ ಮೇಲೆ ಮುಂದೆ ಹೇಳುವ ವಾಕ್ಯಗಳನ್ನು ಹೇಳುತ್ತಾ ವಿಧಿಗನುಸಾರವಾಗಿ ಮಂಟಪವನ್ನು ಸಕಲರ ಪ್ರಯೋಜನಕ್ಕಾಗಿ ಉತ್ಸರ್ಜನಮಾಡಬೇಕು.

**ವಾಸ್ತೋಷ್ಪತಿಂ ಚ ತತ್ರೈವ ಪೂಜಯೇದ್ಗಂಧಚಂದನೈಃ ।**
**ಅರ್ಘ್ಯಂ ದದ್ಯಾಚ್ಚ ವಿಧಿವದ್ಭೂತೇಸ್ಯೈವಾಹುತಿಂ ಹುನೇತ್ ॥ ೧೦ ॥**

**ಓಂ ಅದ್ಯೇತ್ಯಾದಿ ಬ್ರಾಹ್ಮಣಾದಿ ಸರ್ವಸತ್ತ್ವೇಭ್ಯೋ ವಿಷ್ಣುಪ್ರೀಣನಾರ್ಥ**
**ಮಿಮಂ ಮಂಡಪಂ ಸುಪೂಜಿತಂ ಸೂರ್ಯದೈವತಂ ಶೈಲೇಯೇಷ್ಟಕಾದಿಭಿಃ**
**ಸರ್ವಸತ್ವೇಭ್ಯೋ ರಚಿತಂ ಶ್ರುತಿಸ್ಮೃತ್ಯುಕ್ತ ಫಲಪ್ರಾಪ್ತಿಕಾಮನಯಾ**
**ಅಮುಕಋಷಿಸಗೋತ್ರಃ ಅಮುಕದೇವಶರ್ಮಾಹಮುತ್ಸೃಜೆ**
**ತತಃ ಶ್ವೇತಘಟಂ ದದ್ಯಾನ್ಮಂಡಪೋಪರಿ ಸತ್ತಮಾಃ ।**
**ತ್ರಿಗುಣೇನ ನಿಶಾಕ್ತೈರ್ವಾ ವೇಷ್ಟಯೇದ್ವಾರಿಧಾರಯಾ ॥ ೧೧ ॥**

**ದಕ್ಷಿಣಾಂ ವಿಧಿವದ್ದದ್ಯಾತ್ಸೂರಾಯಾರ್ಘ್ಯಂ ನಿವೇದಯೇತ್ ।**
**ತೃಣವೇಶ್ಮನಿ ವೈ ಸೂರ್ಯಂ ವಾಸುದೇವ ಸಮನ್ವಿತಂ ॥ ೧೨ ॥**

**ಘಟೇ ಗಣೇಶಂ ವರದಂ ವರಂ ಕೃತ್ವಾ ಸಮುತ್ಸೃಜೇತ್ ।**
**ಐಶಾನ್ಯಾಂ ದಾಪಯೇದ್ಯೂಪಂ ಧ್ವಜಾನ್ದಿಕ್ಷು ಪ್ರಕಲ್ಪಯೇತ್ ॥ ೧೩ ॥**

---

ಆಗ ಮಂಡಿಗಳನ್ನು ಮೆಲ್ಲಗೆ ನೆಲದಲ್ಲಿ ಊರಿ ತುಟಿಗಳನ್ನು ಅಲುಗಿಸದೆ ಇರಬೇಕು. ಅಲ್ಲಿಯೇ ವಾಸ್ತುಪುರುಷನನ್ನು ಗಂಧಾದಿ ದ್ರವ್ಯಗಳಿಂದ ಪೂಜಿಸಿ ಅರ್ಘ್ಯವನ್ನು ಕೊಡ ಬೇಕು. ಪ್ರತಿಷ್ಠಾವಾಕ್ಯದ ಅರ್ಥಸಂಕಲ್ಪಮಾಡಿ (ಇಂಥ ಗೋತ್ರದಲ್ಲಿ ಹುಟ್ಟಿದ ಈ ಹೆಸರುಳ್ಳ ನಾನು ಶ್ರುತಿಸ್ಮೃತಿಗಳಲ್ಲಿ ಹೇಳಿದ ಫಲಪ್ರಾಪ್ತಿಗಾಗಿ ಶ್ರೇಷ್ಠವಾದ ಕಲ್ಲು ಇಟ್ಟಿಗೆ ಮುಂತಾದುವುಗಳಿಂದ ಕಟ್ಟಿದ ಸೂರ್ಯದೇವತಾಕವಾದ ಈ ಮಂಟಪವನ್ನು ಬ್ರಾಹ್ಮಣಾದಿ ಸಕಲ ವ್ಯಕ್ತಿಗಳ ಉಪಯೋಗಕ್ಕಾಗಿ ಈ ದಿವಸ ಬಿಟ್ಟಿದ್ದೇನೆ.) ಆ ಮೇಲೆ ಬಿಳಿಯಕುಂಭಕ್ಕೆ ಅರಿಶಿನ ಸವರಿದ ದಾರವನ್ನು ಮೂರು ಸುತ್ತು ಸುತ್ತಿ ಮಂಟ ಪದ ಸುತ್ತಲೂ ಬಳಸಿ ಬರುವಂತೆ ನೀರಿನ ಧಾರೆಯನ್ನು ಸುರಿಯುತ್ತಾ ಸುತ್ತಬೇಕು.

೧೨-೧೩. ಆಚಾರ್ಯನಿಗೆ ವಿಧಿಯಲ್ಲಿ ಹೇಳಿದಂತೆ ದಕ್ಷಿಣೆಯನ್ನು ಕೊಟ್ಟು ಸೂರ್ಯನಿಗೆ ಅರ್ಘ್ಯವನ್ನು ಕೊಡಬೇಕು. ಹುಲ್ಲಿನ ಮಂಟಪವನ್ನು ಉತ್ಸರ್ಜನಮಾಡು ವುದಾದರೆ ವಾಸುದೇವಸಹಿನಾದ ಸೂರ್ಯನನ್ನೂ ಗಣೇಶನನ್ನೂ ಕಲಶದಲ್ಲಿ ಪೂಜಿಸಿ ಮಂಟಪವನ್ನು ಎಲ್ಲರ ಪ್ರಯೋಜನಕ್ಕಾಗಿ ಬಿಡುವಾಗ ಈಶಾನ್ಯದಿಕ್ಕಿನಲ್ಲಿ ಯೂಪ ಸ್ತಂಭವನ್ನು ನೆಡಬೇಕು. ಅದರ ಎಲ್ಲ ದಿಕ್ಕುಗಳಲ್ಲಿ ಬಾವುಟಗಳನ್ನು ನೆಡಬೇಕು.

**ಮಂಡಪೋಪರಿ ಸಂಸ್ಥಾಪ್ಯ ಕಲಶಂ ಮಂತ್ರಮುಚ್ಚರೇತ್ ।**
**ಪ್ರಪಾಯಾಂ ವರುಣಃ ಪೂಜ್ಯೋ ವಿಶ್ವಕರ್ಮಾ ಪ್ರಯತ್ನತಃ ॥ ೧೪ ॥**

**ಪೃಥಿವೀಂ ಚ ಗಣೇಶಂ ಚ ಪೂಜಯಿತ್ವಾ ಹುನೇದ್ಘೃತಂ ।**
**ಸರ್ವವರ್ಜ್ಯಮಿದಂ ವಾಕ್ಯಂ ಧ್ವಜಮಾತ್ರಂ ವಿಧೀಯತೆ ॥ ೧೫ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ ದ್ವಾದಶೋಽಧ್ಯಾಯಃ.**



---

ಮಂಟಪದಮೇಲೆ ಕಲಶವನ್ನಿಟ್ಟು, ಮೇಲೆ ಸೂಚಿಸಿದ ಮಂತ್ರವನ್ನು ಹೇಳಬೇಕು. ಅರವಟ್ಟಿಗೆಯ ಪ್ರತಿಷ್ಠೆಯಲ್ಲಿ ವರುಣನನ್ನೂ, ವಿಶ್ವಕರ್ಮನನ್ನೂ, ಭೂಮಿ ಮತ್ತು ಗಣೇಶ ಇವರನ್ನೂ ಪೂಜಿಸಿ ತುಪ್ಪವನ್ನು ಹೋಮಮಾಡಬೇಕು. ಇದರಲ್ಲಿ ಉತ್ಸರ್ಜನವಾಕ್ಯದ ಆವಶ್ಯಕತೆ ಇಲ್ಲ. ಬಾವುಟವನ್ನು ಮಾತ್ರ ನೆಡಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯ ಭಾಗದಲ್ಲಿ ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ತೃತೀಯಭಾಗೇ
## ತ್ರಯೋದಶೋಽಧ್ಯಾಯಃ

॥ ಸೂತ ಉವಾಚ ॥

ಚತುರ್ಹಸ್ತಂ ಮಹಾಕೂಪಂ ಹಸ್ತ್ರಷೋಡಶನಿರ್ಮಿತಂ ।
ವಕ್ಷ್ಯೇ ತಂ ಚ ಪ್ರತಿಷ್ಠಾಂ ಚ ರಾತ್ರೌ ತ್ರೈರಾತ್ರಿಕಂ ಯಜೇತ್ ॥ ೧ ॥

ವರುಣಂ ಸಿತಕುಂಭೇ ಚ ಪ್ರಪಾಕೂಪಸ್ಯ ಪಶ್ಚಿಮೇ ।
ಗಾಯತ್ರ್ಯಾ ಸ್ನಾಪಯೇತ್ಪೂರ್ವಮಾಪೋಹಿಷ್ಠೇತಿ ವೈ ಕ್ರಮಾತ್ ॥ ೨ ॥

ಗಂಧದ್ವಾರೇತಿ ಗಂಧಂ ಚ ಅಂಶುನಾಚೇತಿ ತೈಲಕಂ ।
ಮನೋನ್ನಾ ಇತಿ ಕುಸುಮಂ ಧೂರಸೀತಿ ಚ ಧೂಪಕಂ ॥ ೩ ॥

---

## ಹದಿಮೂರನೆಯ ಅಧ್ಯಾಯ

೧-೪. ಸೂತಮುನಿವರ್ಯನು ಹೇಳುತ್ತಾನೆ—ನಾಲ್ಕುಮೊಳ ವಿಸ್ತಾರವಾದುದು ಸಣ್ಣಭಾವಿಯೆನಿಸುವುದು. ಹದಿನಾರುಮೊಳ ಉದ್ದ ಮತ್ತು ಅಷ್ಟೇ ಅಗಲವುಳ್ಳದು ಮಹಾಕೂಪವೆನಿಸುವುದು. ಅವುಗಳ ಪ್ರತಿಷ್ಠಾಕ್ರಮವನ್ನು ಹೇಳುವೆನು. ಈ ಕರ್ಮಾಂಗವಾಗಿ ಮೂರು ದಿನಗಳು ಪೂಜಾದಿಗಳನ್ನು ಮಾಡಬೇಕು. ಭಾವಿಯ ಪಶ್ಚಿಮ ದಿಕ್ಕಿನಲ್ಲಿ ಅರವಟ್ಟಿಗೆಯನ್ನು ಮಾಡಬೇಕು. ಅಲ್ಲಿ ಬಿಳಿಯಕಲಶದಲ್ಲಿ ವರುಣನನ್ನು ಪೂಜಿಸಬೇಕು. ಅದಕ್ಕಾಗಿ ಗಾಯತ್ರೀಮಂತ್ರದಿಂದಲೂ, 'ಆಪೋಹಿಷ್ಠಾ' ಎಂಬ ಮಂತ್ರದಿಂದಲೂ ಮೊದಲು ಸ್ನಾನವನ್ನು ಮಾಡಿಸಬೇಕು. 'ಗಂಧದ್ವಾರಾಂ' ಎಂಬ ಮಂತ್ರದಿಂದ ಗಂಧವನ್ನೂ, 'ಅಂಶುನಾಚ' ಎಂಬ ಮಂತ್ರದಿಂದ ಎಣ್ಣೆಯನ್ನೂ, 'ಮನೋನ್ನಾ' ಎಂಬ ಮಂತ್ರದಿಂದ ಹೂವನ್ನೂ, 'ಧೂರಸಿ' ಎಂಬ ಮಂತ್ರದಿಂದ

**ಕಯೂನೇತಿ ದದೇದ್ವಸ್ತ್ರಂ ನೈವೇದ್ಯಂ ದೀಪಚಂದನಂ ।**
**ಆದೌ ಶ್ರಾದ್ಧಂ ನ ಕರ್ತವ್ಯಂ ಪ್ರತಿಷ್ಠಾಂತೇ ವಿಧೀಯತೆ ॥ ೪ ॥**

**ದಂಪತೀಭೋಜನಂ ಕುರ್ಯಾದ್ವರಯೇದೇಕಬ್ರಾಹ್ಮಣಂ ।**
**ಮಂಡಪೇ ಚಾಷ್ಟಹಸ್ತೇ ಚ ಕಲಶಂ ತತ್ರ ವಿನ್ಯಸೇತ್ ॥ ೫ ॥**

**ಪೂಜಯೇದ್ವರುಣಂ ದೇವಂ ನಾರಾಯಣಸಮನ್ವಿತಂ ।**
**ಶಿವಂ ಚ ಪೃಥಿವೀಂ ಚೈವ ಸ್ವೈಃಸ್ವೈರ್ಮಂತ್ರೈರ್ಯಥಾಕ್ರಮಾತ್ ॥ ೬ ॥**

**ಕುಶಕಂಡಿಕಾಂ ತತಃ ಕೃತ್ವಾ ಸ್ಥಾಲೀಪಾಕವಿಧಾನತಃ ।**
**ವರುಣಂ ಚ ಸಮಭ್ಯರ್ಚ್ಯ ಜುಹುಯಾದಾಹುತೀರ್ದಶ ॥ ೭ ॥**

**ಅನ್ಯೇಷಾಂ ಚ ಸ್ರುವೇಣೈವ ದದ್ಯಾದೇಕಾಹುತಿಂ ಕ್ರಮಾತ್ ।**
**ವರುಣಸ್ಯೋಕ್ತ್ವವರುಣಂ ತತ್ವಾಯಾಮಿ ತತಃ ಪರಂ ॥ ೮ ॥**

**ವರುಣಸ್ಯೋತ್ತಂಭನಮಸೀತಿ ಚ ಆಭ್ಯಾಂ ದೇವಾಂಸ್ತಥೈವ ಚ ।**
**ಯೇನಾಪಾವಕಚಕ್ಷಸಾ ಪಂಚಮಂ ಸಮುದಾಹೃತಂ ॥ ೯ ॥**

---

ಧೂಪವನ್ನೂ, 'ಕಯಾನ' ಎಂಬ ಮಂತ್ರದಿಂದ ವಸ್ತ್ರವನ್ನೂ, ಹೀಗೆಯೇ ನೈವೇದ್ಯ ದೀಪ ಚಂದನಾದಿಗಳನ್ನೂ ಸಮರ್ಪಿಸಬೇಕು. ಈ ಕರ್ಮದ ಆದಿಯಲ್ಲಿ ನಾಂದೀ ಶ್ರಾದ್ಧವನ್ನು ಮಾಡಬಾರದು. ಪ್ರತಿಷ್ಠಾಕರ್ಮವಾದ ಮೇಲೆ ಮಾಡಬಹುದು.

೫-೬. ಮತ್ತು ಒಬ್ಬ ಬ್ರಾಹ್ಮಣನನ್ನು ಋತ್ವಿಜನನ್ನಾಗಿ ವರಿಸಬೇಕು. ದಂಪತಿಪೂಜೆ ಭೋಜನ ಇವು ಮುಖ್ಯ. ಮಂಟಪದಲ್ಲಿ ಎಂಟುಮೊಳ ವಿಸ್ತಾರವಾದ ಪ್ರದೇಶದಲ್ಲಿ ಕಲಶಸ್ಥಾಪನೆಯನ್ನು ಮಾಡಬೇಕು. ಆ ಕಲಶದಲ್ಲಿ ನಾರಾಯಣಸಹಿತ ನಾದ ವರುಣ, ಶಿವ, ಭೂಮಿ ಈ ದೇವತೆಗಳನ್ನು ಆಯಾ ದೇವತೆಗಳ ಮಂತ್ರಗಳಿಂದ ಆವಾಹಿಸಿ ಕ್ರಮವಾಗಿ ಪೂಜಿಸಬೇಕು.

೭-೧೦. ಆ ಮೇಲೆ ಸ್ಥಾಲೀಪಾಕ ವಿಧಾನದಿಂದ ವರುಣನಿಗೆ ಹತ್ತುಆಹುತಿಗಳನ್ನು ಹೋಮಮಾಡಬೇಕು. ಮಿಕ್ಕದೇವತೆಗಳಿಗೆ ಒಂದೊಂದು ಆಹುತಿಹೋಮವನ್ನು ಮಾಡಬೇಕು. 'ವರುಣಂ' 'ತತ್ವಾಯಾಮಿ' "ವರುಣಸ್ಯೋತ್ತಂಭನಮಸಿ" "ಆಭ್ಯಾಂ ದೇವಾಂ" "ಯೇನಾಪಾಪಕ ಚಕ್ಷಸಾ" ಎಂಬ ಐದೂ ವರುಣನಿಗೆ ಹೇಳಿರುವ

**ರಾತ್ರಸ್ಯ ಯೂಪಮಿತ್ಯಾದಿ ಪರಂ ಚ ದಶಮುಸ್ತಕಂ ।**
**ತತಃ ಸ್ವಿಷ್ಟಕೃತಂ ಕೃತ್ವಾ ಸಪ್ತಜಿಹ್ವಂ ಚರುಂ ನಯೇತ್ ॥ ೧೦ ॥**

**ಇಹ ವೇತ್ಯಾದಿಕಂ ಪಂಚ ತತಃ ಪಂಚಾಹುತಿಂ ಹುನೇತ್ ।**
**ಶಂಭವೇ ಚ ಪೃಥಿವ್ಯೈ ಚ ಮಹಾರಾಜಾಯ ಚ ಕ್ರಮಾತ್ ॥ ೧೧ ॥**

**ಚರುಪಾಕೇತಿ ನೈವೇದ್ಯಂ ಬಲಿಂ ಚೈವಾಗುರೂದನಂ ।**
**ಶಂಕರಾಯ ಚ ರುದ್ರಾಯ ಶರ್ವಾಯ ಪಶುಪತಯೇ ಇತಿ ಚ ॥**
**ಉಗ್ರಾಯ ಅಸನಾಯೇತಿ ಭವಾಯ ತದನಂತರಂ ॥ ೧೨ ॥**

**ಮಹಾದೇವಾಯ ಚ ಪುನರೀಶಾನಾಯೇತಿ ಚ ಕ್ರಮಾತ್ ।**
**ಚರುಪಾಕೇತಿ ನೈವೇದ್ಯಂ ಬಲಿಂ ಚೈವಾಗುರೂದನಂ ॥ ೧೩ ॥**

**ವಾಕ್ಯಪೂರ್ವಂ ಸೃಜೇತ್ತೋಯಂ ತತ್ರ ವಾಕ್ಕರಣಂ ಶೃಣು ॥ ೧೪ ॥**

---

ಪ್ರಸಿದ್ಧಮಂತ್ರಗಳಾಗಿವೆ. 'ರಾತ್ರಸ್ಯ ಯೂಪಂ' ಇತ್ಯಾದಿಯಾದ ಐದುಮಂತ್ರಗಳೂ ಸೇರಿ ಒಟ್ಟು ಹತ್ತುಮಂತ್ರಗಳು ಇಲ್ಲಿಗೆ ಬೇಕಾದ ಮಂತ್ರಗಳಲ್ಲಿ ಮುಖ್ಯವಾದುವು. ಆಮೇಲೆ ಸ್ವಿಷ್ಟಕೃತ್ ಹೋಮವನ್ನು ಮಾಡಿ ಅಗ್ನಿಗೆ ಚರುವನ್ನು ಸಮರ್ಪಿಸಬೇಕು.

೧೧–೧೪. 'ಇಹವಾ' ಇತ್ಯಾದಿ ಐದುಮಂತ್ರಗಳಿಂದ ಐದುಹೋಮಗಳನ್ನು ಮಾಡಬೇಕು ಶಿವನಿಗೂ, ಭೂಮಿಗೂ, ಮಹಾರಾಜನಿಗೂ ಈ ಫಲವು ಕ್ರಮವಾಗಿ ಸೇರುವುದು. ಶಂಕರಾಯ, ರುದ್ರಾಯ, ಶಿವಾಯ, ಪಶುಪತಯೇ, ಉಗ್ರಾಯ, ಅಸನಾಯ, ಭವಾಯ, ಮಹಾದೇವಾಯ, ಈಶಾನಾಯ ಈ ನಾಮಗಳ ಮುಂದೆ ಸ್ವಾಹಾಂತವಾಗಿ ಹೇಳಿ ಕ್ರಮವಾಗಿ ಹೋಮ ಮಾಡಿ 'ಚರುಪಾಕ' ಎಂಬ ಮಂತ್ರ ದಿಂದ ನೈವೇದ್ಯಮಾಡಬೇಕು. ಅಗುರು ಗಂಧವನ್ನು ಸೇರಿಸಿದ ಅನ್ನವನ್ನು ಬಲಿ ಸಮರ್ಪಣಮಾಡಬೇಕು. ಬಳಿಕ ಉತ್ಸರ್ಜನ ವಾಕ್ಯವನ್ನುಚ್ಚರಿಸಿ ನೀರನ್ನು ಸಂಪ್ರೋಕ್ಷಿಸಿ ಸಕಲ ಜನರ ಪ್ರಯೋಜನಕ್ಕಾಗಿ ಅದನ್ನು ಬಿಡಬೇಕು. (ವಾಕ್ಯ ದರ್ಥ:- ಸಂಕಲ್ಪಪೂರ್ವಕ ಈ ಶುಭದಿವಸದಲ್ಲಿ ಬ್ರಾಹ್ಮಣಾದಿ ಸಮಸ್ತಪ್ರಾಣಿಗಳ ಉಪಯೋಗಾರ್ಥವಾಗಿ ಈ ಗೋತ್ರದ ಇಂತಹ ಹೆಸರುಳ್ಳ ನನ್ನ ತಂದೆಗೆ ಶ್ರುತಿಸ್ಮೃತಿ ಗಳಲ್ಲಿ ಹೇಳಿದಪ್ರಕಾರ ಭಾವಿಯನ್ನು ಪ್ರತಿಷ್ಠೆಮಾಡುವುದರಿಂದುಂಟಾಗುವ ಫಲಪ್ರಾಪ್ತಿ ಗಳಿಗಾಗಿ ಪೂಜ್ಯವೂ ಚೆನ್ನಾಗಿ ಕಟ್ಟಿಸಿರುವುದೂ ಮತ್ತು ಪೂಜ್ಯನಾದ ವರುಣದೇವತಾ

**ಓಂ ಅದ್ಯೇತ್ಯಾದಿ ಬ್ರಾಹ್ಮಣಾದಿಸರ್ವಸತ್ವೇಭ್ಯಃ ಅಮುಕಗೋತ್ರಸ್ಯ ಮತ್ಪಿತುರಮುಕದೇವಶರ್ಮಣಃ ಶ್ರುತಿಸ್ಮೃತ್ಯಾದ್ಯುಕ್ತಂ ಕೂಪಪ್ರತಿಷ್ಠಾಜನ್ಯಫಲಪ್ರಾಪ್ತಯೇ ಇಮಂ ಸುಪೂಜಿತಂ ಸಚ್ಛಾದಿತಂ ವರುಣದೈವತಮಮುಕಸಗೋತ್ರ ಅಮುಕದೇವಶರ್ಮಾಹಮುತ್ಸೃಜೆ**

**ದಕ್ಷಿಣಾಂ ವಿಧಿವದ್ದದ್ಯಾದ್ಗಾಂ ಚ ದದ್ಯಾತ್ಪಯಸ್ವಿನೀಂ ॥ ೧೫ ॥**

**ಮಂಡಪೇ ಕ್ಷುದ್ರಕೂಪೇ ಚ ಪ್ರತಿಷ್ಠಾಂ ಶೃಣುತ ದ್ವಿಜಾಃ ।**
**ಗಣೇಶಂ ವರುಣಂ ಕುಂಭೇ ವಿಧಿವತ್ಪೂಜಯೇತ್ಸುಧೀಃ ॥ ೧೬ ॥**

**ವೇಷ್ಟಯೇದ್ರಕ್ತಸೂತ್ರೈಶ್ಚ ದದ್ಯಾದ್ಯೂಪಂ ಸಮುತ್ಸೃಜೇತ್ ।**
**ದಕ್ಷಿಣಾಂ ವಿಧಿವದ್ದದ್ಯಾದ್ವಿಪ್ರಾನ್ಸಂಪೂಜಯೇತ್ತತಃ ॥ ೧೭ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ ತ್ರಯೋದಶೋऽಧ್ಯಾಯಃ.**



---

ಕವಾದುದೂ ಆದ ಈ ಭಾವಿಯನ್ನು ಇಂಥ ಗೋತ್ರದ ಈ ಹೆಸರುಳ್ಳ ನಾನು ಬಿಟ್ಟಿರುತ್ತೇನೆ.)

೧೫-೧೬. ತರುವಾಯ ವಿಧಿಗಳಿಗನುಸಾರವಾದ ದಕ್ಷಿಣೆಯನ್ನೂ ಹೆಚ್ಚು ಹಾಲು ಕರೆಯುವ ಗೋವನ್ನೂ ದಾನಮಾಡಬೇಕು. ಎಲೈ ಬ್ರಾಹ್ಮಣರೇ! ಮಂಟಪ ಸಣ್ಣಭಾವಿ ಇವುಗಳ ಪ್ರತಿಷ್ಠೆಯಲ್ಲಿ ಕಲಶದಲ್ಲಿ ಗಣೇಶ ವರುಣ ಇವರನ್ನು ಪೂಜಿಸಿ, ಕೆಂಪುದಾರದಿಂದ ಸುತ್ತಿ ಯೂಪಸ್ತಂಭವನ್ನು ನೆಟ್ಟು, ಉತ್ಸರ್ಜನವಾಕ್ಯ ಪೂರ್ವಕವಾಗಿ ಬಿಡಬೇಕು. ಬಳಿಕ ವಿಧಿವತ್ತಾದ ದಕ್ಷಿಣೆಯನ್ನು ಕೊಡುವನಾಗಿ ಬ್ರಾಹ್ಮಣರ ಪೂಜೆಯನ್ನು ಮಾಡಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯ ಭಾಗವಲ್ಲಿ ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ತೃತೀಯಭಾಗೇ

## ಚತುರ್ದಶೋಽಧ್ಯಾಯಃ

॥ ಸೂತ ಉವಾಚ ॥

ಪುಷ್ಪಾರಾಮಪ್ರತಿಷ್ಠಾಂ ತು ವಕ್ಷ್ಯೇ ಶೃಣ್ವಂತು ವೈ ದ್ವಿಜಾಃ ।
ಮಧ್ಯೇ ವೇದಿಂ ತ್ರಿಹಸ್ತಾಂ ಚ ಕೃತ್ವಾ ಸಂಸ್ಥಾಪಯೇದ್ಘಟಂ ॥ ೧ ॥

ಅಧಿವಾಸಸ್ಯ ಪೂರ್ವೇದ್ಯುರ್ಯಥಾವದ್ವಿಪ್ರಭೋಜನಂ ।
ಕೃತ್ವಾ ಘಟೇ ಗಣೇಶಂ ಚ ಸೂರ್ಯಂ ಸೋಮಂ ಹುತಾಶನಂ ॥ ೨ ॥

ನಾರಾಯಣಂ ಸ್ಥಂಡಿಲೇ ಚ ಜುಹುಯಾನ್ಮಧುಪಾಯಸಂ ।
ವಿಧಿವದ್ಯೂಪಮಾರೋಪ್ಯ ಗೋಧೂಮಾನ್ ಸೇಚಯೇದ್ಗುರೌ ॥ ೩ ॥

---

### ಹದಿನಾಲ್ಕನೆಯ ಅಧ್ಯಾಯ

೧-೩. ಸೂತಮುನಿವರ್ಯನು ಹೇಳುತ್ತಾನೆ—ಋಷಿಗಳೇ! ಹೂವಿನತೋಟದ ಪ್ರತಿಷ್ಠಾವಿಧಿಯನ್ನು ಹೇಳುವೆನು ಕೇಳಿರಿ; ತೋಟದ ನಡುವೆ ಮೂರುಮೊಳ ವಿಸ್ತಾರವಾದ (ಉದ್ದ ಅಗಲ) ಜಗಲಿಯನ್ನು ಮಾಡಿ ಅಲ್ಲಿ ಕಲಶವನ್ನು ಸ್ಥಾಪಿಸಬೇಕು ಪ್ರತಿಷ್ಠೆಮಾಡುವ ದಿವಸದ ಹಿಂದಿನ ದಿನ ಶಾಸ್ತ್ರೋಕ್ತಕ್ರಮದಂತೆ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ಆ ಕುಂಭದಲ್ಲಿ ಗಣೇಶ, ಸೂರ್ಯ, ಸೋಮ, ಅಗ್ನಿ ಇವರನ್ನೂ; ನೆಲದಮೇಲೆ ಸ್ಥಂಡಿಲದಲ್ಲಿ ನಾರಾಯಣನನ್ನೂ ಪೂಜಿಸಿ, ವಿಧಿಗನುಸಾರವಾಗಿ ಜೇನಿನೊಡನೆ ಕೂಡಿದ ಪಾಯಸವನ್ನು ಹೋಮಮಾಡಬೇಕು. ಯೂಪಸ್ತಂಭವನ್ನು ಪೂಜಿಸಿ ಅದರ ಮೇಲೆ ಗೋಧಿಯನ್ನು ಸೇಚನಮಾಡಬೇಕು.

**ವೇಷ್ಟಯೇದ್ರಕ್ತಸೂತ್ರೈಶ್ಚ ಪ್ರದದ್ಯಾಚ್ಚೇತಿ ದಕ್ಷಿಣಾಂ ।**
**ಏತದ್ಧಾರಾಜಲೇನೈವ ಯವಾನ್ನಂ ಸಗುಡಂ ಪಯಃ ॥ ೪ ॥**

**ಐಶಾನ್ಯಾಂ ಯೂಪಮಾರೋಪ್ಯ ವಿಧಿವದ್ದ್ವಿಜಸತ್ತಮಾಃ ।**
**ಕರ್ಣವೇಧಂ ಸಮಾರೋಪ್ಯ ಸ್ನಾಪಯೇತ್ಕುಶವಾರಿಣಾ ॥ ೫ ॥**

**ಧಾನ್ಯಂ ಯವಂ ಚ ಗೋಧೂಮಂ ದದ್ಯಾದ್ವಿಪ್ರಾಯ ದಕ್ಷಿಣಾಂ ।**
**ಶತಧಾರಜಲೇನೈವ ವೇಷ್ಟಯೇತ್ಪರಿತೋ ದ್ವಿಜಾಃ ॥ ೬ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ ಚತುರ್ದಶೋಽಧ್ಯಾಯಃ.**



---

೪-೬. ಅದಕ್ಕೆ ಕೆಂಪಾದ ದಾರವನ್ನು ಸುತ್ತಬೇಕು. ಗುರುವಿಗೂ ಬ್ರಾಹ್ಮಣರಿಗೂ ದಕ್ಷಿಣೆಯನ್ನು ಕೊಡಬೇಕು. ಅದರ ಸುತ್ತಲೂ ಧಾರಾಕಾರವಾಗಿ ನೀರನ್ನು ಸುರಿಸುತ್ತಾ ಅನ್ನ ಬೆಲ್ಲ ಮತ್ತು ಹಾಲು ಇವುಗಳ ಬಲಿಯನ್ನು ಸಮರ್ಪಣಮಾಡಬೇಕು. ಈಶಾನ್ಯದಲ್ಲಿ ಆ ಯೂಪಸ್ತಂಭವನ್ನು ನೆಟ್ಟು ಗಿಡಗಳಿಗೆ ಕರ್ಣವೇಧನಶಾಸ್ತ್ರ ಮಾಡಿ ದರ್ಭೆಯ ನೀರಿನಿಂದ ಪ್ರೋಕ್ಷಿಸಬೇಕು. ಧಾನ್ಯ, ಯವೆ, ಗೋಧಿ ಇವುಗಳನ್ನು ದಕ್ಷಿಣೆಯೊಡನೆ ಬ್ರಾಹ್ಮಣರಿಗೆ ದಾನಮಾಡಬೇಕು. ಉತ್ಸರ್ಜನಮಾಡುವ ಹೂವಿನ ತೋಟದ ಸುತ್ತಲೂ ಅನೇಕ ಧಾರೆಗಳು ಬೀಳುವ ಧಾರಾಪಾತ್ರೆಯಿಂದ ನೀರನ್ನು ಸುರಿಸುತ್ತಾ ಪ್ರದಕ್ಷಿಣೆಮಾಡಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯ ಭಾಗದಲ್ಲಿ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ತೃತೀಯಭಾಗೇ

## ಪಂಚದಶೋಽಧ್ಯಾಯಃ

॥ ಸೂತ ಉವಾಚ ॥

ಜ್ಯೇಷ್ಠಾಷಾಢೇ ತುಲಸ್ಯಾಶ್ಚ ಪ್ರತಿಷ್ಠಾಂ ವಿಧಿವಚ್ಚರೇತ್ ।
ಯಜಮಾನಃ ಶುದ್ಧದಿನೇ ಏಕಾದಶ್ಯಾಮಥಾಪಿ ವಾ ॥ ೧ ॥

ತತೋ ರಾತ್ರೌ ಘಟಂ ಸ್ಥಾಪ್ಯ ಪೂಜಯೇತ್ಪರಮೇಶ್ವರಂ ।
ನಾರಾಯಣಂ ಶಿವಂ ಸೋಮಂ ಬ್ರಹ್ಮಾಣಂ ಚೇಂದ್ರಮೇವ ಚ ॥ ೨ ॥

ಗಾಯತ್ರ್ಯಾ ಸ್ನಪನಂ ಕುರ್ಯಾತ್ತಥೋಕ್ತೈರ್ಮಂತ್ರಕೈರಪಿ ।
ಕಯಾನೇತಿ ಚ ಗಂಧೇನ ಅಶ್ರುನೇತಿ ಚ ತೈಲಕಂ ॥ ೩ ॥

---

### ಹದಿನೈದನೆಯ ಅಧ್ಯಾಯ

೧-೩. ಸೂತಮುನಿವರ್ಯನು ಮುಂದುವರಿಸಿ ಹೇಳುತ್ತಾನೆ—ಯಜಮಾನನಾದವನು ಜ್ಯೇಷ್ಠಾಷಾಢಮಾಸಗಳಲ್ಲಿ ಶುಭಕರವಾದ ದಿನದಲ್ಲಾಗಲಿ, ಏಕಾದಶೀ ದಿನದಲ್ಲಾಗಲಿ ತುಲಸೀಪ್ರತಿಷ್ಠೆಯನ್ನು ಮಾಡಬೇಕು. ಕರ್ಮಾಂಗವಾಗಿ ರಾತ್ರಿಯಲ್ಲಿ ಕಲಶಸ್ಥಾಪನೆ ಮಾಡಿ ಪರಮೇಶ್ವರ, ನಾರಾಯಣ, ಶಿವ, ಸೋಮ, ಬ್ರಹ್ಮ, ದೇವೇಂದ್ರ ಇವರನ್ನು ಅದರಲ್ಲಿ ಪೂಜಿಸಬೇಕು. ಗಾಯತ್ರೀಮಂತ್ರದಿಂದಲೂ ಈ ವಿಧಿಯಲ್ಲಿ ಹೇಳಿದ ಮಂತ್ರಗಳಿಂದಲೂ ಸ್ನಪನವನ್ನು ಮಾಡಿಸಬೇಕು.

**ತ್ವಾಗಂಧರ್ವೇತಿ ಚ ಪುನಃ ಪುಷ್ಪಂ ಮಂಡಂಶನೇತಿ ಚ ।**
**ಮಾನಸ್ತೋಕೇತಿ ಕುಸುಮಂ ಶ್ರೀಶ್ಚತೇತಿ ಚ ಚಂದನಂ ॥ ೪ ॥**

**ವೈಶ್ವದೇವೀತಿ ಚ ಪುನರ್ಮಂತ್ರೇಣಾನೇನ ಚಂದನಂ ।**
**ದೂರ್ವಾಮಂತ್ರೇಣ ದೂರ್ವಾಶ್ಚ ರೂಪೇಣೇತಿ ಚ ದರ್ಪಣಂ ॥ ೫ ॥**

**ಫಲಮಂತ್ರೇಣ ಚ ಫಲಂ ಸಮೇಧೇತಿ ಚ ಅಂಜನಂ ।**
**ಸಕುಶೈಃ ಪೀತಸೂತ್ರಾದ್ಯೈರ್ವೇಷ್ಟಯೇತ್ಕ್ಷೀರಧಾರಯಾ ॥ ೬ ॥**

**ಶರಧಾರಾಜಲೇನೈವ ವೇಷ್ಟಯೇತ್ಸ್ವಗೃಹಂ ವ್ರಜೇತ್ ।**
**ವಸ್ತ್ರೇಣಾವೃತ್ಯ ವಿಧಿವದ್ಬುಧಃ ಕಾಲೇ ಘಟಂ ನ್ಯಸೇತ್ ॥ ೭ ॥**

**ಸಪ್ತಪಂಚತ್ರಿಭಿರ್ವಾಥ ತದ್ವಿಷ್ಣೋರಿತಿ ವೈ ಋಚಾ ।**
**ಸ್ನಾಪಯೇದಥ ಸಾಧ್ವೀಭಿಃ ಕೃತಮಂಗಲಪೂರ್ವಕಂ ॥ ೮ ॥**

**ತತಃ ಶ್ರಾದ್ಧಂ ಸಮಾಪ್ಯೈವ ಮಾತೃಪೂಜಾಪುರಃಸರಂ ।**
**ಆಚಾರ್ಯಂ ವರಯೇತ್ಪೂರ್ವಂ ಗಂಧಾದ್ಯೈಃ ಕುಸುಮೈರಪಿ ॥ ೯ ॥**

---

೪-೬. 'ಕಯಾನ' ಎಂಬ ಮಂತ್ರದಿಂದ ಗಂಧ, 'ಅಶ್ವಿನಾ' ಎಂಬ ಮಂತ್ರದಿಂದ ತೈಲ, 'ತ್ವಾ ಗಂಧರ್ವ' ಎಂಬ ಮಂತ್ರದಿಂದಲೂ, 'ಮಂಡಂಶನ' ಎಂಬ ಮಂತ್ರದಿಂದಲೂ ಪುಷ್ಪ, 'ಮಾನಸ್ತೋಕೇ' ಎಂಬ ಮಂತ್ರದಿಂದ ಕುಸುಮ, 'ಶ್ರೀಶ್ಚತೇ' ಎಂಬ ಮಂತ್ರದಿಂದ ಚಂದನ, ಮತ್ತೆ 'ವೈಶ್ವದೇವೀ' ಎಂಬ ಮಂತ್ರದಿಂದ ಚಂದನ, 'ಧೂರ್ವಾ' ಎಂಬ ಮಂತ್ರದಿಂದ ಗರಿಕೆ, 'ರೂಪೇಣ' ಎಂಬುದರಿಂದ ಕನ್ನಡಿ, ಫಲ ಮಂತ್ರದಿಂದ ಫಲ, 'ಸಮೇಧಾ' ಎಂಬ ಮಂತ್ರದಿಂದ ಅಂಜನ ಇವುಗಳನ್ನು ಸಮರ್ಪಿಸಬೇಕು. ಬಳಿಕ ದರ್ಭೆಸಮೇತವಾಗಿ ಹಳದೀಬಣ್ಣದ ದಾರದಿಂದ ಸುತ್ತಿ, ಹಾಲನ್ನೂ ನೀರನ್ನೂ ಶತಧಾರಾಪಾತ್ರೆಯಿಂದ ಅದರ ಸುತ್ತಲೂ ಹನಿಸುತ್ತಾ ಪ್ರದಕ್ಷಿಣೆ ಮಾಡಿ ಮನೆಗೆ ಬರಬೇಕು.

೭-೯. ಪ್ರತಿಷ್ಠಾಕಾಲದಲ್ಲಿ ಕಲಶಕ್ಕೆ ವಿಧಿವತ್ತಾಗಿ ವಸ್ತ್ರವನ್ನು ಹೊದ್ದಿಸಿ 'ತದ್ವಿಷ್ಣೋಃ' ಎಂಬ ಮಂತ್ರದಿಂದ ಏಳು, ಐದು ಅಥವಾ ಮೂರುಬಾರಿ ಪ್ರೋಕ್ಷಣ ಮಾಡಿ ಆ ಮೇಲೆ ಸುಮಂಗಲಿಯರಿಂದ ಮಂಗಲಾರ್ಥವಾಗಿ ಸ್ನಾನಮಾಡಿಸಬೇಕು. ಬಳಿಕ ಮಾತೃಪೂಜಾಪೂರ್ವಕವಾಗಿ ನಾಂದೀಶ್ರಾದ್ಧವನ್ನು ಮಾಡಿ ಗಂಧ ಹೂವುಗಳನ್ನು ಕೊಟ್ಟು ಆಚಾರ್ಯರನ್ನು ಗೊತ್ತುಮಾಡಬೇಕು.

ಆಚಾರ್ಯ ಏವ ಹೋತಾ ಸ್ಯಾದ್ಬ್ರಹ್ಮಾಣಂ ಚ ಸದಸ್ಯಕಂ ।
ಮಂಡಪೇ ದಶಹಸ್ತೇಽಪಿ ವರ್ತುಲೇ ಸ್ಥಂಡಿಲೇಷು ಚ ॥ ೧೦ ॥

ಸಹಸ್ರಂ ಮಂಡಲಂ ಕುರ್ಯಾತ್ತತ್ರ ನಾರಾಯಣಂ ಯಜೇತ್ ।
ಗ್ರಹಾಲ್ಲೋಕೇಶ್ವರಾನ್ಮಧ್ಯೇ ಆದಿತ್ಯಾಂಶ್ಚ ಮರುದ್ಗಣಾನ್ ॥ ೧೧ ॥

ರುದ್ರಾನ್ವಸೂಂಶ್ಚ ಕಲಶೇ ಪರಿತಶ್ಚ ಸಮರ್ಚಯೇತ್ ।
ಕುಶಕಂಡಿಕಾಂ ತತಃ ಕೃತ್ವಾ ಹೋಮಂ ತಿಲಯವೇನ ತು ॥ ೧೨ ॥

ಅಷ್ಟೋತ್ತರಶತಂ ಕುರ್ಯಾದನ್ಯೇಷಾಂ ಶಕ್ತಿತೋ ಹುನೇತ್ ।
ನಾರಾಯಣಂ ಸಮುದ್ದಿಶ್ಯ ದದ್ಯಾದುತ್ಸೃಜ್ಯ ಸತ್ತಮಾಃ ॥ ೧೩ ॥

ಮಧ್ಯೇ ಯೂಪಂ ಸಮುದ್ದಿಶ್ಯ ಚರುಪಾತ್ರಂ ಬಲಿಂ ದದೇತ್ ।
ಕದಲೀಂ ದಿಕ್ಷು ಸಂನ್ಯಸ್ಯ ಧ್ವಜಾನ್ ದಿಕ್ಷು ಪ್ರರೋಪಯೇತ್ ॥ ೧೪ ॥

---

೧೦-೧೨. ಇಲ್ಲಿ ಹೋತೃವೂ, ಬ್ರಾಹ್ಮಣನೂ, ಸದಸ್ಯನೂ ಎಲ್ಲವೂ ಆಚಾರ್ಯನೇ. ಮಂಟಪದಲ್ಲಾಗಲಿ, ತುಲಸಿಗೆ ಹತ್ತುಮೊಳ ದೂರದಲ್ಲಾಗಲಿ, ದುಂಡಾಗಿ ನೆಲದಲ್ಲಿ ಗುರುತುಮಾಡಿಕೊಂಡು ಅಲ್ಲಿ ಸಹಸ್ರದಳಕಮಲವನ್ನು ರಂಗವಲ್ಲಿಯಿಂದ ಬರೆದು ಆ ಪ್ರದೇಶದಲ್ಲಿ ನಾರಾಯಣನನ್ನು ಪೂಜಿಸಬೇಕು. ಆದಿತ್ಯಾದಿ ನವಗ್ರಹಗಳು ಲೋಕಪಾಲಕರು, ದ್ವಾದಶಾದಿತ್ಯರು, ದೇವಗಣಗಳು, ಏಕಾದಶರುದ್ರರು, ಅಷ್ಟವಸುಗಳು ಇವರುಗಳನ್ನೂ ಕಲಶದ ಸುತ್ತಲೂ ಪೂಜಿಸಬೇಕು. ತರುವಾಯ ಅಗ್ನಿಪ್ರತಿಷ್ಠಾಪನೆಯನ್ನು ಮಾಡಿ ಸುತ್ತಲೂ ಪರಿಸ್ತರಣವನ್ನು ಹಾಕಿ, ಯವೆ ಮತ್ತು ಎಳ್ಳುಗಳಿಂದ ಪ್ರಧಾನದೇವತೆಗೆ ನೂರೆಂಟುಹೋಮವನ್ನೂ, ಮಿಕ್ಕದೇವತೆಗಳಿಗೆ ಶಕ್ತ್ಯನುಸಾರ ಹೋಮವನ್ನೂ ಮಾಡಬೇಕು. ನಾರಾಯಣನನ್ನುದ್ದೇಶಿಸಿ ತುಲಸೀಗಿಡವನ್ನು ಉತ್ಸರ್ಜನಮಾಡಬೇಕು.

೧೪-೧೫. ಮಧ್ಯಭಾಗದಲ್ಲಿ ಯೂಪವನ್ನು ನೆಟ್ಟು ಚರುಪಾತ್ರೆಯಲ್ಲಿದ್ದ ಅನ್ನವನ್ನು ಬಲಿಸಮರ್ಪಣಮಾಡಬೇಕು. ಅನಂತರ ನಾಲ್ಕುದಿಕ್ಕುಗಳಲ್ಲಿ ಬಾಳೆಯ ಕಂಬವನ್ನು ನೆಟ್ಟು ಬಾವುಟಗಳನ್ನು ಕಟ್ಟಬೇಕು. ಆಚಾರ್ಯನಿಗೆ ಸುವರ್ಣದಕ್ಷಿಣೆಯನ್ನೂ ಎಳ್ಳು ಮತ್ತು ಧಾನ್ಯಗಳನ್ನೂ ಪುಷ್ಪಸಹಿತವಾಗಿ ಕೊಡಬೇಕಲ್ಲದೆ ಹಾಲುಕರೆ

**ದಕ್ಷಿಣಾಂ ಕಾಂಚನಂ ದದ್ಯಾತ್ತಿಲಂ ಧಾನ್ಯಂ ಸಪುಷ್ಪಕಂ ।**
**ಧೇನುಂ ಪಯಸ್ವಿನೀಂ ದದ್ಯಾದ್ವೇಷ್ಟಯೇತ್ಕ್ಷೀರಧಾರಯಾ ॥ ೧೫ ॥**

**ಜಯಂತ್ಯಾಃ ಸೋಮವೃಕ್ಷಸ್ಯ ತಥಾ ಸೋಮವಟಸ್ಯ ಚ ।**
**ಪನಸಸ್ಯ ಕದಂಬಸ್ಯ ನಿಂಬಸ್ಯ ದ್ವಿಜಸತ್ತಮಾಃ ॥ ೧೬ ॥**

**ಪಾಟಲಾಕನಕಸ್ಯೈವ ಶಾಲ್ಮಲೀನಿಂಬಕಸ್ಯ ಚ ।**
**ಬೀಜಾಶೋಕವಟಸ್ಯೈವ ಪ್ರತಿಷ್ಠಾಂ ನೈವ ಕಾರಯೇತ್ ॥ ೧೭ ॥**

**ಭದ್ರಕಸ್ಯ ಶಮೀಕೋಣಚಂಡಾತಕಬಕಸ್ಯ ಚ ।**
**ಖದಿರಸ್ಯೈವ ಕರ್ತವ್ಯಂ ಕರ್ಣವೇಧಂ ನ ಕಾರಯೇತ್ ॥ ೧೮ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ ಪಂಚದಶೋಽಧ್ಯಾಯಃ.**



---

ಯುವ ಹಸುವನ್ನೂ ದಾನಮಾಡಬೇಕು. ಗಿಡದಸುತ್ತಲೂ ಹಾಲಿನ ಧಾರೆಯಿಂದ ಸುತ್ತುಗಟ್ಟಬೇಕು.

೧೬-೧೭. ಜಯಂತೀಮರ, ಸೋಮ, ಸೋಮವಟ, ಹಲಸು, ಕದಂಬ, ಬೇವು, ಪಾದರಿ, ಕನಕ, ಬೂರಗ, ಹೆಬ್ಬೇವು, ಅಶೋಕ, ಆಲ ಈ ಮರಗಳಿಗೆ ಪ್ರತಿಷ್ಠಾಕಾರ್ಯವನ್ನು ಮಾಡಬಾರದು.

೧೮. ಭದ್ರಕ, ಬನ್ನಿ, ಚಂಡಾತಕ, ಬಕ, ಕಗ್ಗಲೀ ಈ ಮರಗಳ ಪ್ರತಿಷ್ಠೆಯಲ್ಲಿ ಕರ್ಣವೇಧ ಮಾಡಬೇಕಾದುದಿಲ್ಲ ಆದುದರಿಂದ ಅದನ್ನು ಮಾಡಬಾರದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯ ಭಾಗದಲ್ಲಿ ಹದಿನೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ತೃತೀಯಭಾಗೇ

## ಷೋಡಶೋಽಧ್ಯಾಯಃ

---

॥ ಸೂತ ಉವಾಚ ॥

ವೃಕ್ಷಾದೀನಾಂ ಪ್ರತಿಷ್ಠಾಂ ಚ ಉತ್ತಮೋಷೂತ್ತಮಂ ಚರೇತ್ ।
ಮಧ್ಯೇಮಧ್ಯೇ ಕನಿಷ್ಠಾ ತು ಕನಿಷ್ಠಂ ಪರಿಕೀರ್ತಿತಂ ॥ ೧ ॥

ವರ್ತುಲಂ ಮಂಡಪಂ ಕುರ್ಯಾತ್ತತ್ರ ಶೀರ್ಷೇ ತಥಾಂತ್ಯಕೇ ।
ಮಧ್ಯೇ ವಾ ವೇದಿಕಾಂ ಕುರ್ಯಾತ್ತನ್ಮಧ್ಯೇ ಕುಂಡಮಂಡಲಂ ॥ ೨ ॥

ಪೂರ್ವೇದ್ಯೂ ರಾತ್ರಿಸಮಯೇ ಘಟಂ ಸಂಸ್ಥಾಪ್ಯ ಪೂಜಯೇತ್ ।
ಶೇಷಂ ಸಂಪೂಜ್ಯ ವಿಧಿವತ್ಪೃಥಿವೀಂ ಚ ಶಿವಂ ತಥಾ ॥ ೩ ॥

ಗಂಧತೋಯೇನ ಗಾಯತ್ರ್ಯಾ ಸೇತುಂ ಸಂಪೂಜ್ಯ ವೋಕ್ಷಯೇತ್ ।
ಕಯಾನೇತಿ ಚ ಮಂತ್ರೇಣ ಆಪ್ಯಾಯಸ್ವೇತಿ ವೈ ಋಚಾ ॥ ೪ ॥

---

## ಹದಿನಾರನೆಯ ಅಧ್ಯಾಯ

೧-೬. ಸೂತಮುನಿವರ್ಯನು ಶೌನಕಾದಿಗಳಿಗೆ ಹೇಳುತ್ತಾನೆ—ವೃಕ್ಷಾದಿಗಳಂತೆ ಪ್ರತಿಷ್ಠೆಯಲ್ಲೂ ಅವುಗಳ ಯೋಗ್ಯತಾನುಸಾರವಾಗಿ ಉತ್ತಮ ಮಧ್ಯಮ ಮತ್ತು ಕನಿಷ್ಠ ಎಂಬ ಮೂರುಪ್ರಕಾರಗಳಿರುವುವು. ಸೇತುಪ್ರತಿಷ್ಠೆಯಲ್ಲಿ ಅದರ ಆದಿ ಮಧ್ಯ ಅಥವಾ ಅಂತ್ಯದಲ್ಲಿ ವರ್ತುಲಾಕಾರವಾದ ಮಂಡಲವನ್ನು ಮಾಡಿ ಒಂದುಕಡೆ ಜಗಲಿಯನ್ನು ಮಾಡಿ ಅದರ ಮಧ್ಯದಲ್ಲಿ ಹೋಮಕುಂಡವನ್ನು ಮಾಡಬೇಕು. ಹಿಂದಿನ ರಾತ್ರಿಯಲ್ಲಿ ಕಲಶಸ್ಥಾಪನೆಯನ್ನು ಮಾಡಿ ಅದರಲ್ಲಿ ವಿಧಿಗನುಸಾರವಾಗಿ ಆದಿಶೇಷನನ್ನೂ, ಭೂಮಿಯನ್ನೂ, ಶಿವನನ್ನೂ ಆವಾಹಿಸಿ, ಗಾಯತ್ರೀ ಮಂತ್ರ ಮತ್ತು ಮುಂದೆ ಸೂಚಿಸುವ ಮಂತ್ರಗಳಿಂದ ಸೇತುವೆಯನ್ನು ಗಂಧದ ನೀರಿನಿಂದ ಪ್ರೋಕ್ಷಿಸಬೇಕು.

ದದ್ಯಾದ್ಗಂಧಾದಿಕಂ ಶ್ರೀಶ್ಚತೇಲಕ್ಷ್ಮೀರಿತಿ ಚಂದನಂ ।
ದೂರ್ವಾಮಂತ್ರೇಣ ದೂರ್ವಾಶ್ಚ ಫಲಮಂತ್ರೇಣ ವೈ ಫಲಂ ॥ ೫ ॥

ಶನ್ನೋದೇವೀತಿಮಂತ್ರೇಣ ದದ್ಯಾತ್ಕುಶಪವಿತ್ರಕಂ ।
ಸುರಾಸುರೇತಿ ಮಂತ್ರೇಣ ಪ್ರದದ್ಯಾದ್ವಸ್ತ್ರಯುಗ್ಮಕಂ ॥ ೬ ॥

ಅಂಜನಾಲಕ್ತಕಂ ಕುರ್ಯಾನ್ಮನೋನ್ನಾ ಇತಿ ಸಂಪಠನ್ ।
ಕುರ್ಯಾಚ್ಛ್ರಾದ್ಧಂ ಪರದಿನೇ ವಸುಧಾರಾಪುರಃಸರಂ ॥ ೭ ॥

ವರಯೇದಥ ಆಚಾರ್ಯಂ ಹೋತಾರಂ ಸ್ವವರಶ್ಚರೇತ್ ।
ಪಾತ್ರದ್ವಯಂ ವಿಧಾತವ್ಯಂ ಸದಸ್ಯಾಚಾರ್ಯಮೇವ ಚ ॥ ೮ ॥

ಸೇತುಯಾಗೇ ವಿಧಾತವ್ಯಂ ತಥಾ ಧಾನ್ಯಾಚಲೇಽಪಿ ಚ ।
ಸಹಸ್ರಹೋಮೇ ವೈಕಂ ತು ವಿವಾಹೇ ಬ್ರಹ್ಮಋತ್ವಿಜೌ ॥ ೯ ॥

ಯಜೇದೇನಂ ಕೃತೇ ಮೌಲಿಯಾಗಾರ್ಥಂ ಯಾಗಮಂಡಪಂ ।
ವೇದಿಮಾವಾಹಯೇತ್ಪೂರ್ವಂ ಮಂಡಪಂ ಪ್ರತಿಪೂಜಯೇತ್ ॥ ೧೦ ॥

---

'ಕಯಾನ' ಎಂಬ ಮಂತ್ರದಿಂದಲೂ, 'ಆಪ್ಯಾಯಸ್ವ' ಎಂಬ ಮಂತ್ರದಿಂದಲೂ ಗಂಧೋದಕವನ್ನು ಸಮರ್ಪಿಸಿ 'ಶ್ರೀಶ್ಚತೇಲಕ್ಷ್ಮೀಃ' ಎಂಬ ಮಂತ್ರದಿಂದ ಚಂದನವನ್ನೂ ದೂರ್ವಾಮಂತ್ರದಿಂದ ದರ್ಭೆಯ ಪವಿತ್ರವನ್ನೂ, 'ಸುರಾಸುರಾ' ಎಂಬ ಮಂತ್ರದಿಂದ ಎರಡು ವಸ್ತ್ರಗಳನ್ನೂ ಸಮರ್ಪಿಸಬೇಕು.

೭-೯. 'ಮನೋನ್ನಾ' ಎಂಬ ಮಂತ್ರವನ್ನು ಹೇಳುತ್ತಾ ಅಂಜನವನ್ನೂ, ಅರಗಿನರಸವನ್ನೂ ಆಲಂಕರಿಸಿ ಉತ್ಸರ್ಜನ ಮಾಡಬೇಕು. ಮಾರನೆಯದಿನ ವಸುಧಾರಾ ಪುರಸ್ಸರವಾಗಿ ವೃದ್ಧಿಶ್ರಾದ್ಧವನ್ನು, (ನಾಂದೀಶ್ರಾದ್ಧವನ್ನು) ಮಾಡಬೇಕು. ಆಮೇಲೆ ಆಚಾರ್ಯನನ್ನೂ ಹೋತೃವನ್ನೂ ವರಣಮಾಡಬೇಕು. ಋತ್ವಿಗ್ವರಣ ವಿಚಾರವಲ್ಲಿ ಸದಸ್ಯ ಆಚಾರ್ಯ ಎಂಬೆರಡು ಪಾತ್ರಗಳು ಸೇತುಯಾಗದಲ್ಲಿರಲೇಬೇಕು. ಧಾನ್ಯಾಚಲ, ಸಹಸ್ರಹೋಮಗಳಲ್ಲಿ ಒಬ್ಬನೇ ಆದರೂ ಆಗಬಹುದು. ವಿವಾಹದಲ್ಲಿ ಬ್ರಹ್ಮ ಋತ್ವಿಕ್ಕುಗಳಿಬ್ಬರು ಅವಶ್ಯವಾಗಿ ಬೇಕು ಎಂದು ಹೇಳಿದೆ.

೧೦-೧೫. ಮುಖ್ಯ ಯಾಗಕ್ಕೋಸ್ಕರವಾಗಿ ಯಾಗಮಂಟಪವನ್ನು ಮಾಡಬೇಕು ಮೊದಲು ಯಾಗವೇದಿಕೆಯನ್ನು ಪೂಜಿಸಿ ಬಳಿಕ ಮಂಟಪವನ್ನು

ವಿಘ್ನಗ್ರಹಾಲ್ಲೋಕಪಾಲಾ ಸರ್ವಸಿದ್ಧಿಪ್ರದಾಯಕಾ ।
ಸ್ಥಂಡಿಲೇ ಸರ್ವತೋಭದ್ರೇ ಶೇಷಂ ವಿಷ್ಣುಂ ಪ್ರದರ್ಶಯೇತ್ ॥ ೧೧ ॥

ತತ್ರೈವ ತು ವರಾಹಾಖ್ಯಂ ಪ್ರತೀತಮೃತ್ವಿಗುತ್ತಮಂ ।
ಸ್ಥಾಲೀಪಾಕೇನ ತು ಜುಹುಯಾದಷ್ಟಾವಿಂಶತಿಕತ್ರಯಂ ॥ ೧೨ ॥

ಆಜ್ಯೇನ ತು ವರಾಹಸ್ಯ ಹೋಮಪಂಚಕಮೀರಿತಂ ।
ತತಸ್ತಿಲಯವೇನೈವ ಏಕೈಕಾಮಾಹುತಿಂ ಕ್ರಮಾತ್ ॥ ೧೩ ॥

ಬಲಿಂ ದದ್ಯಾತ್ಪೃಥಗ್ರೂಪಂ ಶೇಷಯೇದ್ವಿಧಿಪೂರ್ವಕಂ ।
ಪಿಷ್ಟಕಾನ್ನಂ ಘೃತಾನ್ನಂ ಚ ವಿಸ್ತಾರೇ ವಾ ಗುಡೌದನಂ ॥ ೧೪ ॥

ಮಾಷಭಕ್ತಂ ತು ಲೋಕಾಯ ಪೃಥಿವ್ಯೈಃ ಪರಮಾನ್ನಕಂ ।
ವಾಕ್ಯಪೂರ್ವಂ ಸೃಜೇದ್ಧೀರೋ ವಾಕ್ಯಪ್ರಕರಣಂ ಶೃಣು ॥ ೧೫ ॥

ಓಂ ಅದ್ಯೇತ್ಯಾತಿ ಏಕವಿಂಶತಿಕುಲಸ್ಯ ವಿಶಿಷ್ಟಸ್ವರ್ಗಪ್ರಾಪ್ತಯೇ ಇಮಂ ಸೇತುಂ ಸಂಕ್ರಮಸಮೇತಂ ವಿಷ್ಣುದೈವತಂ ಸುರಪೂಜಿತಂ ವಿಧಿವದ್ವಾಸುದೇವಸ್ಯ ಪ್ರೀತಯೇಽಹಮುತ್ಸೃಜೇ

---

ಪೂಜಿಸಬೇಕು. ನೆಲದಮೇಲೆ ಸರ್ವತೋಭದ್ರ ಚಕ್ರವನ್ನು ಬರೆದು ಸರ್ವಸಿದ್ಧಿಯನ್ನು ಕೊಡತಕ್ಕ ವಿನಾಯಕ ಗ್ರಹಗಳು ದಿಕ್ಪಾಲಕರು ಇವರನ್ನೂ, ಆದಿಶೇಷನನ್ನೂ, ವಿಷ್ಣುವನ್ನೂ ಪೂಜಿಸಬೇಕು. ಈ ಸಂದರ್ಭವಲ್ಲಿ ವರಾಹನೆಂಬ ಪ್ರಸಿದ್ಧನಾದ ಋತ್ವಿಕ್ಕು ಶ್ರೇಷ್ಠನೆನಿಸುವನು. ಸ್ಥಾಲೀಪಾಕವನ್ನು ಮಾಡಿ ಪ್ರಧಾನದೇವತೆಗಳಿಗೆ ಮೂರಾವರ್ತಿ ಒಂದು ಸಲಕ್ಕೆ ಇಪ್ಪತ್ತೆಂಟರಂತೆ ಹೋಮವನ್ನು ಮಾಡಬೇಕು. ವರಾಹ ಋತ್ವಿಜನೂ ತುಪ್ಪದಿಂದ ಐದುಹೋಮವನ್ನು ಮಾಡಬೇಕು. ಆ ಮೇಲೆ ಎಳ್ಳು ಯವಧಾನ್ಯ ಇವುಗಳಿಂದ ಕ್ರಮವಾಗಿ ಪೂಜಿಸಿದ ದೇವತೆಗಳಿಗೆಲ್ಲಾ ಒಂದೊಂದೇ ಆಹುತಿಯನ್ನು ಕೊಟ್ಟು ಬೇರೆಯಾಗಿ ಬಲಿಯನ್ನು ಸಮರ್ಪಿಸಿ ವಿಧಿಯನ್ನು ಸಂಪೂರ್ಣಗೊಳಿಸಬೇಕು ಹಿಟ್ಟು, ಅನ್ನ, ತುಪ್ಪದಅನ್ನ, ಬೆಲ್ಲದಅನ್ನ, ಉದ್ದಿನಅನ್ನ, ಪರಮಾನ್ನ ಇವುಗಳೇ ಬೇರೆ ಬೇರೆಯಾದ ಬಲಿಗಳು. ಬಳಿಕ ಉತ್ಸರ್ಜನವಾಕ್ಯವನ್ನು ಹೇಳುತ್ತಾ ಪ್ರತಿಷ್ಠಾವಿಷಯವಾದ ಸೇತುವನ್ನು ಎಲ್ಲರ ಉಪಯೋಗಕ್ಕಾಗಿ ಬಿಡಬೇಕು. ಆ (ಉತ್ಸರ್ಜನವಾಕ್ಯದ ಅರ್ಥ:-ಈ ದಿವಸ ಇಪ್ಪತ್ತೊಂದುಕುಲದ ಪಿತೃಗಳಿಗೆ ವಿಶೇಷವಾದ ಸ್ವರ್ಗಫಲಪ್ರಾಪ್ತಿ

**ಬದ್ಧಾಂಜಲಿಃ ಪಠೇನ್ಮಂತ್ರಂ ಕುರ್ಯಾಚ್ಚ ವಿಧಿವತ್ತತಃ ।**
**ಪಿಚ್ಛಿಲೇ ಪತಿತಾನಾಂ ಚ ಉದ್ಗತೇನಾಂಗಭಂಗತಃ ॥**
**ಪ್ರತಿಷ್ಠಿತೇ ಧರ್ಮಸೇತೌ ಧರ್ಮೋ ಮೇ ಸ್ಯಾನ್ನ ಪಾತಕಂ ॥ ೧೬ ॥**

**ಸೇತೋರಸ್ಯ ಪ್ರಬಂಧಸ್ಯ ಶ್ರದ್ಧಯಾ ಪರಯಾ ಯುತಃ ।**
**ಯೇ ಚಾತ್ರ ಪ್ರಾಣಿನಃ ಸಂತಿ ಸರ್ವೇಷಾಂ ಪ್ರಾಣಧಾರಕಾಃ ॥ ೧೭ ॥**

**ವೇದಾಗಮೇನ ಯತ್ಪುಣ್ಯಂ ಕಥಿತಂ ಸೇತುಬಂಧನೇ ।**
**ತತ್ಪುಣ್ಯಂ ತು ಮಯಾ ದೇವ ಪಾಥೇಯೇ ಹಿ ಸಮರ್ಪಿತಂ ॥ ೧೮ ॥**

**ಯೂಪಂ ದದ್ಯಾದಿತಿಮಂತ್ರೇಣ ಅಂತೇ ಚಾಪಿ ತಥಾ ಧ್ವಜಾನ್ ।**
**ವಿಧಿವದ್ದಕ್ಷಿಣಾಂ ದದ್ಯಾತ್ಕುಲಾನಿ ನವ ಪಂಚ ವಾ ॥ ೧೯ ॥**

**ಪೂರ್ಣಾಂ ದತ್ವಾ ಸವಿತ್ರೇಽರ್ಘ್ಯಂ ದತ್ವಾ ಚ ಸ್ವಗೃಹಂ ವ್ರಜೇತ್ ।**
**ಅನಾತಪೇ ಕ್ಷುದ್ರಸೇತೋಃ ಪ್ರತಿಷ್ಠಾಂ ವಿಧಿವಚ್ಚರೇತ್ ॥ ೨೦ ॥**

---

ಗಾಗಿ ವಿಷ್ಣುದೇವತಾಕವಾದುದೂ, ದೇವತೆಗಳಿಗೂ ಪೂಜಾಯೋಗ್ಯವಾದುದೂ ಆದ ಸಂಕ್ರಮಸಹಿತವಾದ ಈ ಸೇತುವೆಯನ್ನು ವಾಸುದೇವನ ಪ್ರೀತ್ಯರ್ಥವಾಗಿ ವಿಧಿಯನ್ನನುಸರಿಸಿ ನಾನು ಎಲ್ಲರ ಉಪಯೋಗಕ್ಕಾಗಿ ಬಿಟ್ಟಿರುವೆನು.)

೧೬-೧೮. ಬಳಿಕ ಕೈಮುಗಿದುಕೊಂಡು ಈ ಅರ್ಥದ ಮಂತ್ರ ಹೇಳಬೇಕು. ಈ ಧರ್ಮಸೇತುವೆಯನ್ನು ಪ್ರತಿಷ್ಠೆಮಾಡಿದುದರಿಂದ ಈ ಸೇತುವೆಯ ಮೇಲಿನಿಂದ ಗಟ್ಟಿಯಾದ ನೆಲಕ್ಕೆ ಬಿದ್ದು ಕೈಕಾಲು ಮುರಿದರೂ, ಮೇಲಕ್ಕೆ ಹತ್ತುವಾಗ ಬಿದ್ದು ಅಪಾಯವಾದರೂ ಆ ಪಾಪವು ನನಗೆ ಬಾರದಿರಲಿ. ಇದರ ನಿರ್ಮಾಣದಿಂದ ಲಭಿಸುವ ಪುಣ್ಯವು ನನಗೆ ಉಂಟಾಗಲಿ. ಈ ಸೇತುವೆಯನ್ನು ಕಟ್ಟುವ ವಿಷಯದಲ್ಲಿ ಯಾರು ಅತ್ಯಂತಾಸಕ್ತಿಯಿಂದ ಕೆಲಸವನ್ನು ಮಾಡಿದರೋ, ಅವರು ಸಮಸ್ತರ ಪ್ರಾಣವನ್ನುಳಿಸಿದವರಾಗಿರುವರು. ವೇದಶಾಸ್ತ್ರಗಳಲ್ಲಿ ಸೇತುವೆಯನ್ನು ಕಟ್ಟಿಸಿದವರಿಗೆ ಯಾವ ಪುಣ್ಯವು ಬರುವುದೆಂದು ಹೇಳಿದೆಯೋ, ಆ ಪುಣ್ಯವು ನನ್ನಿಂದ ಆರ್ಜಿತವಾಗಿ ನನ್ನ ಪಿತೃಗಳಿಗೆ ಸ್ವರ್ಗಗಮನಕಾಲದಲ್ಲಿ ಪಾಥೇಯವಾಗಿ ದಾರಿಯಲ್ಲಿ ಸುಖವನ್ನನುಭವಿಸಲು ಯೋಗ್ಯವಾಗಿರಲಿ.

೧೯-೨೩. ಕೊನೆಯಲ್ಲಿ ಯೂಪವನ್ನೂ ಧ್ವಜವನ್ನೂ ಈ ಮಂತ್ರಪೂರ್ವಕವಾಗಿ ನೆಟ್ಟು, ವಿಧಿಗನುಸಾರವಾಗಿ ಐದು ಅಥವಾ ಒಂಬತ್ತು ಮಂದಿ ವಿಪ್ರರಿಗೆ ದಕ್ಷಿಣೆ

**ಪೂರ್ವಂ ತದಧಿವಾಸಂ ಚ ಪ್ರಭಾತೇ ವಿಪ್ರಭೋಜನಂ ।**
**ಸೇತುಮಧ್ಯಂ ತತೋ ಗತ್ವಾ ಗಂಧಾದೀನ್ವಿಧಿವಚ್ಚರೇತ್ ॥ ೨೧ ॥**

**ವಿಷ್ಣುಂ ಶಿವಂ ಹುತಾಶಂ ಚ ಏಕಕುಂಡೇ ಸಮರ್ಚಯೇತ್ ।**
**ವಾಸ್ತೋಷ್ಪತಿಂ ಯಜೇತ್ತತ್ರ ಹೋಮಂ ತಿಲಯವೇನ ತು ॥ ೨೨ ॥**

**ಕುರ್ಯಾದೇಕೈಕಶೋ ವಿಪ್ರಾ ಅಷ್ಟಾವಿಂಶತಿಸಂಖ್ಯಯಾ ।**
**ಉತ್ಸೃಜ್ಯ ದಾಪಯೇದ್ಧೂಪಂ ಧ್ವಜವರ್ಜ್ಯಂ ಹಿ ಸತ್ತಮಾಃ ।**
**ಜ್ಞಾತಿಭಿಃ ಸಹ ಭುಂಜೀತ ಕೃತಕೃತ್ಯೋಽಭಿಧೀಯತೇ ॥ ೨೩ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ ಷೋಡಶೋಽಧ್ಯಾಯಃ.**

---

ಯನ್ನು ಕೊಡಬೇಕು. ಅನಂತರ ಪೂರ್ಣಾಹುತಿಹೋಮವನ್ನು ನೆರವೇರಿಸಬೇಕು. ತರುವಾಯ ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು ಮನೆಗೆ ಬರಬೇಕು. ಸಣ್ಣಸೇತುವೆಯ ಪ್ರತಿಷ್ಠೆಯನ್ನು ಬಿಸಿಲು ಇಲ್ಲದೇ ಇರುವಾಗ ವಿಧಿಗನುಸಾರವಾಗಿ ಮಾಡಬೇಕು. ಹಿಂದಿನ ದಿನವೇ ಅಧಿವಾಸರೂಪವಾದ ಕಲಶಸ್ಥಾಪನೆಯನ್ನು ಮಾಡಿ ಪ್ರಾತಃಕಾಲದಲ್ಲಿ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ಸೇತುವೆಯ ಮಧ್ಯಪ್ರದೇಶಕ್ಕೆ ಹೋಗಿ ವಿಧಿಗನುಸಾರವಾಗಿ ಗಂಧಾದಿಗಳಿಂದ ಅದನ್ನು ಪೂಜಿಸಿ ಒಂದೇ ಕುಂಡದಲ್ಲಿ ವಿಷ್ಣು, ಶಿವ, ಅಗ್ನಿ ಇವರನ್ನೂ, ವಾಸ್ತುಪುರುಷನನ್ನೂ ಪೂಜಿಸಿ, ಎಳ್ಳು ಯವಧಾನ್ಯ ಇವುಗಳಿಂದ ಒಂದೊಂದು ದೇವತೆಗೂ ಇಪ್ಪತ್ತೆಂಟು ಆಹುತಿಗಳ ಹೋಮವನ್ನು ಮಾಡಿ ಬಳಿಕ ಸೇತುವೆಯನ್ನು ಎಲ್ಲರ ಉಪಯೋಗಕ್ಕಾಗಿ ಉತ್ಸರ್ಜನಮಾಡಬೇಕು. ಈ ಸಂದರ್ಭದಲ್ಲಿ ಬಾವುಟಗಳನ್ನು ಉಪಯೋಗಿಸಬೇಕಾದುದಿಲ್ಲ. ವಾಸುದೇವನಿಗೆ ಧೂಪವನ್ನು ಬೆಳಗಿ ಜ್ಞಾತಿಗಳೊಡನೆ ಭೋಜನವನ್ನು ಮಾಡಿದರೆ ಅವನು ಕೃತಕೃತ್ಯನಾಗುವನೆಂದು ಶಾಸ್ತ್ರದಲ್ಲಿ ಹೇಳಿರುವುದು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯ ಭಾಗದಲ್ಲಿ ಹದಿನಾರನೆಯ ಅಧ್ಯಾಯವು ಮುಗಿದುದು.

 

॥ ಶ್ರೀಃ ॥

---

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮ ಪರ್ವಣಿ ತೃತೀಯಭಾಗೇ

## ಸಪ್ತದಶೋಽಧ್ಯಾಯಃ

---

॥ ಸೂತ ಉವಾಚ ॥

ತತ್ರ ದಂಡೇ ಚ ವಿಪ್ರೇಂದ್ರಾಶ್ಚತುರಸ್ರೇ ಸಮಂತತಃ ।
ಷಷ್ಟಿಹಸ್ತಮಿತಾಂ ಭೂಮಿಂ ಸಸ್ಯಪೂರ್ಣಾಂ ಮನೋರಮಾಂ ॥ ೧ ॥

ಪ್ರಚಾರಾರ್ಥಂ ಗವಾಂ ಚೈವ ಯೋ ದದ್ಯಾತ್ಸುಸಮಾಹಿತಃ ।
ಷಷ್ಟಿವರ್ಷಸಹಸ್ರಾಣಿ ರುದ್ರಲೋಕೇ ಮಹೀಯತೇ ॥ ೨ ॥

ತದರ್ಧಂ ಚ ತದರ್ಧಂ ಚ ತದರ್ಧಂ ವಾ ಸಮುತ್ಸೃಜೇತ್ ।
ಯೋ ದದ್ಯಾತ್ಕೇವಲಾಂ ಭೂಮಿಂ ಕನ್ಯಾಂ ದಾಸೀಂ ತಥಾ ವೃಷಂ ॥ ೩ ॥

---

### ಹದಿನೇಳನೆಯ ಅಧ್ಯಾಯ

೧-೪. ಸೂತಮುನಿವರ್ಯನು ಹೇಳುತ್ತಾನೆ—ಅರವತ್ತು ಹಸ್ತ ಉದ್ದ ಅಷ್ಟೇ ಅಗಲವುಳ್ಳದ್ದಾಗಿ ಮನೋಹರವಾದ ಸಸ್ಯಗಳಿಂದ ತುಂಬಿದ ಭೂಮಿಯನ್ನು ಹಸುಗಳು ಮೇಯುವುದಕ್ಕಾಗಿ ಏಕಾಗ್ರಚಿತ್ತದಿಂದ ಬಿಟ್ಟುಕೊಟ್ಟವನು ಅರವತ್ತುಸಾವಿರ ವರ್ಷಗಳವರೆಗೆ ರುದ್ರಲೋಕದಲ್ಲಿ ಸುಖವನ್ನನುಭವಿಸುವನು. ಇದರ ಅರ್ಧದಷ್ಟನ್ನಾಗಲಿ, ಕಾಲುಭಾಗವನ್ನಾಗಲಿ, ಎಂಟನೆಯ ಒಂದು ಭಾಗವನ್ನಾಗಲಿ ಬಿಟ್ಟುಕೊಟ್ಟವನೂ, ಬರಿಯಭೂಮಿಯನ್ನೂ, ಕನ್ಯೆಯನ್ನೂ, ದಾಸಿಯನ್ನೂ, ಎತ್ತನ್ನೂ, ಹಸುವನ್ನೂ ಅಲಂಕಾರವಿಲ್ಲದೆ ದಾನಮಾಡಿದವನೂ ಮೇಲೆ ಹೇಳಿದ ಫಲದಲ್ಲಿ ಅರ್ಧಭಾಗ ಫಲವನ್ನು ಪಡೆಯುವನು. ಮಂಟಪವಿಲ್ಲದೆ ನೊರಜುಕಲ್ಲುಗಳಿಲ್ಲದೆ ಪರಿಶುದ್ಧವಾದ

ಅಲಂಕಾರಂ ವಿನಾ ಧೇನುಂ ಫಲಸ್ಯಾರ್ಧಂ ಪ್ರಕೀರ್ತಿತಂ ।
ಅಮಂಡಪೇ ಶುಭೇ ಸ್ಥಾನೇ ಶರ್ಕರಾದಿವಿವರ್ಜಿತೇ ॥ ೪ ॥

ದ್ವಿಹಸ್ತವೇದಿಕಾಮಧ್ಯೇ ಪ್ರಕುರ್ಯಾತ್ಸೇತುಮಂಡಪಂ ।
ತತ್ರ ಸಂಪೂಜಯೇದ್ಭದ್ರಂ ಬ್ರಹ್ಮಾಣಂ ಚ ಶಚೀಪತಿಂ ॥ ೫ ॥

ಗಣೇಶಂ ಕ್ಷೇತ್ರಪಾಲಂ ಚ ಶೇಷಂ ಚೈವ ದಿಗೀಶ್ವರಾನ್ ।
ಪಂಚೋಪಚಾರೈರ್ವಿಧಿವತ್ಪೂಜಯೇತ್ಪಾಯಸಾದಿನಾ ॥ ೬ ॥

ಸ್ಥಾಲೀಪಾಕೇನ ಜುಹುಯಾದಂತೇ ವೈ ವಿಪ್ರಭೋಜನಂ ।
ಅತ್ರ ಯಾಗೇ ಶ್ರಾದ್ಧವರ್ಜ್ಯಂ ಪೂರ್ವೇದ್ಯುರಧಿವಾಸಯೇತ್ ॥ ೭ ॥

ತ್ರ್ಯಂಬಕೇನೈವ ಮಂತ್ರೇಣ ಭೂಮಿಂ ಸಂಸ್ನಾಪ್ಯ ಪೂಜಯೇತ್ ।
ತದ್ವಿಷ್ಣೋರಿತಿ ಮಂತ್ರೇಣ ಗಂಧತೈಲಂ ಸಚಂದನಂ ॥ ೮ ॥

ಪ್ರದದ್ಯಾದಸುನೀತೇತಿ ಪುನಸ್ತು ನೈವ ಸ್ಥಾಪಯೇತ್ ।
ಪಂಚಗವ್ಯೇನ ಚ ಪುನಃ ಶ್ರೀಶ್ಚ ತೇತಿ ಚ ಪುಷ್ಪಕಂ ॥ ೯ ॥

---

ಪ್ರದೇಶದಲ್ಲಿ ಎರಡು ಹಸ್ತ ಅಳತೆಯ ಜಗುಲಿಯ ಮಧ್ಯದಲ್ಲಿ ಸೇತುಮಂಟಪವನ್ನು ರಚಿಸಬೇಕು.

೫-೭. ಅಲ್ಲಿ ರಚಿಸಿದ ಸರ್ವತೋಭದ್ರದಲ್ಲಿ ಬ್ರಹ್ಮ, ದೇವೇಂದ್ರ, ಗಣೇಶ, ಕ್ಷೇತ್ರಪಾಲ, ಆದಿಶೇಷ, ದಿಕ್ಪಾಲಕರು ಇವರುಗಳನ್ನು ವಿಧಿಗನುಸಾರವಾಗಿ ಪಂಚೋಪಚಾರಪೂಜೆಗಳಿಂದ ಪೂಜಿಸಿ ಪಾಯಸಾದಿಗಳನ್ನು ನಿವೇದನಮಾಡಬೇಕು. ಸ್ಥಾಲೀಪಾಕಕ್ರಮದಿಂದ ಅಗ್ನಿಯಲ್ಲಿ ಹೋಮವನ್ನು ಮಾಡಿ, ಕೊನೆಯಲ್ಲಿ ಬ್ರಾಹ್ಮಣಭೋಜನವನ್ನು ಮಾಡಿಸಬೇಕು. ಈ ಯಾಗದಲ್ಲಿ ನಾಂದೀಶ್ರಾದ್ಧವನ್ನು ಮಾಡಬೇಕಾದುದಿಲ್ಲ. ಹಿಂದಿನದಿನ ಕಲಶಸ್ಥಾಪನೆ, ಅಧಿವಾಸ, ಮುಂತಾದ ಕಾರ್ಯವನ್ನು ಮಾತ್ರ ಮಾಡಬೇಕು.

೮-೧೧. 'ತ್ರ್ಯಂಬಕಂ' ಎಂಬ ಮಂತ್ರದಿಂದ ಭೂಮಿಯನ್ನು ಸಾರಿಸಿ ಪೂಜಿಸಬೇಕು. 'ತದ್ವಿಷ್ಣೋ' ಎಂಬ ಮಂತ್ರದಿಂದ ಚಂದನಸಹಿತವಾಗಿ ಗಂಧತೈಲವನ್ನು ಸಮರ್ಪಣೆಮಾಡಬೇಕು. 'ಅಸುನೀತೇ' ಎಂಬ ಮಂತ್ರದಿಂದ ಮತ್ತೆ ಪ್ರತಿಷ್ಠಾಪನೆ

**ಏವಂ ಯೂಪಸ್ಯ ಚ ತಥಾ ಅಧಿಗೃಹ್ಣಾತಿ ಮಂತ್ರಕಂ ।**
**ಗಂಧದ್ವಾರೇತಿ ಗಂಧೇನ ಅಂಶುನಾತೇತಿ ತೈಲಕಂ　　　　॥ ೧೦ ॥**

**ಸುರಾಸುರೇತಿ ಕುಸುಮಂ ದೂರ್ವಾಮಂತ್ರೇಣ ದೂರ್ವಿಕಾಂ ।**
**ಪ್ರಭಾತೇ ಪೂಜಯೇದ್ದೇವಾ‌ ರುದ್ರಮುದ್ದಿಶ್ಯ ಹೋಮಯೇತ್ ॥ ೧೧ ॥**

**ಸ್ಥಾಲೀಪಾಕೇನ ವಿಧಿನಾ ಅನ್ಯೇಷಾಂ ಪೂರ್ವವಚ್ಚರೇತ್ ।**
**ಉತ್ಸೃಜ್ಯಾರೋಪಯೇದ್ದೀಪಂ ಸ್ಥಿರೋ ಭವೇತಿ ವೈ ಋಚಾ　　　　॥ ೧೨ ॥**

**ಸಫಲಂ ಚ ತ್ರಿಹಸ್ತೈಕಂ ಕುರ್ಯಾತ್ತಂತ್ರೇಣ ನಿರ್ಮಿತಂ ।**
**ಹಸ್ತೈಕಂ ಪ್ರಾಪಯೇನ್ಮಧ್ಯೇ ಕ್ಷೇತ್ರೇ ಚೈವ ವಿಶೇಷತಃ　　　　॥ ೧೩ ॥**

**ಸ್ಥಾಪಯೇತ್ತತ್ರ ಮಂತ್ರೇಣ ಪಂಚಗವ್ಯೇನ ಯತ್ನತಃ ।**
**ಮಧುವಾತೇತಿ ಮಧುನಾ ಆಪ್ಯಾಯಸ್ವೇತಿ ವೈ ದಧಿ　　　　॥ ೧೪ ॥**

---

ಯನ್ನು ಮಾಡಬಾರದು. ಪಂಚಗವ್ಯಮಂತ್ರಗಳಿಂದ ಮತ್ತೆ ಪೂಜೆಯನ್ನು ಮಾಡಿ 'ಶ್ರೀಶ್ಚತೇ ಲಕ್ಷ್ಮೀಶ್ಚ' ಎಂಬ ಮಂತ್ರದಿಂದ ಹೂವನ್ನು ಪೂಜಿಸಬೇಕು. ಹೀಗೆಯೇ ಯೂಪಸ್ಥಾಪನೆಗೂ ಮೇಲೆ ಹೇಳಿದ ಮಂತ್ರಗಳನ್ನೇ ಉಪಯೋಗಿಸಬೇಕು. 'ಗಂಧ ದ್ವಾರಾಂ' ಎಂಬ ಮಂತ್ರದಿಂದ ಗಂಧವನ್ನೂ, 'ಅಂಶುನಾತೇ' ಎಂಬ ಮಂತ್ರದಿಂದ ಸುಗಂಧತೈಲವನ್ನೂ, 'ಸುರಾಸುರ' ಎಂಬ ಮಂತ್ರದಿಂದ ಹೂವನ್ನೂ, ದೂರ್ವಾ ಮಂತ್ರದಿಂದ ಗರಿಕೆಯನ್ನೂ ಪೂಜಿಸಬೇಕು. ಪ್ರಾತಃಕಾಲದಲ್ಲಿ ಉಕ್ತದೇವತೆಗಳ ನ್ನೆಲ್ಲಾ ವಿಧಿವತ್ತಾಗಿ ಪೂಜಿಸಿ ಸ್ಥಾಲೀಪಾಕವಿಧಿಯಿಂದ ಚರುವನ್ನು ಮಾಡಿ ರುದ್ರನ ನ್ನುದ್ದೇಶಿಸಿ ಹೋಮಮಾಡಬೇಕು.

೧೨-೧೮. ಮಿಕ್ಕ ಪೂಜಾದಿಗಳನ್ನು ಹಿಂದಿನಂತೆಯೇ ಮಾಡಿ ಗೋಮಾಳದ ಭೂಮಿಯನ್ನು ಉತ್ಸರ್ಜನಮಾಡಿ ಬಿಟ್ಟು 'ಸ್ಥಿರೋಭವ' ಎಂಬ ಮಂತ್ರದಿಂದ ದೀಪ ವನ್ನು ಹತ್ತಿಸಬೇಕು. ತರುವಾಯ ಮೂರುಮೊಳದಳತೆಯ ಯೂಪಸ್ತಂಭವನ್ನು ರಚಿಸಿ, ಭೂಮಿಯಲ್ಲಿ ಒಂದುಮೊಳದಷ್ಟು ಆಳ ಹೂಳುವಂತೆ ಮಧ್ಯದಲ್ಲಿ ನೆಟ್ಟು ಪಂಚಗವ್ಯಮಂತ್ರಗಳಾದ 'ಮಧುವಾತಾ' ಎಂಬ ಮಂತ್ರಪೂರ್ವಕವಾಗಿ ಜೇನಿನಿಂ ದಲೂ, 'ಆಪ್ಯಾಯಸ್ವ' ಎಂಬ ಮಂತ್ರದಿಂದ ಮೊಸರಿನಿಂದಲೂ, 'ತದ್ವಿಷ್ಣೋ' ಎಂಬ ಮಂತ್ರದಿಂದ ಕಲಶೋದಕದಿಂದಲೂ ಅಭಿಷೇಕಮಾಡಿ ಭೂಮಿ, ವರಾಹ, ಕೂರ್ಮ, ಲಕ್ಷ್ಮೀ, ಶಕ್ತಿ, ವಾಸ್ತೋಷ್ಪತಿ, ವಿಷ್ಣು ಈ ದೇವತೆಗಳನ್ನು ಕ್ರಮವಾಗಿ ಯೂಪಸ್ತಂಭ

ತದ್ವಿಷ್ಣೋರಿತಿಮಂತ್ರೇಣ ಘಟಿತೋಯೈರನಂತರಂ ।
ಪೃಥಿವೀಂ ಚ ವರಾಹಂ ಚ ಕೂರ್ಮಮಾಧವಶಕ್ತಿಕಾನ್ ॥ ೧೫ ॥

ವಾಸ್ತೋಷ್ಪತಿಂ ಚ ವಿಷ್ಣುಂ ಚ ಯೂಪೇ ಸಂಪೂಜಯೇತ್ಕ್ರಮಾತ್ ।
ದದ್ಯಾದರ್ಘ್ಯಂ ಚ ವಿವರೇ ಗರ್ತೇ ಹೋಮಂ ವಿವರ್ಜಯೇತ್ ॥ ೧೬ ॥

ಅರ್ಘ್ಯಪಾದ್ಯೇ ಚ ದುಷ್ಟೇ ಚ ಹಸ್ತೇನೋತ್ಸೃಜ್ಯ ಸತ್ತಮಾಃ ।
ಓಂ ಅದ್ಯೇತ್ಯಾದಿ ಗೋಬ್ರಾಹ್ಮಣಸರ್ವಸತ್ವೇಭ್ಯಃ ಪರ್ಯಟನಾರ್ಥಾಯ
ಇಮಾಂ ಭೂಮಿಂ ಸುಪೂಜಿತಾಂ ವಿಷ್ಣುದೈವತಾಂ ಗೋಪ್ರಚಾರರೂಪಿಣೀಂ
ಶ್ರುತಿಸ್ಮೃತ್ಯಾದ್ಯುಕ್ತಫಲಪ್ರಾಪ್ತಯೇಽಹಮುತ್ಸೃಜೆ
ಶಿವಲೋಕಸ್ಥಿತಾ ಗಾವಃ ಸರ್ವದೇವೈಃ ಸುಪೂಜಿತಾಃ ।
ಸಮಾಗತ್ಯ ಚರೇಯುಸ್ತಾ ಭೂಮಾವಸ್ಯಾಮಿತೀರಯೇತ್ ॥ ೧೭ ॥

ಏವಂ ನಿವೇದಯೇದ್ವಿಪ್ರೋ ಗೋಪ್ರಚಾರಂ ಸಮಾಹಿತಃ ।
ಸ ಮುಕ್ತಃ ಸರ್ವಪಾಪೇಭ್ಯೋ ವಿಷ್ಣುಲೋಕೇ ಮಹೀಯತೆ ॥ ೧೮ ॥

---

ದಲ್ಲಿ ಪೂಜಿಸಿ, ಅದರ ಸಮೀಪದ ಹಳ್ಳದಲ್ಲಿ ಅರ್ಘ್ಯವನ್ನು ಕೊಡಬೇಕು. ಹೀಗೆಂದು ಹೇಳಿದ ಮಾತ್ರಕ್ಕೆ ಹಳ್ಳದಲ್ಲಿ ಹೋಮವನ್ನು ಮಾಡಬಾರದು. ಅರ್ಘ್ಯಪಾದ್ಯಗಳನ್ನು ಉದ್ಧಾರಣೆಯಿಂದ ಕೊಡದೆ ಕೈಯಿಂದ ಕೊಡುವುದು ದುಷ್ಟಪದ್ಧತಿ. ಉತ್ಸರ್ಜನ ಜಲವನ್ನು ಕೈಯಿಂದ ಬಿಡಬಹುದು. ಉತ್ಸರ್ಜನವಾಕ್ಯದ ಅರ್ಥ:—ಗೋವುಗಳು, ಬ್ರಾಹ್ಮಣರು ಮುಂತಾದ ಸಮಸ್ತಪ್ರಾಣಿಗಳಿಗೂ ಸಂಚಾರಾರ್ಥವಾಗಿ ಪೂಜ್ಯವಾದ ವಿಷ್ಣುದೇವತಾಸ್ವರೂಪವೆನಿಸಿ ಗೋಪ್ರಚಾರರೂಪವಾಗಿರುವ ಈ ಭೂಮಿಯನ್ನು ವೇದಶಾಸ್ತ್ರಾದಿಗಳಲ್ಲಿ ಹೇಳಿರುವ ಫಲಪ್ರಾಪ್ತಿಗಾಗಿ ನಾನು ಈ ದಿವಸ ಬಿಟ್ಟಿರುವೆನು. ಗೋವುಗಳು ಶಿವಲೋಕದಲ್ಲಿರತಕ್ಕವುಗಳು. ಸಮಸ್ತದೇವತೆಗಳೂ ಅವುಗಳನ್ನು ಪೂಜೆಮಾಡುವರು. ಆ ಗೋವುಗಳೇ ಭೂಮಿಗೆ ಬಂದು ಈ ಗೋಮಾಳದಲ್ಲಿ ಹುಲ್ಲನ್ನು ಮೇಯುವುವು ಎಂದು ಹೇಳಬೇಕು. ಯಜಮಾನನು ಮೇಲೆ ಹೇಳಿದಂತೆ ವಾಕ್ಯವನ್ನುಚ್ಚರಿಸಿ ಗೋಪ್ರಚಾರಭೂಮಿಯನ್ನು ಏಕಾಗ್ರಚಿತ್ತದಿಂದ ಉತ್ಸರ್ಜನ ಮಾಡಿದರೆ ಆ ಮನುಷ್ಯನು ತನಗೆ ಪ್ರಾಪ್ತವಾಗಿದ್ದ ಸಮಸ್ತಪಾಪಗಳನ್ನೂ ಕಳೆದು ಕೊಂಡು ವಿಷ್ಣುಲೋಕವನ್ನು ಸೇರಿ ಅಲ್ಲಿ ವಿಶೇಷ ಸುಖವನ್ನನುಭವಿಸುವನು.

**ಯಾವಂತಿ ತೃಣಗುಲ್ಮಾನಿ ಸಂತಿ ಭೂಮೌ ಶುಭಾನಿ ಚ ।**
**ತಾವದ್ವರ್ಷಸಹಸ್ರಾಣಿ ಸ್ವರ್ಗಲೋಕೇ ಮಹೀಯತೆ　　　　॥ ೧೯ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ ಸಪ್ತದಶೋಽಧ್ಯಾಯಃ.**



---

೧೯. ಆ ಭೂಮಿಯಲ್ಲಿ ಮಂಗಳಕರವಾದ ಹುಲ್ಲುಗಳೂ ಗಿಡಗಳೂ ಎಷ್ಟು ಇರುವುವೋ ಅಷ್ಟುಸಾವಿರ ವರ್ಷಗಳವರೆಗೆ ಸ್ವರ್ಗಲೋಕದಲ್ಲಿ ಮಹಾಸುಖವನ್ನನು ಭವಿಸುವರು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯ ಭಾಗದಲ್ಲಿ ಹದಿನೇಳನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ತೃತೀಯಭಾಗೇ
## ಅಷ್ಟಾದಶೋಽಧ್ಯಾಯಃ

॥ ಸೂತ ಉವಾಚ ॥

ಕಲೌ ಚೈಕಾಹಸಾಧ್ಯೇನ ಪ್ರತಿಷ್ಠಾಮಲ್ಪವಿತ್ತವಾನ್ ।
ಸದ್ಯೋಽಧಿವಾಸಮಾಜ್ಯೇನ ಪ್ರಕುರ್ಯಾತ್ತಾಂತ್ರಿಕೋತ್ತಮಃ ॥ ೧ ॥

ಉತ್ತರಂ ತು ಗತೇ ಹಂಸೇ ಅತೀತೇ ಚೋತ್ತರಾಯಣೇ ।
ಶರತ್ಕಾಲೇ ವ್ಯತೀತೇ ತು ವಸಂತೇ ಯಜ್ಞಮಾರಭೇತ್ ॥ ೨ ॥

ನಾರಾಯಣಾದಿಮೂರ್ತೀನಾಂ ದ್ವಾತ್ರಿಂಶದ್ಭೇದ ಏವ ತು ।
ಪ್ರತಿಷ್ಠಾಂ ಪ್ರತಿಮಾನಾಂ ಚ ಗಜಾಸ್ಯಾದೀಂಶ್ಚ ಸತ್ತಮಾಃ ॥ ೩ ॥

---

## ಹದಿನೆಂಟನೆಯ ಅಧ್ಯಾಯ

೧. ಸೂತಮುನಿವರ್ಯನು ಹೇಳುತ್ತಾನೆ—ಕಲಿಯುಗದಲ್ಲಿ ಸ್ವಲ್ಪವೇ ದ್ರವ್ಯಾನುಕೂಲವಿರುವ ಮಾನವನು ಒಂದೇದಿನದಲ್ಲಿ ಸಾಧಿಸಬಹುದಾದ ಪ್ರತಿಷ್ಠಾಕರ್ಮವನ್ನು ಕೈಕೊಳ್ಳಬೇಕು. ಆಗ ತಂತ್ರಶಾಸ್ತ್ರರೀತಿಯಾಗಿ ತುಪ್ಪದಲ್ಲಿ ಸದ್ಯೋಽಧಿವಾಸವನ್ನು ಮಾಡಿ ಅನಂತರ ಪ್ರತಿಷ್ಠಾಕಾರ್ಯವನ್ನು ಮಾಡಬೇಕು.

೨. ಸೂರ್ಯನು ಉತ್ತರಾಯಣದಲ್ಲಿರುವಾಗ ವಸಂತಋತುವಿನಲ್ಲಿಯೂ, ಉತ್ತರಾಯಣವು ಕಳೆದನಂತರ ಶರದೃತು ಕಳೆದಮೇಲೆಯೂ ಪ್ರತಿಷ್ಠಾಯಜ್ಞವನ್ನು ಆಚರಿಸಬೇಕು.

೩. ನಾರಾಯಣನೇ ಮೊದಲಾದ ಮೂವತ್ತೆರಡುಬಗೆಯ ಮೂರ್ತಿಗಳನ್ನೂ ಗಣಪತಿಯೇ ಮುಂತಾದ ಪ್ರತಿಮೆಗಳನ್ನೂ ಬುದ್ಧಿವಂತರು ಮೇಲೆ ಹೇಳಿದ ಕಾಲಗಳಲ್ಲಿಯೇ ಪ್ರತಿಷ್ಠೆಮಾಡಬೇಕು.

ನಿತ್ಯಂ ನಿರ್ವರ್ತ್ಯ ಮತಿಮಾನ್ ಕುರ್ಯಾದಭ್ಯುದಯಂ ತತಃ ।
ವಿಪ್ರಾನ್ ಸಂಭೋಜಯೇದ್ವಾಥ ತತೋ ಯಾಗಗೃಹಂ ವ್ರಜೇತ್ ॥ ೪ ॥

ಗಣೇಶಗ್ರಹದಿಕ್ಪಾಲಾನ್ಪ್ರತಿಕುಂಭೇಷು ಪೂಜಯೇತ್ ।
ಸ್ಥಂಡಿಲೇ ಪೂಜಯೇದ್ವಿಷ್ಣುಂ ಪರಿವಾರಗಣಂ ಯಜೇತ್ ॥ ೫ ॥

ಸ್ನಾಪಯೇತ್ಪ್ರಥಮಂ ದೇವಂ ತೋಯೈಃ ಪಂಚವಿಧೈರಪಿ ।
ಪಂಚಾಮೃತೈಃ ಪಂಚಗವ್ಯೈಃ ಪಂಚಮೃತ್ಪಿಂಡಕೈರಪಿ ॥ ೬ ॥

ತಿಲತೈಲೈಶ್ಚ ಸ್ನೇಹೈಶ್ಚ ಕಷಾಯೈರಪಿ ಸತ್ತಮಾಃ ।
ಪಂಚಪುಷ್ಪೋದಕೈರ್ವಾಥ ತ್ರಿಪದೈರಪಿ ಸತ್ತಮಾಃ ॥ ೭ ॥

ತುಲಸೀಕುಸುಮಂಪುಷ್ಪಪತ್ರಾಣ್ಯಾಹುಸ್ತ್ರಿಪತ್ರಕಂ ।
ಪಂಚಕಾಮ್ರಶಮೀಪದ್ಮಕರವೀರಂ ಚ ಪಂಚಕಂ ॥ ೮ ॥

ಮೃತ್ತಿಕಾ ಕರಿದಂತಸ್ಯ ತಥಾಶ್ವಖುರಮೃತ್ತಿಕಾ ।
ಗೋಮೂತ್ರಂ ಗೋಮಯಂ ಕ್ಷೀರಂ ದಧಿ ಸರ್ಪಿಸ್ತು ಪಂಚಮಂ ॥ ೯ ॥

---

೪-೫. ಬುದ್ಧಿವಂತನಾದವನು ನಿತ್ಯಕರ್ಮಗಳನ್ನು ಮಾಡಿದ ಬಳಿಕ ನಾಂದೀ ಪೂಜೆಯನ್ನು ಮಾಡಿ, ಅಥವಾ ತದಂಗವಾಗಿ ಬ್ರಾಹ್ಮಣಭೋಜನವನ್ನು ಮಾಡಿಸಿ ಅನಂತರ ಪೂಜಾಗೃಹಕ್ಕೆ ಹೋಗಿ ಗಣೇಶ, ಆದಿತ್ಯಾದಿ ನವಗ್ರಹಗಳು, ದಿಕ್ಪಾಲಕರು ಇವರುಗಳನ್ನು ಬೇರೆಬೇರೆ ಕಲಶಗಳಲ್ಲಿ ಪೂಜಿಸಬೇಕು. ನೆಲದಲ್ಲಿ ಒಂದು ಮಂಡಲ ವನ್ನು ಮಾಡಿ ಅಲ್ಲಿ ವಿಷ್ಣುವನ್ನೂ, ಅವನ ಪರಿವಾರಗಣಗಳನ್ನೂ ಸಹ ಪೂಜಿಸಬೇಕು.

೬-೭. ಮೊದಲು ದೇವನನ್ನು ಐದುಬಗೆಯ ನೀರಿನಿಂದ ಸ್ನಾನಮಾಡಿಸಿ ಬಳಿಕ ಪಂಚಾಮೃತ, ಪಂಚಗವ್ಯ, ಪಂಚಮೃತ್ಪಿಂಡಗಳು, ಎಳ್ಳೆಣ್ಣೆ, ಕಹಿಯಾದ ಎಣ್ಣೆ ಗಳು, ಐದು ಪುಷ್ಪೋದಕಗಳು, ತ್ರಿಪದಗಳು ಇವುಗಳಿಂದ ಕ್ರಮವಾಗಿ ಸ್ನಾನಮಾಡಿ ಸಬೇಕು.

೮-೧೦. ತುಲಸಿಯ ತೆನೆ, ಹೂ, ಎಲೆ, ಇವುಗಳೇ ತ್ರಿಪತ್ರ ಅಥವಾ ತ್ರಿಪದ ಗಳು. ಮಾವು, ಬನ್ನಿ, ಕಮಲ, ಕಣಿಗಲೆ, ಕನ್ನೈದಿಲೆ ಇವೇ ಪಂಚಪುಷ್ಪಗಳು. ಆನೆಯಕೊಂಬಿನಿಂದ ಮೀಟಿದಮಣ್ಣು, ಕುದುರೆಯ ಗೊರಸಿನಿಂದ ಎದ್ದಮಣ್ಣು, ಇವು

**ಕುರ್ಯಾತ್ಪ್ರಾಣಪ್ರತಿಷ್ಠಾಂ ಚ ಹೋಮಂ ಕುರ್ಯಾದ್ಯಥಾವಿಧಿ ।**
**ದಕ್ಷಿಣಾಂ ವಿಧಿವದ್ದದ್ಯಾತ್ಪೂರ್ಣಾಂ ತು ತದನಂತರಂ ॥ ೧೦ ॥**

**ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ ಅಷ್ಟಾದಶೋಽಧ್ಯಾಯಃ.**



---

ಗಳೇ ಮೃತ್ತಿಕೆಗಳು. ಗೋಮೂತ್ರ, ಗೋಮಯ, ಹಾಲು. ಮೊಸರು, ತುಪ್ಪ ಇವೇ ಪಂಚಗವ್ಯಗಳು. ದೇವಮೂರ್ತಿಯಲ್ಲಿ ಪ್ರಾಣಪ್ರತಿಷ್ಠೆಮಾಡಿ ವಿಧಿಗನುಸಾರವಾಗಿ ಹೋಮವನ್ನು ಮಾಡಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟು ಪ್ರತಿಷ್ಠಾಕಾರ್ಯವನ್ನು ಪೂರ್ಣಮಾಡಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯ ಭಾಗದಲ್ಲಿ ಹದಿನೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ
## ಮಧ್ಯಮಪರ್ವಣಿ ತೃತೀಯಭಾಗೇ
## ಏಕೋನವಿಂಶೋಽಧ್ಯಾಯಃ

॥ ಸೂತ ಉವಾಚ ॥

ಅತಃ ಪರಂ ತು ವಿಪ್ರೇಂದ್ರಾಃ ಕಾಲ್ಯಾದೀನಾಂ ತಥೈವ ಚ ।
ಅಧಿವಾಸ್ಯ ಚ ಪೂರ್ವೇದ್ಯುಃ ಶ್ರಾದ್ಧಮಭ್ಯುದಯಾತ್ಮಕಂ ॥ ೧ ॥

ಪ್ರಥಮೇ ಜಲಜೈಃ ಸ್ನಾನಂ ಪಂಚಗವ್ಯೈರನಂತರಂ ।
ಪೂರ್ವವಚ್ಚ ವಿಧಾನೇನ ಕುಂಭೇ ದುರ್ಗಾಂ ಸಮರ್ಚಯೇತ್ ॥ ೨ ॥

ಪಂಚಾಮೃತೈಃ ಪಂಚಗವ್ಯೈಃ ಕರೀಷಶತಧಾರಯಾ ।
ಶ್ರೀ ಬಿಲ್ವೇ ಪೂಜಯೇದ್ದೇವೀಂ ದದ್ಯಾತ್ಪ್ರಾಣಮನಂತರಂ ॥ ೩ ॥

---

## ಹತ್ತೊಂಭತ್ತನೆಯ ಅಧ್ಯಾಯ

೧-೨. ಸೂತಮುನಿವರ್ಯನು ಹೇಳುತ್ತಾನೆ—ಎಲೈ ಬ್ರಾಹ್ಮಣಶ್ರೇಷ್ಠರೇ ! ಇಲ್ಲಿಂದ ಮುಂದೆ ಕಾಳಿಕಾದೇವಿಯೇ ಮುಂತಾದ ದೇವತಾಪ್ರತಿಷ್ಠೆಯ ವಿಷಯವನ್ನು ಹೇಳುವೆನು. ಪ್ರತಿಷ್ಠಾಕರ್ಮದ ಹಿಂದಿನದಿವಸ ನಾಂದೀಶ್ರಾದ್ಧವನ್ನು ಮಾಡಿ ಬಳಿಕ ಅಧಿವಾಸ, ಕಲಶಸ್ಥಾಪನೆ ಮುಂತಾದ ಕಾರ್ಯಗಳನ್ನು ಮಾಡಬೇಕು. ಮೊದಲು ದೇವತಾಪ್ರತಿಮೆಗಳಿಗೆ ಪಂಚಗವ್ಯದಿಂದಲೂ, ನೀರಿನಿಂದಲೂ ಸ್ನಾನವನ್ನು ಮಾಡಿಸಿ ಹಿಂದೆ ಹೇಳಿದ ವಿಧಿಯಂತೆ ಕಲಶದಲ್ಲಿರಿಸಿ ದುರ್ಗಾದೇವಿಯನ್ನು ಪೂಜಿಸಬೇಕು.

೩-೪. ದೇವೀಪ್ರತಿಮೆಗೆ ಪಂಚಗವ್ಯದಿಂದ ಅಭಿಷೇಕಮಾಡಿ ಬಿಲ್ವಪತ್ರೆಯಿಂದ ಪೂಜಿಸಿ ಪ್ರಾಣಪ್ರತಿಷ್ಠಾಪನೆಯನ್ನು ಮಾಡಬೇಕು. ಅನಂತರ ಅಗ್ನಿಪ್ರತಿಷ್ಠೆ

ಬಿಲ್ವಪತ್ರೈಃ ಫಲೈರ್ವಾಪಿ ದದ್ಯಾಚ್ಚಾಪಿ ಶತಾಹುತೀಃ ।
ಏಕೈಕಶಸ್ತು ಸರ್ವೇಷಾಂ ದದ್ಯಾತ್ಕಾಂಚನದಕ್ಷಿಣಾಂ ॥ ೪ ॥

ಪ್ರತಿಮಾಂ ಕಾಲಿಕಾಯಾಶ್ಚ ತಾರಾಯಾಶ್ಚ ಪೃಥಕ್‌ಪೃಥಕ್ ।
ಗ್ರಾಹ್ಯಂ ವಿನಾರ್ಚಯೇದ್ವಿಪ್ರಾಃ ಪಂಚಪಂಚಶತೈರಪಿ ॥ ೫ ॥

ಭೋಜಯೇತ್ಸ್ನಾಪಯೇದ್ದೇವೀಂ ಗಂಧತೋಯೈರ್ದಿನತ್ರಯಂ ।
ತಾಮ್ರಕುಂಭೇಽರ್ಚಯೇದ್ದೇವೀಂ ತ್ರಿದಿನಂ ಪ್ರಾತರೇವ ಹಿ ॥ ೬ ॥

ಸಮಾರಣಂ ತತೋ ದದ್ಯಾತ್ಪೇಟಿಕಾಯಾಂ ನಿವೇಶಯೇತ್ ।
ತತೋಽಪಿ ಗಂಧತೋಯೈಶ್ಚ ಸ್ನಾಪಯೇತ್ಕನ್ಯಕಾದಿಭಿಃ ॥ ೭ ॥

ತತೋ ವೈ ಚಾಷ್ಟಮದಿನೇ ರಾತ್ರಾವಪಿ ಪ್ರಪೂಜಯೇತ್ ।
ಪಶುದಾನಂ ಪ್ರಕರ್ತವ್ಯಮಗ್ನಿಕಾರ್ಯಂ ಚ ಪಾಯಸೈಃ ॥ ೮ ॥

---

ಯನ್ನು ಮಾಡಿ ಬಿಲ್ವಪತ್ರೆ ಮತ್ತು ಫಲಗಳಿಂದ ಪ್ರಧಾನದೇವತೆಗೆ ನೂರು ಆಹುತಿಗಳನ್ನು ಹೋಮ ಮಾಡಬೇಕು. ಒಂದೊಂದಕ್ಕೂ ಸುವರ್ಣದಕ್ಷಿಣೆಯನ್ನು ಇಡಬೇಕು

೫-೬. ಕಾಲಿಕಾದೇವಿಯ ಮತ್ತು ತಾರಾದೇವಿಯ ಪ್ರತಿಮೆಗಳನ್ನು ಬೇರೆ ಬೇರೆಯಾಗಿ ತೆಗೆದುಕೊಳ್ಳಬೇಕು ಹಾಗೆ ತೆಗೆದುಕೊಳ್ಳುವ ಪೂರ್ವದಲ್ಲಿ ಬ್ರಾಹ್ಮಣರು ಐನೂರೈದುಸಲ ಬಿಲ್ವಪತ್ರೆಗಳಿಂದ ಪೂಜೆಮಾಡಬೇಕು. ದೇವಿಗೆ ಮೂರುದಿವಸ ಶ್ರೀಗಂಧದ ನೀರಿನಲ್ಲಿ ಅಭಿಷೇಕಮಾಡಿ ನೈವೇದ್ಯಾದಿ ಉಪಚಾರ ಪೂಜೆಗಳನ್ನು ಮಾಡಬೇಕು. ಆ ಮೂರುದಿನಗಳವರೆಗೆ ದೇವಿಯನ್ನು ತಾಮ್ರದಕಲಶದಲ್ಲಿಟ್ಟು ಪ್ರಾತಃಕಾಲದಲ್ಲಿಯೇ ಪೂಜಿಸಬೇಕು

೭-೮. ಆಮೇಲೆ ಪ್ರತಿಮೆಗಳಿಗೆ ಪ್ರಾಣಪ್ರತಿಷ್ಠಾಪನೆ ಮಾಡಿ ಕನ್ಯೆ ಮುತ್ತೈದೆ ಇವರ ಹಸ್ತದಿಂದ ಶ್ರೀಗಂಧದ ನೀರಿನಲ್ಲಿ ಸ್ನಾನವನ್ನು ಮಾಡಿಸಿ ಪೆಟ್ಟಿಗೆಯಲ್ಲಿ ಇರಿಸಬೇಕು. ತರುವಾಯ ಎಂಟನೆಯದಿನ ರಾತ್ರಿಯೂ ಹೀಗೇ ಪೂಜೆಯನ್ನು ಮಾಡಬೇಕು. ಆದಿನ ಗೋದಾನವನ್ನೂ, ಪಾಯಸದ ಆಹುತಿಯಿಂದ ಅಗ್ನಿಯಲ್ಲಿ ಹೋಮವನ್ನೂ ಮಾಡಬೇಕು.

**ಶಿವಲಿಂಗಪ್ರತಿಷ್ಠಾಂ ಚ ವಕ್ಷ್ಯೇ ತಂತ್ರಮತಂ ಯಥಾ ।**
**ತ್ರಿವಿಪ್ರಂ ಭೋಜಯೇದ್ವಿಪ್ರಾ ಅಧಿವಾಸ್ಯಂ ವಿಶೇಷತಃ ॥ ೯ ॥**

**ನಿತ್ಯಂ ಸಮಾಪ್ಯ ಚ ಪುನಃ ಕುರ್ಯಾದಭ್ಯುದಯಂ ತತಃ ।**
**ಆಚಾರ್ಯಂ ವರಯೇತ್ಪ್ರಾತಃ ಸ್ನಾಪಯೇತ್ಪೂರ್ವವರ್ತ್ಮನಾ ॥ ೧೦ ॥**

**ಪರಿವಾರಗಣೈಃ ಸಾರ್ಧಮರ್ಚಯೇತ್ತದನಂತರಂ ।**
**ದದ್ಯಾತ್ಸಮಿಾರಣಂ ಪಶ್ಚಾದಗ್ನಿಕಾರ್ಯಂ ಸಮಾಚರೇತ್ ॥ ೧೧ ॥**

**ತಿಲಹೋಮಮಯೀಂ ಗಾಂ ಚ ದದ್ಯಾದ್ಗಾಂ ಚ ವಿಧಾನತಃ ।**
**ನ ನಾಮ ನ ಚ ಗೋತ್ರಂ ಚ ಹೋಮಕರ್ಮಣಿ ಸರ್ವದಾ ॥ ೧೨ ॥**

**ಪೂರ್ಣಿಮಾಯಾಂ ವಿಶೇಷೇಣ ನಾಸ್ಯೇಷಾಂ ಚ ಕಥಂಚನ ।**
**ಹೋಮಾಂತೇ ವಸುಧಾರಾಂ ಚ ಕುಂಭೇ ದತ್ವಾ ವಿಧಾನತಃ ॥ ೧೩ ॥**

---

೯-೧೦. ತಂತ್ರಶಾಸ್ತ್ರದಲ್ಲಿ ಉಕ್ತವಾದ ರೀತಿಯಲ್ಲಿ ಶಿವಲಿಂಗಪ್ರತಿಷ್ಠೆಯ ವಿಚಾರವನ್ನು ಹೇಳುವೆನು. ಎಲೈ ಬ್ರಾಹ್ಮಣರೇ! ಕೇಳಿ; ಪ್ರತಿಷ್ಠೆಯ ಹಿಂದಿನದಿನ ಮೂರುಜನ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸುವುದು ವಿಶೇಷರೀತಿಯಿಂದ ಅಧಿವಾಸ, ಮತ್ತು ಕಲಶಸ್ಥಾಪನೆ ಇವುಗಳನ್ನು ಮಾಡಬೇಕಾದ್ದು ಮುಖ್ಯ. ಮಾರನೆಯದಿನ ಯಜಮಾನನು ನಿತ್ಯಕರ್ಮವನ್ನು ಮಾಡಿದಮೇಲೆ ನಾಂದೀಪೂಜೆ ಮಾಡಿ ಆಚಾರ್ಯವರಣವನ್ನು ಮಾಡಿಕೊಳ್ಳಬೇಕು. ಹಿಂದೆ ಹೇಳಿದಂತೆ ಲಿಂಗಕ್ಕೆ ಸ್ನಾನಾದಿಗಳನ್ನು ಮಾಡಿಸಿ, ಪರಿವಾರಗಣ ಸಮೇತ ಶಿವನನ್ನು ಆ ಲಿಂಗದಲ್ಲಿ ಪ್ರಾಣಪ್ರತಿಷ್ಠೆ ಮಾಡಿ ಪೂಜಿಸಿ ಅನಂತರ ಅಗ್ನಿಕಾರ್ಯವನ್ನು ಮಾಡಬೇಕು.

೧೨-೧೩. ಅಗ್ನಿಯಲ್ಲಿ ತಿಲಹೋಮವನ್ನು ವಿಶೇಷವಾಗಿ ಮಾಡಬೇಕು. ವಿಧಿಯನ್ನನುಸರಿಸಿ ಗೋದಾನವನ್ನೂ ಭೂದಾನವನ್ನೂ ಮಾಡಬೇಕು. ಯಾವಾಗಲೂ ಹೋಮಕರ್ಮದಲ್ಲಿ ನಾಮಗೋತ್ರಗಳ ವಿವೇಚನೆಯಿಲ್ಲ. ಪೂರ್ಣಿಮಾತಿಥಿಯಲ್ಲಿ ವಿಶೇಷವಾಗಿ ಹೋಮವನ್ನು ಮಾಡಿ ಕೊನೆಯಲ್ಲಿ ಕಲಶಕ್ಕೆ ವಸುಧಾರಾರೂಪವಾದ ಸುವರ್ಣಪುಷ್ಪಾದಿಗಳನ್ನು ಸಮರ್ಪಿಸಬೇಕು.

ತ್ರಿಹಸ್ತಚರಕಾಯಂ ಚ ಹಸ್ತೈಕೇಂ ತುರ್ಯಹಸ್ತಕೇ ।
ಶಾಲಗ್ರಾಮಶಿಲಾಯಾಶ್ಚ ಪ್ರತಿಷ್ಠಾಂ ವಿಧಿವಚ್ಚರೇತ್ ॥ ೧೪ ॥

ಸದ್ಯೋಧಿವಾಸಯೇದ್ದೇವಂ ದ್ವಾದಶ್ಯಾಂ ಸ್ನಾಪಯೇದ್ಯಥಾ ।
ರತ್ನತೋಯೈಃ ಪರಿಮಳೈಸ್ತ್ರಿಗಂಧೈಃ ಪಂಚಪಲ್ಲವೈಃ ॥ ೧೫ ॥

ಕುಂಭೇ ಪ್ರಜಾಪತಿಂ ಸ್ಥಾಪ್ಯ ಶ್ವೇತಾಬ್ಜಂ ನವನಾಭಕೇ ।
ನವದುರ್ಗೋಕ್ತಮಾರ್ಗೇಣ ಪೂಜಯೇತ್ಪರಪರಮೇಶ್ವರಂ ॥ ೧೬ ॥

ಚಕ್ರಸ್ವರೂಪತೋ ಜ್ಞೇಯಂ ಪ್ರದದ್ಯಾಚ್ಚ ಸಮೀರಣಂ ।
ಆನೀಯ ತಾಮ್ರಭಾಂಡೇ ಚ ತ್ರಿಕಾಲಂ ಪ್ರತಿಪೂಜಯೇತ್ ॥ ೧೭ ॥

ಪಾಯಸಾನ್ನೈರುತ್ಪಲೈರ್ವಾ ಪಂಕಜೈರ್ವಾಪಿ ಹೋಮಯೇತ್ ।
ಸಕಾಂಚನಂ ವಸ್ತ್ರಯುಗ್ಮಂ ಪ್ರದದ್ಯಾದ್ಭೂರಿದಕ್ಷಿಣಂ ॥ ೧೮ ॥

---

೧೪. ಒಂದು ಹಸ್ತ, ಮೂರು ಹಸ್ತ ಅಥವಾ ನಾಲ್ಕು ಹಸ್ತದ ಅಳತೆಯ ಸ್ಥಿರಲಿಂಗವನ್ನು ಪ್ರತಿಷ್ಠೆಮಾಡಿದೆಡೆಯಲ್ಲಿ ಚರಲಿಂಗವನ್ನೂ ಸಾಲಗ್ರಾಮಶಿಲೆಯನ್ನೂ ವಿಧಿವತ್ತಾಗಿ ಪ್ರತಿಷ್ಠೆಮಾಡಬೇಕು.

೧೫-೧೬. ಚರಲಿಂಗ ಸಾಲಗ್ರಾಮ ಇವುಗಳ ಪ್ರತಿಷ್ಠೆಯಲ್ಲಿ ಸದ್ಯೋಧಿವಾಸವನ್ನು ಮಾಡಿ ದ್ವಾದಶಿಯದಿನ ರತ್ನೋದಕದಿಂದಲೂ, ಮೂರು ಬಗೆಯ ಸುಗಂಧದ ನೀರಿನಿಂದಲೂ, ಪಂಚಪಲ್ಲವಗಳ ನೀರಿನಿಂದಲೂ ಸ್ನಾನವನ್ನು ಮಾಡಿಸಬೇಕು. ಬಳಿಕ ಕಲಶವನ್ನು ಸ್ಥಾಪಿಸಿ, ಅದರಲ್ಲಿ ಪ್ರಜಾಪತಿಯನ್ನು ಆವಾಹನೆ ಮಾಡಿ, ನವದುರ್ಗಾಪೂಜೆಯಲ್ಲಿ ಹೇಳಿದ ರೀತಿಯಿಂದ ಬಿಳಿಯಕಮಲಗಳಿಂದ ಪರಮೇಶ್ವರನನ್ನು ಪೂಜಿಸಬೇಕು.

೧೭-೧೮. ಸಾಲಗ್ರಾಮದಲ್ಲಿರುವ ಚಕ್ರಸ್ವರೂಪವನ್ನು ತಿಳಿದುಕೊಂಡು ಅವುಗಳಲ್ಲಿ ಆ ಲಕ್ಷಣೋಕ್ತವಾದ ದೇವಮೂರ್ತಿಯ ಪ್ರಾಣಪ್ರತಿಷ್ಠಾಪನೆಯನ್ನು ಮಾಡಿ ಅದನ್ನು ತಾಮ್ರದ ಪಾತ್ರೆಯಲ್ಲಿಟ್ಟು ಮೂರುಕಾಲಗಳಲ್ಲಿಯೂ ಪೂಜೆಮಾಡಬೇಕು. ಬೇಕು. ಪಾಯಸಾನ್ನ, ನೈದಿಲೆ, ಕಮಲ ಇವುಗಳಲ್ಲಿ ಒಂದರಿಂದ ಹೋಮವನ್ನು ಮಾಡಿ ಆಚಾರ್ಯನಿಗೆ ಸುವರ್ಣದಕ್ಷಿಣೆಸಹಿತವಾಗಿ ಎರಡು ವಸ್ತ್ರಗಳನ್ನೂ, ಎಲ್ಲರಿಗೂ ಭೂರಿದಕ್ಷಿಣೆಯನ್ನೂ ಕೊಡಬೇಕು.

**ಶ್ರೀಸೂರ್ಯಸ್ಯ ಗಣೇಶಸ್ಯ ವಿರಿಂಚೇಶ್ಚಾಪಿ ಸತ್ತಮಾಃ ।**
**ವಟವೃಕ್ಷಾಂತಿಕಂ ಗತ್ವಾ ಸ್ಥಾಪಯೇದ್ವರುಣಂ ತತಃ ॥ ೧೯ ॥**

**ರಕ್ತಾಬ್ಜೈಃ ಪೂಜಯೇತ್ಸೂರ್ಯಂ ಪರಿವಾರಸಮನ್ವಿತಂ ।**
**ಅಷ್ಟಾವಿಂಶತಿಭಿರ್ದತ್ವಾ ದದ್ಯಾತ್ಪ್ರಾಣಮನಂತರಂ ॥ ೨೦ ॥**

**ಏಕಾಹಮಥವಾಕಾಶೇ ಗುಪ್ತಂ ಕೃತ್ವಾ ದಿನತ್ರಯಂ ।**
**ತ್ರ್ಯಹಾದೇವ ಪುನಃ ಪೂಜಾಂ ಪುನರ್ಹೋಮಂ ಸಮಾಚರೇತ್ ॥೨೧॥**

**ಪುನಶ್ಚ ಭೋಜಯೇದ್ವಿಪ್ರಾನ್ದದ್ಯಾತ್ಕಾಂಚನದಕ್ಷಿಣಾಂ ।**
**ವಾರಾಹ್ಯಾಸ್ತ್ರಿಪುರಾಯಾಶ್ಚ ನಾರಿಕೇಳೋದಕೈರಪಿ ॥ ೨೨ ॥**

**ಸ್ಥಾಪಯೇದ್ವಾ ವಿಧಾನೇನ ಸಿಂಧೂರಾದ್ಯೈಃ ಸಮರ್ಚಯೇತ್ ।**
**ದದ್ಯಾತ್ಸಮೀರಣಂ ಪಶ್ಚಾತ್ಪುನಃ ಪೂಜಾಂ ಚ ಹೋಮಯೇತ್ ॥ ೨೩ ॥**

**ಪಶುಜ್ಞಾನಂ ಚ ಕರ್ತವ್ಯಂ ಷಣ್ಮಾಸ್ಯೈಃ ಪಂಚಮೋದಕೈಃ ।**
**ಕುಮಾರೀಂ ಭೋಜಯೇದ್ರಾತ್ರೌ ದದ್ಯಾತ್ಕಾಂಚನದಕ್ಷಿಣಾಂ ॥ ೨೪ ॥**

೧೯-೨೧. ಬ್ರಾಹ್ಮಣಶ್ರೇಷ್ಠರೇ! ಕೇಳಿ; ಸೂರ್ಯ, ಗಣೇಶ, ಬ್ರಹ್ಮ ಇವರುಗಳ ಪ್ರತಿಮೆಗಳನ್ನು ಪ್ರತಿಷ್ಠಿಸಬೇಕಾದರೆ ಆಲದಮರದ ಸಮೀಪಕ್ಕೆ ಹೋಗಿ, ಅಲ್ಲಿ ವರುಣ ಕಲಶವನ್ನು ಸ್ಥಾಪಿಸಿ, ಅಲ್ಲಿ ಪರಿವಾರಸಮೇತನಾದ ಸೂರ್ಯನನ್ನು ಇಪ್ಪತ್ತೆಂಟು ಕೆಂಪು ಕಮಲ ಪುಷ್ಪಗಳಿಂದ ಪೂಜಿಸಿ, ಪ್ರಾಣಪ್ರತಿಷ್ಠೆಯನ್ನು ಮಾಡಬೇಕು. ಒಂದು ಅಥವಾ ಮೂರುದಿನ ಆ ಸೂರ್ಯಮಂಡಲವನ್ನು ಆಕಾಶದಲ್ಲಿ ಗೋಪ್ಯವಾಗಿಟ್ಟಿದ್ದು ಮೂರು ದಿನದ ಮೇಲೆ ಮತ್ತೆ ಪೂಜೆಮಾಡಿ ಹೋಮವನ್ನೂ ಮಾಡಬೇಕು ಬ್ರಾಹ್ಮಣರಿಗೆ ಭೋಜನಮಾಡಿಸಿ ಸುವರ್ಣದಕ್ಷಿಣೆಯನ್ನು ಕೊಡಬೇಕು.

೨೨-೨೪. ವಾರಾಹಿ, ತ್ರಿಪುರಾದೇವಿ ಇವರ ಪ್ರತಿಮೆಗಳಿಗೆ ಎಳನೀರಿನಿಂದ ಸ್ನಾನಮಾಡಿಸಿ, ಪ್ರತಿಷ್ಠಾವಿಧಿಗನುಸಾರವಾಗಿ ಸ್ಥಾಪಿಸಿ ಅರಿಶಿನ, ಕುಂಕುಮ, ಚಂದ್ರ, ಮುಂತಾದ ಮಂಗಳದ್ರವ್ಯಗಳಿಂದ ಪೂಜಿಸಿ, ಪ್ರಾಣಪ್ರತಿಷ್ಠೆಯನ್ನು ಮಾಡಿ, ಪುನಃ ಪೂಜೆಯನ್ನು ಮಾಡಬೇಕು. ಪ್ರತಿದಿನವೂ ಐದುಮೋದಕಗಳನ್ನು ಮಾಡಿ ದೇವಿಗೆ ನಿವೇದನಮಾಡುತ್ತಿದ್ದರೆ ಆರುತಿಂಗಳಲ್ಲಿ ಪಶುಸ್ವರೂಪನಾಗಿದ್ದ ವ್ಯಕ್ತಿಗೂ ಜ್ಞಾನ ಉಂಟಾಗುವುದು. ಈ ರೀತಿಯಾದ ಪೂಜೆಯಲ್ಲಿ ಪ್ರತಿದಿನವೂ ರಾತ್ರಿಯಹೊತ್ತು ಕನ್ಯೆಗೆ ಭೋಜನವನ್ನು ಮಾಡಿಸಿ ಸುವರ್ಣದಕ್ಷಿಣೆಯನ್ನು ಕೊಡಬೇಕು.

ಪ್ರತಿಮಾಂ ಭುವನೇಶೀಂ ಚ ಮಹಾಮಾಯಾಂಬಿಕಾಮಪಿ ।
ಕಾಮಾಕ್ಷೀಂ ಚ ತತೋ ದೇವೀಮಿಂದ್ರಾಕ್ಷೀಂ ಚಾಪರಾಜಿತಾಂ ॥ ೨೫ ॥

ಪೂರ್ವೇದ್ಯೂ ರಾತ್ರಿಸಮಯೇ ಪಿಷ್ಟಕಾಷ್ಟೌ ನಿವೇದಯೇತ್ ।
ಅಷ್ಟೌ ನಿರ್ಮಾಣಯೇತ್ಪಶ್ಚಾದ್ಬಲಿಂ ಚಾಷ್ಟೌ ವಿಧಾನವಿತ್ ॥ ೨೬ ॥

ಪರಿವಾರಗಣೈಃ ಸಾರ್ಧಂ ಪೂಜಯೇತ್ಪ್ರಯತಃ ಸುಧೀಃ ।
ಸಮೀರಣಂ ತತೋ ದದ್ಯಾಚ್ಛಿವಂ ಸೂರ್ಯಂ ಯಜೇತ್ಪುನಃ ॥ ೨೭ ॥

ಪಾಯಸಾನ್ನೈಶ್ಚ ಜುಹುಯಾತ್ತ್ರಿದಿನಂ ಲಿಪಿಪೂಜನಂ ।
ಕುಮಾರೀಪೂಜನಂ ಕುರ್ಯಾದಗ್ನಿಕಾರ್ಯಂ ದಿನತ್ರಯಂ ॥ ೨೮ ॥

ಪಶುದಾನಂ ಚ ಕರ್ತವ್ಯಂ ವಿಭವೇಸತಿ ಸತ್ತಮಾಃ ।
ರಾತ್ರೌ ಜಾಗರಣಂ ಕುರ್ಯಾನ್ಮಠೋತ್ಸವಪುರಃಸರಂ ॥ ೨೯ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ
ಏಕೋನವಿಂಶೋಽಧ್ಯಾಯಃ.

---

೨೫-೨೯. ಭುವನೇಶ್ವರಿ, ಮಹಾಮಾಯಾ, ಅಂಬಿಕಾ, ಕಾಮಾಕ್ಷೀ, ಇಂದ್ರಾಕ್ಷೀ, ಅಪರಾಜಿತಾ ಈ ದೇವಿಯರ ಪ್ರತಿಮೆಯ ಪ್ರತಿಷ್ಠಾವಿಷಯದಲ್ಲಿ ಬುದ್ಧಿವಂತನಾದವನು ಪ್ರತಿಷ್ಠಾಕರ್ಮದ ಹಿಂದಿನ ರಾತ್ರಿಯಲ್ಲಿ ಎಂಟು ತಂಬಿಟ್ಟಿನ ಉಂಡೆಗಳನ್ನು ನಿವೇದನ ಮಾಡಿ, ಅದನ್ನೇ ಬಲಿಪ್ರದಾನ ಮಾಡಿ ಪ್ರಯತ್ನಪೂರ್ವಕವಾಗಿ ಪರಿವಾರಸಹಿತರಾದ ಈ ದೇವಿಯರಿಗೆ ಪೂಜೆಯನ್ನು ಮಾಡಬೇಕು. ಆಮೇಲೆ ಪ್ರಾಣಪ್ರತಿಷ್ಠೆಯನ್ನು ಮಾಡಬೇಕು. ಅನಂತರ ಸೂರ್ಯನನ್ನೂ, ಶಿವನನ್ನೂ ಪೂಜಿಸಿ, ಪಾಯಸಾನ್ನದ ಆಹುತಿಯಿಂದ ಮೂರುದಿನಗಳ ಹೋಮಮಾಡಿ ಲಿಪಿಪೂಜೆಯನ್ನೂ ಕುಮಾರೀಪೂಜೆಯನ್ನೂ, ಅಗ್ನಿಕಾರ್ಯವನ್ನೂ ಮಾಡಬೇಕು. ಅನುಕೂಲವಿದ್ದವರು ಗೋದಾನ ಮಾಡಬಹುದು. ರಾತ್ರಿಯಲ್ಲಿ ಮಠದ ಉತ್ಸವವೆಂದು ಆಚರಿಸಿ ಜಾಗರಣೆ ಮಾಡಬೇಕು.

ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯ ಭಾಗದಲ್ಲಿ
ಹತ್ತೊಂಭತ್ತನೆಯ ಅಧ್ಯಾಯ ಮುಗಿದುದು.

॥ ಶ್ರೀ ॥

# ಅಥ ಶ್ರೀ ಭವಿಷ್ಯೇ ಮಹಾಪುರಾಣೇ

## ಮಧ್ಯಮಪರ್ವಣಿ ತೃತೀಯಭಾಗೇ

## ವಿಂಶೋಽಧ್ಯಾಯಃ

॥ ಸೂತ ಉವಾಚ ॥

ದುರ್ನಿಮಿತ್ತಾನ್ಯಥೋ ವಕ್ಷ್ಯೇ ಶೃಣ್ವಂತು ಮುನಿಸತ್ತಮಾಃ ।
ಯಸ್ಯ ಯೇ ಗ್ರಹದೋಷಾಃ ಸ್ಯುಃ ತೇಷಾಂ ಶಾಂತಿಂ ಯಥಾಕ್ರಮಾತ್॥೧॥

ದಿವ್ಯಂತರಿಕ್ಷೇ ಭೌಮೇ ಚೇತ್ಯೇವಂ ತ್ರಿಃ ಪರಿಕೀರ್ತಿತಂ ।
ಗ್ರಹರ್ಕ್ಷಾದ್ಯೈಃ ಕೃತಂ ದಿವ್ಯಮಂತರಿಕ್ಷಂ ನಿಬೋಧ ಮೇ ॥ ೨ ॥

ಉಲ್ಕಾಹಿತೋ ದಿಶೋ ದಾಹಃ ಪರಿವೇಷಸ್ತಥೈವ ಚ ।
ಜಲಾಶಯಾನಾಂ ವೈಕೃತ್ಯಂ ಭೌಮಂ ತದಪಿ ಕೀರ್ತಿತಂ ॥ ೩ ॥

---

### ಇಪ್ಪತ್ತನೆಯ ಅಧ್ಯಾಯ

೧-೩. ಸೂತಮುನಿವರ್ಯನು ಹೇಳುತ್ತಾನೆ—ಋಷಿಶ್ರೇಷ್ಠರೇ ! ಕೇಳಿ ; ದುಷ್ಟ ಫಲವುಂಟಾಗಲು ಕಾರಣಗಳನ್ನು ಇನ್ನು ಮುಂದೆ ಹೇಳುವೆನು. ಯಾವ ದುಷ್ಟಫಲಗಳಿಗೆ ಯಾವ ಗ್ರಹದೋಷವು ಕಾರಣ ಅವುಗಳಿಗೆ ಏನು ಶಾಂತಿಯನ್ನು ಮಾಡಬೇಕು, ಅವುಗಳನ್ನು ಕ್ರಮವಾಗಿ ಹೇಳುವೆನು. ದುರ್ನಿಮಿತ್ತಗಳು ದಿವ್ಯ, ಅಂತರಿಕ್ಷ ಮತ್ತು ಭೌಮ ಎಂದು ಮೂರುಬಗೆಯಾಗಿರುವುವು. ಗ್ರಹಗಳು ನಕ್ಷತ್ರಗಳು ಇವುಗಳಿಂದುಂಟಾದುದು ದಿವ್ಯೋತ್ಪಾತವೆನಿಸುವುದು. ಉಲ್ಕಾಪಾತ, ದಿಗ್ದಾಹ ಮತ್ತು ಸೂರ್ಯ ಚಂದ್ರ ಪರಿವೇಷ ಇವು ಅಂತರಿಕ್ಷೋತ್ಪಾತವೆನಿಸುವುದು. ಜಲಾಶಯಗಳ ವಿಕಾರವು ಭೌಮೋತ್ಪಾತವೆನಿಸುವುದು.

ಭೌಮಂ ಚಾಲ್ಪಫಲಂ ಜ್ಞೇಯಂ ದಿವ್ಯಾಂತರಿಕ್ಷಮೇವ ಚ ।
ಸಪ್ತಾಹಮುಫಲಂ ದದ್ಯಾದ್ದೈವಂ ಚಾಪಿ ಚ ತತ್ಕ್ಷಣಾತ್ ॥ ೪ ॥

ದೇವಾನಾಂ ಹಸನಂ ಚೈವ ಕಲ್ಕನಂ ರುಧಿರಸ್ರವಃ ।
ಅಕಸ್ಮಾದ್ವ್ಯಸನಂ ತತ್ರ ಯತ್ರ ನಿರ್ಘಾತನಿರ್ದಯಃ ॥ ೫ ॥

ಸರ್ಪಾದ್ಯಾರೋಹಣಂ ಚೈವ ದೈವಂ ತದಪಿ ಕೀರ್ತಿತಂ ।
ತತೋ ಮೇಘೋತ್ಸಮುತ್ಪನ್ನಾ ಯದಿ ವೃಷ್ಟಿಃ ಶಿಲಾತಲೇ ।
ಸಪ್ತಾಹಾಭ್ಯಂತರೇ ಜೀವಮುತ್ಪನ್ನಂ ನಿಷ್ಫಲಂ ಭವೇತ್ ॥ ೬ ॥

ಏಕರಾಶಿಸ್ಥಿತಾಃ ಪಾಪಾಃ ಶನಿಭೌಮದಿವಾಕರಾಃ ।
ಪೃಥ್ವೀ ಧೂಮಾಕುಲಾ ತತ್ರ ರುದಂತಿ ಬಹವೋ ಜನಾಃ ॥ ೭ ॥

ಅಭಿಚಾರಂ ಗತೇ ಜೀವೇ ಶನೌ ತತ್ರ ನ ಚಾಗತೇ ।
ತತ್ರ ಪಶ್ಯತಿ ರಾಜೇಂದ್ರಃ ಕೋ ಧರಾಂ ಧಾರಯಿಷ್ಯತಿ ॥ ೮ ॥

---

೪-೭. ಭೌಮದುರ್ನಿಮಿತ್ತಗಳ ಫಲವು ಅಲ್ಪಕಾಲಿಕವಾದುದು. ಅಂತರಿಕ್ಷ ಸಂಬಂಧವಾದ ದುರ್ನಿಮಿತ್ತವು ಏಳುದಿವಸಗಳವರೆಗೆ ದುಷ್ಫಲಗಳನ್ನು ಕೊಡುತ್ತಿರುವುದು. ದೈವ (ದಿವ್ಯ) ದುರ್ನಿಮಿತ್ತಗಳು ಆ ಕ್ಷಣದಲ್ಲಿಯೇ ಫಲವನ್ನು ಕೊಡುವುವು. ದೇವತೆಗಳ ನಗು, ಅವರ ಗದ್ದಲಗಳು, ರಕ್ತವೃಷ್ಟಿ, ಅಕಸ್ಮಾತ್ತಾಗಿ ಬರುವ ವ್ಯಸನಗಳು, ಸಿಡಿಲು ಬೀಳುವುದು, ಸರ್ಪಾದಿ ದುಷ್ಟಜಂತುಗಳು ಮೇಲೆ ಆಕ್ರಮಣಮಾಡುವುದು ಇವು ಅತಿ ನಿರ್ದಯವಾದ ದೈವದುರ್ನಿಮಿತ್ತಗಳಾಗಿವೆ. ಮೇಘದಿಂದ ಹುಟ್ಟಿದ ಮಳೆಯು ಕಲ್ಲಿನಮೇಲೆ ಬಿದ್ದರೆ ಏನು ಪ್ರಯೋಜನವಾಗುವುದು? ಜೀವದುರ್ನಿಮಿತ್ತಗಳು ಹುಟ್ಟಿದ ಏಳುದಿನಗಳೊಳಗಾಗಿ ಮತ್ತೆಕಾಣಿಸಿದರೆ ನಿಷ್ಫಲವಾಗುವುವು. ಕ್ರೂರ ಗ್ರಹಗಳಾದ ಶನಿ, ಕುಜ, ಸೂರ್ಯರು ಒಂದೇ ರಾಶಿಯಲ್ಲಿದ್ದರೆ ದುಷ್ಟಫಲಗಳನ್ನು ಕೊಡುವರು. ಆ ಸಂದರ್ಭದಲ್ಲಿ ಭೂಮಿಯಲ್ಲೆಲ್ಲಾ ಹೊಗೆ ತುಂಬಿಕೊಂಡಿರುವುದು ಅನೇಕ ಜನರು ರೋದನಮಾಡುತ್ತಿರುವರು.

೮-೧೦. ಗುರುವಿಗೆ ಸಪ್ತಮಸ್ಥಾನದಲ್ಲಿ ಶನಿಯು ಇದ್ದು ಕುಜರವಿಗಳನ್ನು ನೋಡುತ್ತಿರಲಾಗಿ ಆ ಕಾಲದಲ್ಲಿ ಭೂಮಿಯಲ್ಲಿರುವ ಯಾವ ರಾಜನೂ ದೊರೆಯಾಗಿ

**ಸೂರ್ಯಮುಪೇತ್ಯಸೋ ದ್ವಂದ್ವಂ ದಿಗ್ದಾಹಶ್ಚ ತಥೈವ ಚ ।**
**ದರ್ಶನಂ ಧೂಮಕೇತೋಶ್ಚ ನಕ್ಷತ್ರೇ ಧೂಮದರ್ಶನಂ ॥ ೯ ॥**

**ಭೂಕಂಪ ಏವ ಮಾಸೇ ಚ ಏಕಮಾಸೇ ತಥಾ ದಿನೇ ।**
**ರಾಜ್ಞೋ ಜನ್ಮದಿನೇ ವಾSಥ ಶಕ್ರಚಾಪಂ ದಿನಾಂತರೇ ॥ ೧೦ ॥**

**ದರ್ಶನಂ ಖರವಾತಸ್ಯ ಗ್ರಹಯುದ್ಧಸ್ಯ ದರ್ಶನಂ ।**
**ಮಾಸತ್ರಯೇ ತು ಗ್ರಹಣಮುಲ್ಕಾಪಾತ ಪ್ರಪಾತನಂ ॥ ೧೧ ॥**

**ಆಕಾಶೇSಪ್ಯಥ ಭೂಮೌ ಚ ತತ್ರ ಮಂಡೂಕಮೇವ ಚ ।**
**ಹರಿದ್ರಾವೃಷ್ಟಿಃ ಪಾಷಾಣೇ ಸಿಂಹಬಿಲ್ವಾಕೃತಿರ್ಯದಿ ॥**
**ದರ್ಶನೇ ರಾಷ್ಟ್ರದುರ್ಭಿಕ್ಷಮುಕರಂ ನೃಪತಿಕ್ಷಯಃ ॥ ೧೨ ॥**

**ಚೈತ್ರೇ ಕುಂಭೇ ನದೀವೇಗದರ್ಶನೇ ವಿಪ್ಲವೋ ಭವೇತ್ ।**
**ಅರ್ಕಸ್ಯಾದ್ಭುತಮೇತದ್ಧಿ ಸೃಗ್ಯುಕ್ತಂ ಶ್ರಪಯೇಚ್ಚರುಂ ॥ ೧೩ ॥**

---

ರುವುದಿಲ್ಲ. ಎಂದರೆ ಈ ಕಾಲವು ರಾಜರಿಗೆ ಅನಿಷ್ಟಫಲವನ್ನು ಕೊಡತಕ್ಕುದು. ಆ ಕಾಲದಲ್ಲಿ ದಿಕ್ಕುಗಳಲ್ಲಿ ಉರಿಯು ಕಾಣಿಸಿಕೊಳ್ಳುವುದು ಧೂಮಕೇತುವೂ, ನಕ್ಷತ್ರಗಳಲ್ಲಿ ಹೊಗೆಯೂ ಕಾಣಿಸುವುದು. ಭೂಕಂಪವು ಉಂಟಾಗುವುದು. ಇವೆಲ್ಲವೂ ಒಂದೇ ತಿಂಗಳಿನಲ್ಲಿಯೋ ಅಥವಾ ಒಂದೇದಿನದಲ್ಲಿಯೋ ಅಥವಾ ರಾಜನ ಜನ್ಮದಿನದಲ್ಲಿಯೋ ಕಾಣಿಸುವುವು. ಹಗಲಿನ ಮಧ್ಯದಲ್ಲಿ ಕಾಮನಬಿಲ್ಲು ಕಾಣಿಸುವುದು.

೧೧-೧೩. ಕ್ರೂರವಾದ ಬಿರುಗಾಳಿ, ಗ್ರಹಗಳಿಗೆ ಪರಸ್ಪರ ಯುದ್ಧ, ವರ್ಷದ ಮೂರುತಿಂಗಳಲ್ಲೂ ಕ್ರಮವಾಗಿ ಗ್ರಹಣಹಿಡಿಯುವುದು. ಉಲ್ಕಾಪಾತ, ಆಕಾಶದಲ್ಲಿಯೂ, ಭೂಮಿಯಲ್ಲಿಯೂ ಕಪ್ಪೆಗಳಸ್ಥಿತಿ, ಅರಿಶಿನಬಣ್ಣದ ಮಳೆ, ಇವು ಕಾಣಿಸಿದರೂ, ಕಲ್ಲಿನಲ್ಲಿ ಸಿಂಹದ ಆಕಾರ ಮತ್ತು ಬಿಲ್ವಪತ್ರೆಯ ಆಕಾರಗಳು ಕಂಡುಬಂದರೂ ದೇಶಕ್ಕೆ ಕ್ಷಾಮವೂ, ರಾಜರಿಗೆ ಹಾನಿಯೂ ಉಂಟಾಗುವುದು. ಚೈತ್ರಮಾಸದಲ್ಲಿಯೂ, ಕುಂಭಮಾಸದಲ್ಲಿಯೂ ನದಿಗಳ ಪ್ರವಾಹವು ಬಂದರೆ ದೇಶಕ್ಕೆ ಹಾನಿಯುಂಟಾಗುವುದು. ಇವೆಲ್ಲವೂ ಸೂರ್ಯನಿಂದುಂಟಾಗುವ ದುಷ್ಟಾರಿಷ್ಟಗಳು.

ಆಕೃಷ್ಣನೇತಿಮಂತ್ರೇಣ ಅಥವಾರ್ಕೇಣ ಯತ್ನತಃ ।
ಪ್ರಾಸಾದತೋರಣಂ ತತ್ರ ದ್ವಾರಂ ಪ್ರಾಕಾರವೇಶ್ಮ ಚ ॥ ೧೪ ॥

ಧಾನ್ಯಸಾರಂ ಗವಾಂ ಸಾರಂ ಕೂಪೇ ಕುಂಭಪ್ರದರ್ಶನಂ ।
ಆದಿತ್ಯಸ್ಯಾದ್ಭುತಂ ವಿದ್ಯಾತ್ ಕಮಲಂ ಜುಹುಯಾತ್ತತಃ ॥ ೧೫ ॥

ಸಹಸ್ರಂ ಜುಹುಯಾದ್ವಾಥ ತತಃ ಶಾಂತಿರ್ಭವೇದ್ಧ್ರುವಂ ।
ವಿಕೃತಾಃ ಪಕ್ಷಿಣಶ್ಚೈವ ಪಾಂಡುಕಪೋತಕಾಸ್ತತಃ ॥ ೧೬ ॥

ಶ್ವೇತೋಲೂಕೋ ಬೃಹಂಶ್ಚೈವ ದ್ರೋಣಕಾಕಶ್ಚ ಕೋಕಿಲಃ ।
ಕ್ರೌಂಚಶ್ಚ ವರ್ಧನೀಚೈವ ನಿಪತಂತಿ ಗೃಹೇ ಯದಿ ॥ ೧೭ ॥

ಗೃಹೇ ತಸ್ಯ ಮಹೋತ್ಪಾತೋ ಭವಿಷ್ಯತಿ ನ ಸಂಶಯಃ ।
ಸ್ಥೂಲಭಂಗಪ್ರಹರಣಂ ಪ್ರರೋಹಣಮಥಾಪಿ ವಾ ॥ ೧೮ ॥

---

೧೪-೧೫. ಭಾವಿಯಲ್ಲಿ ನೀರಿಲ್ಲದೆ ಮಣ್ಣಿನಗಡಿಗೆ ಬಿದ್ದಿರುವಂತೆ ಕಾಣುವುದು, ಉಪ್ಪರಿಗೆಮನೆ, ಊರಿನಬಾಗಿಲು, ಮನೆಯಪ್ರಾಕಾರ, ಧಾನ್ಯಗಳಸಾರವಾದ ಹಿಟ್ಟು ಗೋಸಾರವಾದ ಮಜ್ಜಿಗೆ, ಇವುಗಳು ಕಂಡುಬಂದರೆ ಇವೂ ಸೂರ್ಯಸಂಬಂಧವಾದ ಅದ್ಭುತಕಾರ್ಯಗಳು. ಇದರ ಶಾಂತಿಗಾಗಿ ಅಗ್ನಿಯಲ್ಲಿ ಚರುವನ್ನು ಪಚನಮಾಡಿ, 'ಆಕೃಷ್ಣೇನ' ಎಂಬ ಮಂತ್ರದಿಂದಲಾಗಲಿ ಸೂರ್ಯಸಂಬಂಧವಾದ ಮತ್ತಾವ ಮಂತ್ರ ದಿಂದಲಾಗಲಿ ಕಮಲಗಳನ್ನು ಹೋಮಮಾಡಬೇಕು. ಈ ರೀತಿಯಲ್ಲಿ ಚರುವಿನೊ ಡನೆ ಸಹಸ್ರಕಮಲಗಳನ್ನು ಸ್ರುಕ್ಕಿನಿಂದ ಹೋಮಮಾಡಿದರೆ ಖಂಡಿತವಾಗಿ ಶಾಂತಿ ಯುಂಟಾಗುವುದು.

೧೬-೨೦. ಬಿಳಿಯ ಪಾರಿವಾಳಗಳು, ಗೂಬೆಗಳು, ದೊಣ್ಣೆಕಾಗೆಗಳು, ಕೋಗಿ ಲೆಗಳು, ಕ್ರೌಂಚ, ವರ್ಧನಿಯೆಂಬ ನೀರುಹಕ್ಕಿಗಳು ಇವು ವಿಕಾರಧ್ವನಿಯಿಂದ ಕೂಗುತ್ತ ಮನೆಯಮೇಲೆ ಕುಳಿತುಕೊಂಡರೆ ಆ ಮನೆಗೆ ಕೆಡಕಾಗುವುದರಲ್ಲಿ ಸಂದೇಹ ವಿಲ್ಲ. ಮನೆಯಲ್ಲಿರುವವರ ಶರೀರವು ಊದಿಕೊಳ್ಳುವುದು, ಯಾವ ಅವಯವವಾ ದರೂ ಮುರಿಯುವುದು, ಏಟುಬೀಳುವುದು. ಆಗತಾನೇ ಹುಟ್ಟಿದ ಮಗುವಿಗೆ ಹಲ್ಲು

**ಹಾರಾಃ ಕಟಿಕಟಾಯಂತೇ ಜಾತಸ್ಯ ದಂತಸಂಭವಃ ।**
**ಹಸತಾ ದೇವತಾನಾಂ ಚ ಗಾತ್ರೇ ಸ್ವೇದಶ್ಚ ಜಾಯತೇ　　॥ ೧೯ ॥**

**ಸರ್ಪಮಂಡೂಕಪ್ರಸವಃ ಕುಂಭೇ ವಾಪಿ ಕ್ವಚಿದ್ಭವೇತ್ ।**
**ನಿಮಿತ್ತಾನ್ಯೇವಮಾದೀನಿ ಜಾಯಂತೇ ಯಸ್ಯ ವೇಶ್ಮನಿ ॥**
**ಷಡ್ಭಿರ್ಮಾಸೈಶ್ಚ ಮ್ರಿಯತೇ ಗೃಹಿಣೀ ಚ ಶುಭಾ ಚ ಯಾ　　॥ ೨೦ ॥**

**ಅಶನಿಃ ಪತತೇ ಯತ್ರ ಗೃಹೇ ವಜ್ರಂ ಚ ಪಾದಪೇ ।**
**ಶುಕ್ಲಾ ವಹ್ನಿಸ್ಫುಲಿಂಗಾಶ್ಚ ತಸ್ಯ ವಿದ್ಧಿ ಮಹದ್ಭಯಂ　　॥ ೨೧ ॥**

**ಖರ್ಜೂರ ಉದರಾವರ್ತೇ ನಿಕೋಚಗರಲೇऽಪಿ ಚ ।**
**ಫಲಿವೃಕ್ಷೇ ತಿಂದುಕೇ ಚ ಯತ್ರ ನಿರ್ಜಾಯತೇ ಕ್ವಚಿತ್　　॥ ೨೨ ॥**

**ಉದ್ಯಾನೇ ದೇವಗೇಹೇ ಚ ಸ್ವಗೃಹೇ ಚೈತ್ಯವೃಕ್ಷಕೇ ।**
**ಕುರ್ಯಾದಾದಿತ್ಯವಾರೇ ವಾ ಅಯುತಂ ತಿಲಪಾಯಸಂ　　॥ ೨೩ ॥**

---

ಹುಟ್ಟಿ ಹಲ್ಲುಕಡಿಯುವುದು, ದೇವತೆಗಳ ಅಶರೀರವಾಣಿ ನಗು ಇವು ಕೇಳಿಬರುವುದು, ಶರೀರದಲ್ಲಿ ಬೆವರುಂಟಾಗುವುದು, ಮನೆಯ ಪಾತ್ರೆಯೊಳಗೆ ಹಾವು ಮತ್ತು ಕಪ್ಪೆ ಇವುಗಳು ಮರಿಹಾಕುವುದು, ಇವೇ ಮೊದಲಾದ ದುರ್ನಿಮಿತ್ತಗಳು ಯಾರ ಮನೆಯಲ್ಲಿ ಉಂಟಾಗುವುದೋ ಆ ಮನೆಯ ಯಜಮಾನನ ಪತ್ನಿಯು ಸುಮಂಗಲಿಯಾಗಿ ಶುಭಕರಳಾಗಿದ್ದರೂ ಆರುತಿಂಗಳೊಳಗೆ ಮರಣವನ್ನು ಹೊಂದುವಳೆಂದು ತಿಳಿಯಬೇಕು.

೨೧-೨೪. ಯಾವನ ಮನೆಯಲ್ಲಿರುವ ಮರಕ್ಕೋ ಆ ಮನೆಗೋ ಸಿಡಿಲು ಬೀಳುವುದೋ, ಅದರ ಬೆಂಕಿಯು ಬೆಳ್ಳಗಿರುವ ಕಿಡಿಗಳಿಂದ ಕೂಡಿರುವುದೋ, ಅವನಿಗೆ ಮಹಾಭಯವುಂಟಾಗುವುದೆಂದು ತಿಳಿಯಬೇಕು. ಇಂತಹ ಸಂದರ್ಭದಲ್ಲಿ ಖರ್ಜೂರ ಉದರಾವರ್ತ, ನಿಕೋಚ, ಗರಲ, ಫಲಿವೃಕ್ಷ, ತೂಬರಗಿಡ ಈ ಮರಗಳ ಸಮೀಪದಲ್ಲಿಯೋ, ಉದ್ಯಾನದಲ್ಲೋ, ದೇವಾಲಯದಲ್ಲೋ, ತನ್ನ ಮನೆಯಲ್ಲೋ ಅಥವಾ ಪೂಜ್ಯವಾದ ಅರಳೀ, ಆಲ ಮುಂತಾದ ಮರಗಳು, ಇವುಗಳ ಸಮೀಪದಲ್ಲಿಯೋ ಭಾನುವಾರದದಿನ ತಿಲ ಪಾಯಸ, ಇವುಗಳ ಹತ್ತುಸಾವಿರ ಆಹುತಿಯಿಂದ ಹೋಮ ಮಾಡಿದರೆ ಬೇಗನೆ ಶಾಂತಿಯುಂಟಾಗುವುದು. ಈ ಶಾಂತಿಕರ್ಮವನ್ನು ಮಾಡಿದ

ತತಃ ಶಾಂತಿರ್ಭವೇದಾಶು ಧೇನುಂ ದದ್ಯಾಚ್ಚ ದಕ್ಷಿಣಾಂ ।
ಪಾಯಸಂ ತಿಲಮುದ್ಗೌ ಚ ಪುಷ್ಪಂ ವಾ ತಾಲವೃಂತಕಂ ॥
ಇಕ್ಷುನೋದಕಪಿಣ್ಯಾಕಾನ್ ಜುಹುಯಾದ್ರವಿಮುದ್ದಿಶನ್ ॥ ೨೪ ॥

ಸಿಂಹಾಸನಂ ರಥಶ್ಛತ್ರಂ ಧ್ವಜಶ್ಚಾಮರಭೂಷಿತೇ ।
ಅಕಸ್ಮಾದ್ದೃಶ್ಯತೇ ಯತ್ರ ರಾಜ್ಞೋ ವಾನ್ಯತ್ರ ಕುತ್ರಚಿತ್ ॥ ೨೫ ॥

ನದಯಂತಿ ಚ ಸತ್ಯಸ್ಯೋಜ್ವಲನಂ ಸ್ತ್ರೀಪುರುಷಯೋಃ ।
ಆಗಮಸ್ಯ ದೃಷ್ಟ್ವೈವ ಭಂಗಃ ಕಟಿಕಟಾಯನಂ ॥ ೨೬ ॥

ಉಪರಿಷ್ಟಾದ್ಭವೇದ್ಯಸ್ಯ ಮಹೋತ್ಪಾತೋ ಭವೇದಯಂ ।
ಚಲತ್ವಂ ಚಾಧರಸ್ಯಾಪಿ ತಥಾ ಕಟಿಕಟಾಯನಂ ॥ ೨೭ ॥

ರುದಿತಂ ಕೋಕಿಲಸ್ಯಾಪಿ ಉಲೂಕೋಪ್ಯಶುಭಂ ವದೇತ್ ।
ರಾಜಾಮಾತ್ಯವಿನಾಶಾಯ ಮಹೀಂ ಚ ತತ್ಸುತೋಽಪಿ ವಾ ॥ ೨೮ ॥

---

ಮೇಲೆ ದಕ್ಷಿಣೆಸಮೇತ ಗೋದಾನವನ್ನೂ ಮಾಡಬೇಕು. ಮತ್ತು ಸೂರ್ಯನನ್ನು ಉದ್ದೇಶಿಸಿ ಪಾಯಸ, ಎಳ್ಳು, ಹೆಸರು, ಹೂ, ತಾಳೇಗರಿಯ ಬೀಸಣಿಗೆ, ಕಬ್ಬು, ಮೋದಕವೆಂಬ ಭಕ್ಷ್ಯ, ಇವುಗಳನ್ನು ನಿವೇದನಮಾಡಬೇಕು.

೨೫-೩೦. ರಾಜನ ಸಿಂಹಾಸನ, ರಥ, ಛತ್ರಿ, ಬಾವುಟ, ಚಾಮರಗಳು ಇವು ಮತ್ತೆಲ್ಲಿಯಾದರೂ ಅಕಸ್ಮಾತ್ತಾಗಿ ಕಂಡರೂ ಸ್ತ್ರೀಪುರುಷರ ಸತ್ಯತೆಯನ್ನು ಪ್ರಕಟ ಪಡಿಸುವ ಗಟ್ಟಿಯಾದ ಧ್ವನಿಯು ಕೇಳಿಬಂದರೆ ಶಾಸ್ತ್ರವಿಧಿಗೆ ಭಂಗವು ಬಂದು ವನ್ನು ಕಂಡು ತುಟಿಯು ನಡುಗುತ್ತಾ ಹಲ್ಲುಗಳು ಕಟಕಟ ಎಂದು ಶಬ್ದಮಾಡುತ್ತಿ ದ್ದಂತೆ ಕಂಡರೂ ಮಹಾಉತ್ಪಾತವುಂಟಾಗುವುದೆಂದು ತಿಳಿಯಬೇಕು. ಕೋಗಿಲೆಯು ಅಳುವ ಧ್ವನಿಯೂ, ಗೂಬೆಯ ಅಮಂಗಳಧ್ವನಿಯೂ ಕೇಳಿಬಂದರೆ ರಾಜನ ಮರಣ ವನ್ನೋ ಮಂತ್ರಿಯ ಮರಣವನ್ನೋ ಅಥವಾ ರಾಜಪುತ್ರನ ವಿನಾಶವನ್ನೋ ಸೂಚಿಸು ವುದೆಂದು ತಿಳಿಯಬೇಕು. ಇದರಿಂದ ಮದಿಸಿದ ಆನೆಗಳು ನಾಶವಾಗುವುದರಲ್ಲಿ ಸಂದೇಹವಿಲ್ಲ. ತಾಳೆಯಮರ ಅಡಕೆಯಮರ ಇವು ಪ್ರಮಾದದಿಂದ ಅವಳಿಮರ ಗಳಾಗಿದ್ದರೆ ಆ ಮನೆಯ ಯಜಮಾನನು ಹೆಂಡತಿಮಕ್ಕಳೊಡನೆ ನಾಶವಾಗುವನೆಂದು

**ಹಸ್ತಿನೋ ಮದಯುಕ್ತಾಶ್ಚ ಮ್ರಿಯಂತೇ ನಾತ್ರ ಸಂಶಯಃ ।**
**ತಾಡೀ ಪೂಗಾದಯೋ ಯತ್ರ ಯಮೌ ಸ್ಯಾತಾಂ ಪ್ರಮಾದತಃ ॥**
**ಗೇಹೀ ತತ್ರ ವಿನಶ್ಯೇತ ಸದಾರಃ ಪುತ್ರಸಂಯುತಃ ॥ ೨೯ ॥**

**ಬದ್ಧಪುಷ್ಪೇ ಯದಾ ಪುಷ್ಪಂ ಫಲಂ ವಾ ಯದಿ ದೃಶ್ಯತೇ ।**
**ಅಕ್ಷತಾದರ್ಶನಾತ್ತತ್ರ ಸೋಮಸ್ಯಾದ್ಭುತದರ್ಶನಂ ॥**
**ದಧಿ ಮಧು ಘೃತಂ ಚೈವ ಜುಹುಯಾದಯುತಂ ದ್ವಿಜಾಃ ॥ ೩೦ ॥**

**ಪಾಲಾಶಂ ಸೋಮಮುದ್ದಿಶ್ಯ ಸೋಮಸ್ಯ ಚ ಭವೇದ್ದಿನೇ ।**
**ಇಮಂದೇವಾ ಇತಿ ಮಂತ್ರೇಣ ಸೋಮಾಯ ಶ್ರಪಯೇಚ್ಚರುಂ ॥ ೩೧ ॥**

**ಉತ್ಪತಂತಿ ಗೃಹೇ ಯಸ್ಯ ಯವಾ ಮಾಷಾಶ್ಚ ಪುಷ್ಕಲಾಃ ।**
**ದಧಿಕ್ಷೀರಾಜ್ಯಪಾಕೇಷು ರುಧಿರಂ ದೃಶ್ಯತೇ ಯದಿ ॥ ೩೨ ॥**

**ಅಕಸ್ಮಾದ್ಗೃಹದಾಹಸ್ತು ಅನಗ್ನಿಜ್ವಲನಂ ಯಥಾ ।**
**ಮೇಘಹೀನಾ ಭವೇದ್ವಿದ್ಯುದ್ವೃಷಸ್ಯೋದ್ಗಮನಂ ತಥಾ ॥ ೩೩ ॥**

---

ತಿಳಿಯಬೇಕು. ಒಂದುಬಗೆಯ ಹೂವಿನಲ್ಲಿ ಮತ್ತೊಂದು ಜಾತಿಯ ಹೂ ಕಾಯಿ ಕಂಡರೆ, ಇದು ಅಮಂಗಳಸೂಚಕ. ಇವುಗಳೆಲ್ಲವೂ ಚಂದ್ರನಿಂದುಂಟಾಗುವ ಅದ್ಭುತಗಳು. ಇದಕ್ಕಾಗಿ ಮೊಸರು, ಜೇನುತುಪ್ಪ. ತುಪ್ಪ ಇವುಗಳಿಂದ ಹತ್ತುಸಾವಿರ ಆಹುತಿಗಳನ್ನು ಹೋಮ ಮಾಡಬೇಕು.

೩೧. ಸೋಮವಾರದದಿನ ಚಂದ್ರನನ್ನುದ್ದೇಶಿಸಿ ಚರುವನ್ನು ಮಾಡಿ ಮುತ್ತುಗದ ಸಮಿತ್ತುಗಳೊಡನೆ 'ಇಮಂದೇವಾ' ಎಂಬ ಮಂತ್ರದಿಂದ ಹಿಂದೆ ಹೇಳಿದಂತೆ ಹತ್ತುಸಾವಿರ ಹೋಮವನ್ನು ಮಾಡಬೇಕು.

೩೨-೩೪. ಜನರ ಮನೆಯಲ್ಲಿ ಯವಧಾನ್ಯವೂ ಉದ್ದೂ ಇತರ ಧಾನ್ಯಗಳಿಗಿಂತ ಹೆಚ್ಚಾಗಿ ಉತ್ಪತ್ತಿಯಾಗಿರುವುದು; ಮೊಸರು, ಹಾಲು, ಮಾಡಿದ ಅಡಿಗೆ ಪದಾರ್ಥಗಳು ಇವುಗಳಲ್ಲಿ ರಕ್ತಗಳು ಕಂಡುಬರುವುದು, ಬೆಂಕಿಯ ಉರಿಯಿಲ್ಲದೆ ಅಕಸ್ಮಾತ್ತಾಗಿ ಮನೆಯು ಸುಟ್ಟುಹೋಗುವುದು, ಮೋಡವಿಲ್ಲದೆ ಮಿಂಚುಹುಟ್ಟುವುದು, ಧರ್ಮಕ್ಕೆ ಹಾನಿಯುಂಟಾಗುವುದು, ಸಮಸ್ತಪಶುಗಳೂ ಮನುಷ್ಯರೂ ರೋಗದಲ್ಲಿ ನರಳುವುದು, ಕಾರಣವಿಲ್ಲದೆ ಸಮಸ್ತಪ್ರಾಣಿಗಳ ನಾಶ ಇವೆಲ್ಲಾ ಕುಜನ ಅದ್ಭುತ,

ವ್ಯಾಧಿಲೀನಾ ವಿನಶ್ಯಂತಿ ನಿಖಿಲಾಃ ಪಶುಮಾನುಷಾಃ ।
ಏವಂ ಸರ್ವಾಣಿ ಭೂತಾನಿ ಭವಂತ್ಯಂಗಾರಕೇ ಧ್ರುವಂ ॥ ೩೪ ॥

ರಾಜಾಮಾತ್ಯವಿನಾಶಾಯ ಗೇಹೇ ಗೇಹೀ ವಿನಶ್ಯತಿ ।
ಪ್ರಾಣನಾಶಾಯ ವಿಪ್ರಾಯಾಹುತ್ಯಾ ಚ ಪ್ರಭವಂತಿ ಹಿ ॥ ೩೫ ॥

ದೃಷ್ಟ್ವಾ ವಾ ಭದ್ರಮತ್ಯುಗ್ರಂ ಜುಹುಯಾದಯುತಂ ಕ್ರಮಾತ್ ।
ದಧಿಮಧುಘೃತೈರ್ಯುಕ್ತಂ ಖಾದಿರೋದುಂಬರೇಽಪಿ ಚ ॥ ೩೬ ॥

ಅಗ್ನಿರ್ಮೂರ್ಧೇತಿ ಮಂತ್ರೇಣ ಶ್ರಪಿತಂ ಲೋಹಿತಂ ಚರುಂ ।
ತ್ರಿವಿಪ್ರಾನ್ಭೋಜಯೇದ್ದದ್ಯಾದ್ದಕ್ಷಿಣಾಂ ಲೋಹಿತಂ ತತಃ ॥ ೩೭ ॥

ಸ್ವರ್ಣಮಂಗಾರಮುದ್ದಿಶ್ಯ ತತಃ ಶಾಂತಿಃ ಪ್ರಜಾಯತೇ ।
ಪುಷ್ಪಂ ವಾ ಪಾತಯೇದ್ಯತ್ರ ಫಲಂ ವಾಪಿ ತಥೈವ ಚ ॥
ದಧ್ಯನ್ನಂ ಚ ಘೃತೈರ್ಮಿಶ್ರಂ ಹಿರಣ್ಯಂ ರೌಪ್ಯಮೇವ ಚ ॥ ೩೮ ॥

---

ರಾಜನ ಮತ್ತು ಮಂತ್ರಿಯ ನಾಶಕ್ಕೆ ನಿಯತವಾದ ಅರಿಷ್ಟಸೂಚಕವಾಗುತ್ತವೆ. ಇದು ಸಂಭವಿಸಿದ ಮನೆಯ ಯಜಮಾನನು ನಾಶಹೊಂದುವನು. ಈ ದುರ್ನಿಮಿತ್ತಗಳು ಬ್ರಾಹ್ಮಣನ ಪ್ರಾಣನಾಶಕ್ಕೂ ಶಕ್ತವಾಗುವುವು,

೩೬-೩೭. ಅತಿಕ್ರೂರವಾದ ಈ ದುರ್ನಿಮಿತ್ತಗಳಿಗೆ ಅಂಗಾರಕನು ಕಾರಣನೆಂದು ತಿಳಿದು ಅದರ ಶಾಂತ್ಯರ್ಥವಾಗಿ ಅಂಗಾರಕನನ್ನು ಉದ್ದೇಶಿಸಿ ಕೆಂಪಾದ ಅನ್ನವನ್ನು ಮೊಸರು, ಹಾಲು, ತುಪ್ಪ ಇವುಗಳ ಜತೆಯಲ್ಲಿ ಕಗ್ಗಲಿ ಮತ್ತು ಅತ್ತಿಯ ಸಮಿತ್ತುಗಳೊಡನೆ 'ಅಗ್ನಿರ್ಮೂರ್ಧಾ' ಎಂಬ ಮಂತ್ರದಿಂದ ಕ್ರಮವಾಗಿ ಹತ್ತುಸಾವಿರ ಆಹುತಿಗಳನ್ನು ಹೋಮಮಾಡಬೇಕು. ಆ ಮೇಲೆ ಮೂರುಜನ ಬ್ರಾಹ್ಮಣರಿಗೆ ಭೋಜನಮಾಡಿಸಿ ಸುವರ್ಣದಕ್ಷಿಣೆಯನ್ನು ಕೊಡಬೇಕು. ಹೀಗೆ ಮಾಡಿದಮೇಲೆ ಶಾಂತಿಯುಂಟಾಗುವುದು.

೩೮-೪೦. ಈ ಸಂದರ್ಭದಲ್ಲಿ ಪುಷ್ಪವನ್ನಾಗಲಿ, ಫಲವನ್ನಾಗಲಿ ತುಪ್ಪದಿಂದ ಕೂಡಿದ ಮೊಸರನ್ನವನ್ನಾಗಲಿ ಬೆಳ್ಳಿ ಅಥವಾ ಚಿನ್ನದ ದಕ್ಷಿಣೆಯೊಡನೆ ಕೊಟ್ಟರೆ ಸಂತೋಷಹೊಂದಿದ ಅಂಗಾರಕನು ಆನೆ, ಕುದುರೆ, ಎಮ್ಮೆ, ಗೋವು, ಹೆಂಡತಿ ಮಕ್ಕಳು ಮತ್ತು ದ್ರವ್ಯ ಇವುಗಳೆಲ್ಲವನ್ನೂ ಕೊಡುವನು. ಅಂಗಾರಕನ ಮಂತ್ರ

ಹಸ್ತ್ಯಶ್ವಮಹಿಷಾ ಗಾವೋ ದಾರಾಪತ್ಯಧನಾನಿ ಚ ।
ತುಷ್ಟೇನಾಂಗಾರಕೇಣೈವ ಸರ್ವಮೇತತ್ಪ್ರದೀಯತಾಂ ॥
ಅಂಗಾರಕೇಣ ಮಂತ್ರೇಣ ಖಾದಿರಂ ಚಾಕ್ಷತೈರ್ಯುತಂ ॥ ೩೯ ॥

ದಕ್ಷಿಣಾಂ ಚ ಯಥಾಶಕ್ತಿ ದದ್ಯಾದ್ವಿಪ್ರಾಯ ವಾ ಪುನಃ ।
ಲೋಹಿತಂ ಚ ಬಲಿಂ ದದ್ಯಾತ್ತತಃ ಸಂಪದ್ಯತೇ ಶುಭಂ ॥ ೪೦ ॥

ಧಾವಂತಿ ಚೋರ್ಧ್ವಪುಚ್ಛಾಶ್ಚ ಗೃಹೇ ಗಾವಃ ಸ್ವಯಂ ಯದಿ ।
ಆರೋಹಂತಿ ಗೃಹಂ ವಿಪ್ರಾಃ ಸಾರಮೇಯಾಶ್ಚ ಸೂಕರಾಃ ॥ ೪೧ ॥

ಗೃಹೇ ಯಸ್ಯ ಭವಂತ್ಯೇತೇ ತಸ್ಯ ಭಾರ್ಯಾ ವಿನಶ್ಯತಿ ।
ಸರ್ವೇಷಾಂ ವಾ ಭವೇನ್ಮೃತ್ಯುರ್ವಂಧ್ಯಾಗೌರ್ವಾ ಪ್ರಜಾಯತೇ ॥ ೪೨ ॥

ಮಿಥ್ಯಾವಾದೇನ ಗೇಹೇ ಚ ರಾಜ್ಞಾ ವಾದ್ಯೈಶ್ಚ ತಿಷ್ಠತಿ ।
ಅಥವಾ ಯದ್ಗೃಹೇ ಗಾವೋ ನರ್ದಯಂತಿ ಹಸಂತಿ ಚ ॥ ೪೩ ॥

---

ಪೂರ್ವಕವಾಗಿ ಅಕ್ಷತೆಯೊಡನೆ ಕಗ್ಗಲಿಯ ಸಮಿತ್ತನ್ನು ಹೋಮಮಾಡಿ, ಯಥಾಶಕ್ತಿ ದಕ್ಷಿಣೆಯನ್ನು ಬ್ರಾಹ್ಮಣನಿಗೆ ಕೊಟ್ಟು, ಕೆಂಪಾದ ಅನ್ನವನ್ನು ಬಲಿಸಮರ್ಪಣೆಮಾಡಬೇಕು. ಆ ಮೇಲೆ ಶಾಂತಿಯುಂಟಾಗುವುದು.

೪೧-೪೨. ಯಾರ ಮನೆಯಲ್ಲಿ ಹಸುಗಳು ತಾವಾಗಿಯೇ ಬಾಲಗಳನ್ನು ಎತ್ತಿಕೊಂಡು ಓಡಾಡುತ್ತಿರುವುವೋ, ನಾಯಿ ಮತ್ತು ಹಂದಿಗಳು ಯಾರ ಮನೆಯ ಮೇಲಕ್ಕೆ ಹತ್ತಿ ಓಡಾಡುತ್ತಿರುತ್ತವೆಯೋ ಆ ಮನೆಯ ಯಜಮಾನನ ಹೆಂಡತಿಯು ಮರಣಹೊಂದುವಳು. ಈ ದುರ್ನಿಮಿತ್ತದಿಂದ ಮನೆಯವರೆಲ್ಲರಿಗೂ ಮೃತ್ಯುವು ಬಂದರೂ ಬರಬಹುದು. ಬಂಜೆಯಾದ (ಗೊಡ್ಡಾದ) ಹಸುವು ಕರುವನ್ನು ಹಾಕಿದರೂ, ಈ ದುರ್ನಿಮಿತ್ತದ ಫಲವು ತಪ್ಪುವುದಿಲ್ಲ ಎಂದರೆ ಅಸಂಭವವಾದ ಕಾರ್ಯಗಳು ನಡೆದರೂ ಈ ದುರ್ನಿಮಿತ್ತಗಳು ಸುಳ್ಳಾಗಲಾರವೆಂದು ತಿಳಿಯಬೇಕು.

೪೩-೪೬. ಮನೆಯ ಯಜಮಾನನು ಸುಳ್ಳನ್ನು ಸಾಧಿಸಿ ರಾಜನೊಡನೆ ವಾದಮಾಡುತ್ತಿರುವುದು ಅಥವಾ ಯಾವ ಮನುಷ್ಯನ ಮನೆಯಲ್ಲಿ ಗೋವುಗಳು

ಧರಣೀಹನನಂ ಯತ್ರ ದ್ವಯೋರಾಸ್ಕಂದನಂ ತಥಾ ।
ನಿಮಿತ್ತಾನ್ಯೇವಮಾದೀನಿ ಗೋಶ್ವಜಾತಾನಿ ಸತ್ತಮಾಃ ॥ ೪೪ ॥

ಯಸ್ಯ ಗೇಹೇ ಭವಂತ್ಯೇತೇ ನಾಶಸ್ತಸ್ಯ ಭವೇದ್ಧ್ರುವಂ ।
ಮಂಡೂಕಸರ್ಪಕೂಷ್ಮಾಂಡಾಃ ಪ್ರಸುವಂತಿ ಯಥಾಸ್ತ್ರಿಯಃ ॥ ೪೫ ॥

ಅಕಸ್ಮಾದ್ಯದಿ ಚೈತಾನಿ ಬುಧಸ್ಯೋತ್ಪಾತಲಕ್ಷಣಂ ।
ಶಾಂತಿಂ ತತ್ರ ಪ್ರವಕ್ಷ್ಯಾಮಿ ಯಥಾ ಸಂಪದ್ಯತೇ ಸುಖಂ ॥ ೪೬ ॥

ದಧಿಮಧುಘೃತಾಕ್ತಾಂ ಚ ಅಪಾಮಾರ್ಗಂ ತಥಾ ಪುನಃ ।
ಅಯುತಂ ಬುಧವಾರೇ ತು ಜುಹುಯಾಚ್ಛ್ರದ್ಧಯಾ ಯುತಃ ॥ ೪೭ ॥

ಅಂಬಕೇತಿ ಚ ಮಂತ್ರೇಣ ಬುಧಾಯ ಶ್ರಪಯೇಚ್ಚರುಂ ।
ಸುವರ್ಣಂ ಬುಧಮುದ್ದಿಶ್ಯ ಗಾಂ ಚ ದದ್ಯಾತ್ಪಯಸ್ವಿನೀಂ ॥ ೪೮ ॥

---

ಕೂಗಿಕೊಂಡು ಆರ್ಭಟಿಸುವುದು, ನಗುವುದು, ಗೊರಸುಗಳಿಂದ ಭೂಮಿಯನ್ನು ಕೆರೆಯುವುದು ಮತ್ತು ಎರಡು ಹಸುಗಳು ಜಗಳವಾಡುವುದು ಮೊದಲಾದ ಹಸು, ಕುದುರೆ ಈ ಪ್ರಾಣಿಗಳ ಕಾರ್ಯರೂಪವಾದ ದುರ್ನಿಮಿತ್ತಗಳು ಉಂಟಾದರೆ ಇವುಗಳಿಂದ ಆ ಮನೆಯ ಯಜಮಾನನಿಗೆ ನಾಶವುಂಟಾಗುವುದು ಖಂಡಿತ. ಸ್ತ್ರೀಯರು ಗರ್ಭಿಣಿಯರಾಗಿ ಕಪ್ಪೆ, ಹಾವು, ಕೂಷ್ಮಾಂಡವೆಂಬ ಗ್ರಹ ಇವುಗಳನ್ನು ಆಕಸ್ಮಿಕವಾಗಿ ಪ್ರಸವಿಸಿದರೆ ಇವುಗಳೆಲ್ಲಾ ಬುಧನಿಂದ ಉಂಟಾಗುವ ಉತ್ಪಾತಗಳ ಲಕ್ಷಣವೆಂದು ತಿಳಿಯಬೇಕು. ಇದರ ತೊಂದರೆಯನ್ನು ತಪ್ಪಿಸಿಕೊಂಡು ಸುಖವನ್ನು ಹೊಂದಬೇಕಾದರೆ ಮಾಡಬೇಕಾದ ಶಾಂತಿಯನ್ನು ಹೇಳುವೆನು.

೪೭-೪೮. ಬುಧನಿಗೋಸ್ಕರ ಚರುವನ್ನು ಮಾಡಿ ಮೊಸರು, ಜೇನುತುಪ್ಪ, ತುಪ್ಪ ಇವುಗಳಿಂದ ನೆನಸಿದ ಉತ್ತರಣೆಯ ಸಮಿತ್ತುಗಳೊಡನೆ 'ಅಂಬಕಾ' ಎಂಬ ಮಂತ್ರದಿಂದ ಹತ್ತುಸಾವಿರ ಚರುಹೋಮಗಳನ್ನು ಬುಧವಾರದ ದಿನದಲ್ಲಿ ಭಕ್ತಿಯಿಂದ ಮಾಡಬೇಕು ಬುಧಪ್ರೀತಿಗೋಸ್ಕರ ಸುವರ್ಣವನ್ನೂ, ಹೆಚ್ಚುಹಾಲು ಕೊಡುವ ಹಸುವನ್ನೂ ದಾನಮಾಡಬೇಕು.

**ಸುವರ್ಣಂ ಪುಷ್ಪವೃಷ್ಟಿಂ ಚ ಸುಫಲಂ ಚಾಕ್ಷತಂ ತಥಾ ।**
**ಗೃಹೇ ಪ್ರಾಂಗಣಕೇ ಯಸ್ಯ ನಿಪತಂತಿ ಕದಾಚನ ॥ ೪೯ ॥**

**ಅಲಂಕಾರಯುತಾಂ ವಾಪಿ ಸರ್ವಾಭರಣಭೂಷಿತಾಂ ।**
**ಗೃಹಮಧ್ಯೇ ತು ಯಃ ಪಶ್ಯೇತ್ ಕ್ಷೀಣಾಮಂತರ್ಹಿತಾಂ ಸ್ತ್ರಿಯಂ ॥ ೫೦ ॥**

**ಅಕಸ್ಮಾನ್ಮಾಲತೀಪುಷ್ಪಂ ಜಾತಂ ಸ್ಯಾತ್ತಸ್ಯ ವಾ ಗೃಹೇ ।**
**ಸೋಮಾಯ ನ ಚ ಸಂತುಷ್ಟಃ ಸರ್ವಮೇತತ್ಪ್ರದೃಶ್ಯತೇ ॥ ೫೧ ॥**

**ಧನಂ ಧಾನ್ಯಂ ತಥಾ ಪುತ್ರ ಐಶ್ವರ್ಯಂ ಚ ವರಸ್ತ್ರಿಯಃ ।**
**ಸಭೃತ್ಯಾಶ್ಚ ಮಹಿಷ್ಯಶ್ಚ ಮರಿಷ್ಯಂತಿ ನ ಸಂಶಯಃ ॥ ೫೨ ॥**

**ಶ್ರೀಶ್ಚತೇತಿ ಚ ಮಂತ್ರೇಣ ಅಪಾಮಾರ್ಗಂ ತಥಾ ಬುಧಃ ।**
**ಸಹಸ್ರಂ ಬುಧವಾರೇ ಚ ಜುಹುಯಾದ್ಘೃತಸಂಯುತಂ ॥ ೫೩ ॥**

**ಪಯಸ್ವಿನೀಂ ತಥಾ ಗಾಂ ಚ ವಾಸೋಯುಗ್ಮಸಮನ್ವಿತಂ ।**
**ದ್ವಿಜಾಯ ಶ್ರದ್ಧಯಾ ದದ್ಯಾತ್ತತಃ ಸಂಪದ್ಯತೇ ಶುಭಂ ॥ ೫೪ ॥**

---

೪೯-೫೨. ಮನೆಯ ಅಂಗಳದಲ್ಲಿ ಯಾವಾಗಲಾದರೂ ಚಿನ್ನದಹೂಗಳ ಮಳೆ (ಸುವರ್ಣಪುಷ್ಪವೃಷ್ಟಿಯು) ಉತ್ತಮವಾದ ಹಣ್ಣುಗಳು, ಅಕ್ಷತೆ ಇವು ಬಿದ್ದುದು ಕಂಡುಬಂದರೂ, ಮನೆಯ ನಡುವೆ ಸಮಸ್ತ ಆಭರಣಗಳಿಂದಲೂ ಅಲಂಕರಿಸಿಕೊಂಡ ಕೃಶವಾದ ಶರೀರವುಳ್ಳ ಸ್ತ್ರೀಯು ಕಾಣಿಸಿದಂತಾಗಿ ಮರೆಯಾದರೂ, ಅಕಸ್ಮಾತ್ತಾಗಿ, ಮನೆಯಲ್ಲಿ ಇರುವಂತಿಗೆ ಹೂ ಬಿಟ್ಟರೂ, ಇವುಗಳೆಲ್ಲವೂ ಬುಧನ ದೋಷದಿಂದ ಉಂಟಾಗಿದೆಯೆಂದು ತಿಳಿಯಬೇಕು. ಇದರ ಫಲವಾಗಿ ಮನೆಯ ಯಜಮಾನನ ಧನಧಾನ್ಯಗಳೂ, ಮಕ್ಕಳೂ, ಸ್ತ್ರೀಯರೂ, ಸೇವಕರೂ, ಎಮ್ಮೆಗಳೂ ನಾಶವಾಗುವು ವೆಂದು ತಿಳಿಯಬೇಕು. ಇದರಲ್ಲಿ ಸಂದೇಹವಿಲ್ಲ.

೫೩-೫೪. ಇದರ ಶಾಂತಿಗಾಗಿ ಉತ್ತರಣೆಯಸಮಿತ್ತು ಮತ್ತು ತುಪ್ಪ ಇವನ್ನು ಬುಧವಾರದದಿನ 'ಶ್ರೀಶ್ಚತೇ' ಎಂಬ ಮಂತ್ರದಿಂದ ಸಾವಿರಹೋಮ ಮಾಡಬೇಕು. ಮತ್ತು ಹೆಚ್ಚು ಹಾಲನ್ನು ಕೊಡುವ ಹಸುವನ್ನೂ ಒಂದುಜೊತೆ ವಸ್ತ್ರವನ್ನೂ ಭಕ್ತಿ ಯಿಂದ ದ್ವಿಜನಿಗೆ ದಾನಮಾಡಿದರೆ ಶುಭವುಂಟಾಗುವುದು.

ರಕ್ತಸ್ರಾವೋ ಭವೇದ್ಯತ್ರ ತತ್ರ ಋತ್ವಿಕ್ಪ್ರಸೂಯತೇ ।
ಸಿಂಹವ್ಯಾಘ್ರಗವಾದೀನಾಂ ಧನಹಾನಿವಿಪತ್ಕರಃ ॥ ೫೫ ॥

ಏಕೋ ವೃಷಸ್ತ್ರಯೋ ಗಾವಃ ಸಪ್ತಾಷ್ಟ ನವ ದಂತಿನಃ ।
ಸಂವತ್ಸರೇಣ ತಸ್ಯೈಕಾ ಪ್ರಸೂತಿರ್ವಿಹತಾ ಪುನಃ ॥ ೫೬ ॥

ಪುನಃಪುನರ್ವ್ರತಂ ಚಾಶು ಅಕಾಲೇ ಮೈಥುನಂ ತಥಾ ।
ಗಾವೋ ಯತ್ರ ಪ್ರಸೂಯಂತೇ ಯಮೌ ದೋಷಕರಾವಿಮೌ ॥ ೫೭ ॥

ಭಂಜೀಕೃತಾನಿ ಧಾನ್ಯಾನಿ ವ್ರೀಹಯೋ ಯವತಂಡುಲಾಃ ।
ಗ್ರಾವಿಮಾರ್ಜಾರಮಂಡೂಕಾಃ ಸ್ಥೂಣಾಭಂಗೇ ಚ ಪ್ರಾಂಗಣೇ ॥ ೫೮ ॥

ವಿಕಿರಂತಿ ನಖೈರ್ಭೂಮಿಂ ಪ್ರರೋಹಂತಿ ಗೃಹಂ ತಥಾ ।
ಗೃಹೇ ಯಸ್ಯ ಪ್ರಜಾಯಂತೇ ತಸ್ಯ ಮೃತ್ಯುರ್ನ ಸಂಶಯಃ ॥ ೫೯ ॥

ಷಣ್ಮಾಸಾಭ್ಯಂತರೇ ಯತ್ರ ಸ್ಮಶಾನಂ ಯಾಸ್ಯತಿ ಧ್ರುವಂ ।
ಕಲಹಂ ಜ್ಞಾತಿವೈರಂ ಚ ವ್ಯಾಧಿಪೀಡಾ ಭವಿಷ್ಯತಿ ॥ ೬೦ ॥

---

೫೫-೬೦. ಋತ್ವಿಜನು ಹೋಮಮಾಡುವಸ್ಥಳದಲ್ಲಿ ರಕ್ತಸ್ರಾವವುಂಟಾದರೂ, ಸಿಂಹ, ಹುಲಿ, ಹಸು ಮುಂತಾದ ಪ್ರಾಣಿಗಳು ಮರಿಯನ್ನು ಹಾಕಿದರೂ, ಯಜಮಾನನಿಗೆ ಧನಹಾನಿಯೂ ವಿಪತ್ತೂ ಉಂಟಾಗುವುದು. ಒಂದುಎತ್ತು, ಮೂರುಹಸು, ಏಳು ಎಂಟು ಒಂಭತ್ತು ಆನೆ ಇವುಗಳಲ್ಲಿ ಒಂದು ವರ್ಷದೊಳಗೆ ಒಂದು ಪ್ರಾಣಿ ನಾಶವಾದರೂ, ಮತ್ತೆಮತ್ತೆ ಅಲ್ಪಕಾಲದಲ್ಲೇ ಈ ನಾಶವು ಹೆಚ್ಚಿದರೂ, ಅಲ್ಪಕಾಲದಲ್ಲಿ ಸ್ತ್ರೀಪುರುಷರು ಕೂಡಿದರೂ, ಹಸುವು ಎರಡು ಕರುಗಳನ್ನು ಹಾಕಿದರೂ, ಇವೆಲ್ಲ ದೋಷಕರವಾದವುಗಳು. ಮನೆಯಲ್ಲಿದ್ದ ಬತ್ತ, ಯವೆ, ಅಕ್ಕಿ ಮುಂತಾದ ಧಾನ್ಯಗಳು ಕೆಟ್ಟುಹೋದರೂ, ಅಂಗಳದ ಕಂಬವು ಮುರಿದುಹೋದರೂ, ಆ ಅಂಗಳದಲ್ಲಿ ಆಡು, ಕುರಿ, ಬೆಕ್ಕು, ಕಪ್ಪೆ ಇವುಗಳು ತಮ್ಮ ಉಗುರುಗಳಿಂದ ಭೂಮಿಯನ್ನು ಕೆದೆದರೂ, ಅವು ಮನೆಯಮೇಲಕ್ಕೆ ಹತ್ತಿದರೂ ಯಾವನ ಮನೆಯಲ್ಲಿ ಇವುಗಳೆಲ್ಲವೂ ನಡೆಯುತ್ತವೆಯೋ ಅವನಿಗೆ ಮೃತ್ಯುವುಂಟಾಗುವುದರಲ್ಲಿ ಸಂದೇಹವಿಲ್ಲ. ಆರುತಿಂಗಳೊಳಗಾಗಿ ಖಂಡಿತವಾಗಿ ಅವನು ಸ್ವರ್ಗಸ್ಥನಾಗುವನು. ಇದರಿಂದ ಅವನಿಗೆ ಜ್ಞಾತಿಗಳಲ್ಲಿ ದ್ವೇಷವೂ, ಜಗಳವೂ, ರೋಗಬಾಧೆಯೂ ಉಂಟಾಗುವುದು. ವಿಶೇಷ

ವಿಪ್ರಲಾಪೋ ಮಿತ್ರನಾಶಃ ಇಷ್ಟೇ ಚಾನಿಷ್ಟದರ್ಶನಂ ।
ಭಾರ್ಯಾಪುತ್ರವಿನಾಶಶ್ಚ ಭವೇದೇಷು ವಿನಿಶ್ಚಿತಂ ॥ ೬೧ ॥

ಕ್ರಿಯಾವಂತಂ ಯದಾ ಕುರ್ವನ್ ಕುರ್ವೀತ ಗೃಧ್ರಬಿಲ್ವಕೇ ।
ತದಾ ರಾಜ್ಞಾಂ ವಿಭ್ರಮಶ್ಚ ತಥಾ ಗೃಹವಿನಾಶನಂ ॥ ೬೨ ॥

ಅಮಾತ್ಯವರ್ಗಾಶ್ಚ ಪುರೇ ರಾಜ್ಞಾಂ ರಾಜ್ಯಪರಾಙ್ಮುಖಾಃ ।
ಬೃಹಸ್ಪತಿಂ ಸಮುದ್ದಿಶ್ಯ ಗಾಂ ಚ ದದ್ಯಾತ್ಪಯಸ್ವಿನೀಂ ॥ ೬೩ ॥

ವಾರಿಮುಂಡೇ ಚ ಕೂಪೇ ಚ ವಾಪ್ಯಾಂ ಚ ಮಧುಕಾಂಜಿಕೇ ।
ಕ್ಷೀರಂ ದಧಿ ಘೃತಂ ಚೈವ ಜಾತಂ ಯದಿ ಭವಿಷ್ಯತಿ ॥ ೬೪ ॥

ಅಕಸ್ಮಾತ್ತತ್ರ ವೃಕ್ಷಸ್ಯ ಫಲೇನ ಸಹ ಸಂಯುತಃ ।
ಗೃಹಮಧ್ಯೇ ಪ್ರಜಾಯೇತ ತತಃ ಸಂಪದ್ಯತೇ ಶುಭಂ ॥ ೬೫ ॥

ಬೃಹಸ್ಪತೇಸ್ತು ತುಷ್ಟಸ್ಯ ಸರ್ವಮೇತನ್ನಿದರ್ಶನಂ ।
ಗೌರಂ ಬೃಹಸ್ಪತೇಶ್ಚೈವ ಪ್ರಕುರ್ಯಾತ್ಪ್ರಿಯದಕ್ಷಿಣಾಂ ॥ ೬೬ ॥

---

ದುಃಖವೂ, ಮಿತ್ರನಾಶವೂ ಇಷ್ಟವಾದವರಲ್ಲಿ ಅನಿಷ್ಟದರ್ಶನವೂ ಆಗುವುವು. ಇವುಗಳಿಂದ ಹೆಂಡತಿ ಮತ್ತು ಮಕ್ಕಳ ನಾಶವುಂಟಾಗುವುದು ನಿಶ್ಚಯ.

೬೨-೬೬. ಇದಕ್ಕೆ ಶಾಂತಿಕರ್ಮವನ್ನು ಮಾಡಬೇಕಾದರೆ ಹಳೆಯದಾದ ಬಿಲ್ವಪತ್ರೆಯಮರದ ಬಳಿ ಅದು ನಡೆಯುವಂತೆ ಸಿದ್ಧಮಾಡಬೇಕು ಆ ವಿಷಮಕಾಲದಲ್ಲಿ ರಾಜರಿಗೆ ಭ್ರಾಂತಿಯೂ, ಗೃಹನಾಶವೂ ಉಂಟಾಗುವುದು. ರಾಜ್ಯದಲ್ಲಿರುವ ಮಂತ್ರಿಗಳೆಲ್ಲರೂ ರಾಜನ ರಾಜ್ಯಕಾರ್ಯಕ್ಕೆ ಮನಸ್ಸುಕೊಡದೆ ಇರುವರು ಇದಕ್ಕಾಗಿ ಬೃಹಸ್ಪತಿಯನ್ನು ಉದ್ದೇಶಿಸಿ ಹೆಚ್ಚು ಹಾಲನ್ನು ಕೊಡುವ ಹಸುವನ್ನು ದಾನಮಾಡಬೇಕು. ಕೆರೆ, ಬಾವಿ ಮುಂತಾದ ಜಲಾಶಯಗಳಲ್ಲಿ ಜೇನುತುಪ್ಪ, ಗಂಜಿ, ಹಾಲು, ಮೊಸರು, ಮಪ್ಪ ಇವುಗಳು ಕಂಡುಬಂದರೂ, ಅಕಸ್ಮಾತ್ತಾಗಿ ಅಕಾಲದಲ್ಲಿ ಮರಗಳಲ್ಲಿ ಫಲಗಳು ಕಂಡುಬಂದರೂ, ಶುಭವುಂಟಾಗುವುದೆಂದು ತಿಳಿಯಬೇಕು. ಶಾಂತಿಕರ್ಮ ಸಂತುಷ್ಟನಾದ ಬೃಹಸ್ಪತಿಯಿಂದ ಈ ಫಲವುಂಟಾಗುವುದು. ಅದಕ್ಕಾಗಿ ಯಜಮಾನನು ಬೃಹಸ್ಪತಿಪ್ರೀತ್ಯರ್ಥವಾಗಿ ಬೆಳ್ಳಿಯ ದಕ್ಷಿಣಾದಾನವನ್ನು ಭಕ್ತಿಯಿಂದ ಮಾಡಬೇಕು.

ಅಶುಭಂ ಹಿ ಶುಭೇನೈವ ಶಾಂತಿಹೋಮಂ ಚ ಕಾರಯೇತ್ ।
ತತ್ರೈವ ರಾಕ್ಷಸಂ ಯತ್ರ ಘಟಿಕಂ ಪರಿಶೋಷಣಂ ॥ ೬೭ ॥

ಕೇಸರೀ ಶರ್ಕರಾ ತೈಲಂ ರಾಜತಂ ತಾಂಡವಂ ಸ್ಥಿತಂ ।
ಮಾಷಭಕ್ತಂ ತಥಾ ಧಾನ್ಯಂ ಸುವರ್ಣಂ ರಜತಾನಿ ಚ ॥ ೬೮ ॥

ತಾಮ್ರಂ ಕಾಂಸ್ಯಂ ತಥಾ ಲೋಹಂ ಸೀಸಕಂ ಪಿತ್ತಲಂ ತಥಾ ।
ಸ್ಥಾಪಿತಾನೀವ ದೃಶ್ಯಂತೇ ಗೃಹೇ ಚೈತಾನಿ ಯಸ್ಯ ವೈ ॥ ೬೯ ॥

ಧನನಾಶೋ ಭವೇತ್ತಸ್ಯ ಸ್ವರ್ಗಭಂಗೋ ಹ್ಯಥಾಪಿ ವಾ ।
ವ್ಯಾಧಿಪೀಡೇ ತಥಾ ಘೋರೇ ರಾಜೋಪದ್ರವಬಂಧನೇ ॥
ಗಜಾಶ್ವ ಪಶುಭೃತ್ಯಾನಾಂ ವಿನಾಶೋ ಜಾಯತೇ ಧ್ರುವಂ ॥ ೭೦ ॥

ಯಸ್ಯೈತಾನಿ ಪ್ರದೃಶ್ಯಂತೇ ಪರ್ವತಃ ಕನಕಾನಿ ಚ ।
ಸಂಪತ್ತಸ್ಯ ಪ್ರಜಾಯೇತ ನಿಶ್ಚಲಾ ಸುಖದಾ ಸದಾ ॥ ೭೧ ॥

ದಂತೋತ್ತರೇಷು ದಂತಾಶ್ಚ ಪಂಕ್ತಿಮಾಕ್ರಮ್ಯ ಸಂಸ್ಥಿತಾಃ ।
ತೇಽಪಿ ದೋಷಕರಾಃ ಸರ್ವೇ ಶಲಾಕಾಕೃತಿನಸ್ತಥಾ ॥
ಉಪದಂತಾಶ್ಚ ಸರ್ವೇ ತೇ ಕ್ವಚಿದ್ದೋಷಕರಾ ನ ಹಿ ॥ ೭೨ ॥

---

೬೭-೭೦. ಅಶುಭನಾಶವಾಗಬೇಕಾದರೆ ಶುಭಕರವಾದ ಶಾಂತಿ ಹೋಮಾದಿ ಕಾರ್ಯಗಳಿಂದಲೇ ಆಗಬೇಕು. ಯಾವನ ಮನೆಯಲ್ಲಿ ಕೇಸರೀ, ಸಕ್ಕರೆ, ಎಣ್ಣೆ, ಬೆಳ್ಳಿಯತಾಂಡವ, ಉದ್ದಿನಅನ್ನ, ಧಾನ್ಯ, ಚಿನ್ನ, ತಾಮ್ರ, ಕಂಚು, ಕಬ್ಬಿಣ, ಸೀಸ, ಹಿತ್ತಾಳೆ ಇವುಗಳ ಪಾತ್ರೆಗಳು ಇಟ್ಟಿರುವಂತೆ ಕಾಣುವುವೋ ಅಲ್ಲಿ ರಾಕ್ಷಸಗ್ರಹವಿರುವುದೆಂದು ತಿಳಿಯಬೇಕು. ಆ ಮನೆಯಾತನಿಗೆ ಧನನಾಶವೂ ಸದ್ಗತಿ (ಸ್ವರ್ಗಗತಿ) ನಾಶವೂ, ರೋಗಬಾಧೆಯೂ, ರಾಜಭೀತಿಯೂ, ಬಂಧನವೂ, ಆನೆ, ಕುದುರೆ, ಹಸು, ಸೇವಕರು ಮುಂತಾದವರ ನಾಶವೂ ನಿಶ್ಚಯವಾಗಿ ಉಂಟಾಗುವುದು.

೭೧-೭೪ ಸುವರ್ಣಪರ್ವತವು ಯಾವನಿಗಾದರೂ ಕಂಡುಬಂದರೆ ಅವನಿಗೆ ನಿಶ್ಚಲವೂ, ಸುಖಕರವೂ ಮತ್ತು ಸ್ಥಿರವೂ ಆದ ಸಂಪತ್ತು ಉಂಟಾಗುವುದೆಂದು ತಿಳಿಯಬೇಕು. ಹಲ್ಲುಗಳಸಾಲುಗಳ ಪಕ್ಕದಲ್ಲಿ ಮತ್ತೊಂದು ಸಾಲುಹಲ್ಲುಗಳು ಸಲಾಕೆಯಂತೆ ಕಂಡುಬಂದರೆ ಅದು ದೋಷಕರವಾದುದು. ಕೆಲವು ಸಂದರ್ಭಗಳಲ್ಲಿ ಮಾತ್ರ

**ಭಾಂಡೇ ಕುಂಭೇ ಯದಾ ಚೈವ ಶ್ರೂಯತೇ ಘನಗರ್ಜಿತಂ ।**
**ಕಂಚುಕಾನಾಂ ಗೃಹೇ ಚೈವ ಪ್ರಾಕಾರಃ ಶ್ರೂಯತೇ ಯದಿ ॥ ೭೩ ॥**

**ಮೂಷಿಕಾನಾಂ ಮುಖೇ ಚೈವ ಜ್ವಲಂತೀ ಯಸ್ಯ ಪಶ್ಯತಿ ।**
**ಗೇಹೇ ತತ್ರೈವ ನಶ್ಯೇತ ಶುಕ್ರಸ್ಯಾದ್ಭುತದರ್ಶನಂ ॥ ೭೪ ॥**

**ಶಾಂತಿಂ ತತ್ರ ಪ್ರವಕ್ಷ್ಯಾಮಿ ಯಯಾ ಸಂಪದ್ಯತೇ ಶುಭಂ ।**
**ಶಮೀಪತ್ರಂ ನಿರ್ಮಿತಂ ಚ ಯವೈರ್ಯುಕ್ತಂ ಗೃಹಿಣ್ಯಪಿ ॥**
**ದಧಿಮಧುಘೃತಾಕ್ತಂ ಚ ಜುಹುಯಾದ್ಭಾರ್ಗವೇ ದಿನೇ ॥ ೭೫ ॥**

**ಶುಕ್ಲವಾಸೋಯುಗಂ ಚೈವ ಗಾಂ ಚ ಶುಕ್ಲಾಂ ಪಯಸ್ವಿನೀಂ ।**
**ಸುವರ್ಣಂ ಶ್ರದ್ಧಯಾ ಚೈವ ದದ್ಯಾದ್ವಿಪ್ರಾಯ ದಕ್ಷಿಣಾಂ ॥ ೭೬ ॥**

**ದೇವಾಗಾರೇ ಯದಾ ಭೂಮಿರ್ಲೋಹಿತಾ ಯಸ್ಯ ದೃಶ್ಯತೇ ।**
**ಪುಷ್ಪಿತಾ ದೃಶ್ಯತೇ ಲೋಕೇ ತತ್ರ ವಿದ್ಧಿ ಮಹದ್ಭಯಂ ॥ ೭೭ ॥**

---

ಉಪದಂತಗಳು ಕಾಣುವುದು ದೋಷಕರವಾಗುವುದಿಲ್ಲ ಕಂಚುಗಾರನಮನೆಯಲ್ಲಿರುವ ಪಾತ್ರೆಗಳಲ್ಲಿಯೂ, ಬಿಂದಿಗೆಯಲ್ಲಿಯೂ, ಮೇಘಧ್ವನಿಯು ಕೇಳಿದರೂ, ಇಲಿಗಳ ಬಾಯಲ್ಲಿ ಉರಿಬರುವಂತೆ ಕಂಡುಬಂದರೂ, ಆ ಮನೆಯವನು ಅಲ್ಲಿಯೇ ನಾಶವಾಗುವನು ಇದು ಶುಕ್ರನ ದೋಷದಿಂದುಂಟಾದ ಅದ್ಭುತ ಎಂದು ತಿಳಿಯಬೇಕು.

೭೫-೭೬. ಈ ದುರ್ನಿಮಿತ್ತಗಳಿಗೆ ಪರಿಹಾರಕವಾದ ಶಾಂತಿಯನ್ನು ಹೇಳುವೆನು. ದಂಪತಿಗಳು ಶುಕ್ರವಾರದ ದಿನ ಬನ್ನಿಯಪತ್ರೆಯ ಜೊತೆಯಲ್ಲಿ ಯವಧಾನ್ಯವನು ಸೇರಿಸಿ ಮೊಸರು, ಜೇನುತುಪ್ಪ, ತುಪ್ಪ ಇವುಗಳಲ್ಲಿ ನೆನಸಿ; ಶುಕ್ರಪ್ರೀತ್ಯರ್ಥವಾಗಿ ಹೋಮಮಾಡಬೇಕು. ಒಂದುಜೊತೆ ಬಿಳಿಯ ವಸ್ತ್ರವನ್ನೂ, ಹೆಚ್ಚಾಗಿ ಹಾಲುಕರೆಯುವ ಹಸುವನ್ನೂ ಸುವರ್ಣದಕ್ಷಿಣೆಯೊಡನೆ ಬ್ರಾಹ್ಮಣರಿಗೆ ಕೊಡಬೇಕು.

೭೭=೭೮. ದೇವರಮನೆಯಲ್ಲಿ ಭೂಮಿಯು ಕೆಂಪಾಗಿ ಕಂಡರೆ ಭೂಮಿಯೆಂಬ ಸ್ತ್ರೀಯು ಋತುಮತಿಯಾದಂತೆ ಭಾವಿಸಬೇಕು. ಈ ಸಂದರ್ಭದಲ್ಲಿ ಮಹಾಭಯ ಪ್ರಾಪ್ತವಾಗುವುದೆಂದು ತಿಳಿಯಬೇಕು. ಹೀಗಾದಾಗ ರಾಜನಿಗೋ ರಾಜಪುತ್ರನಿಗೋ

**ರಾಜಾ ವಾ ರಾಜಪುತ್ರೋ ವಾ ರಾಜ್ಯಂ ವಾಪಿ ವಿನಶ್ಯತಿ ।**
**ಮಂತ್ರಿಣೋ ಮಂತ್ರಿಪುತ್ರಾಶ್ಚ ಮ್ರಿಯಂತೇ ನಾತ್ರ ಸಂಶಯಃ ॥ ೭೮ ॥**

**ಯತ್ರ ವಾ ದೃಶ್ಯತೇ ಲೋಕೇ ಗೃಹೇ ಯಸ್ಯ ಸುಪೂಜಿತಾಃ ।**
**ಪುಷ್ಪಿತಾಶ್ಚ ಗೃಹಸ್ತಂಭಾಃ ಶರೀರಂ ಚ ಘಟಸ್ತಥಾ ॥ ೭೯ ॥**

**ಹಸ್ತ್ಯಶ್ವಮಹಿಷಾಶ್ಚೈವ ಅಜಾಗಾವಸ್ತಥೈವ ಚ ।**
**ನಿತ್ಯಂ ಸ್ವಾಮಿವಧಾರ್ಥಾಯ ಪುಷ್ಪಿತಾಂ ಪ್ರವಹಂತಿ ಚ ॥ ೮೦ ॥**

**ಗೃಹೇ ಹಂಸೋ ಗೃಹೇ ಸಮ್ಯಙ್ಮಂಡೂಕಾ ಜಲಚಾರಿಣಃ ।**
**ದ್ವಾರೇ ಪ್ರವಿಶ್ಯ ಸರ್ಪಶ್ಚ ಪ್ರತಿಮಾಯಾಃ ಪ್ರಕಲ್ಪನಂ ॥ ೮೧ ॥**

**ಅಕಸ್ಮಾದ್ಘಟಶಬ್ದೋಽಪಿ ಯತ್ರ ಕುತ್ರಾಪಿ ಜಾಯತೇ ।**
**ಸ್ರವಂತಿ ಪ್ರಮದಾ ಯತ್ರ ಭಿನ್ನಾಸ್ತೇಽಸ್ಯುರ್ನವಾಂಗಿಕಾಃ ॥ ೮೨ ॥**

---

ರಾಜ್ಯಕ್ಕೋ ನಾಶಸಂಭವಿಸುವುದೆಂದೂ ಅಥವಾ ಮಂತ್ರಿಗಳೋ, ಮಂತ್ರಿಪುತ್ರರೋ ಸಾಯುವರೆಂದೂ ನಿಸ್ಸಂದೇಹವಾಗಿ ತಿಳಿಯಬೇಕು.

೭೯-೮೨. ಅಥವಾ ಯಾವನ ಮನೆಯಲ್ಲಿ ಮನೆಯಕಂಬಗಳು ಗಡಿಗೆ ಮುಂತಾ ಪಾತ್ರೆಗಳು, ಆನೆ, ಕುದುರೆ, ಎಮ್ಮೆ, ಆಡು, ಹಸು ಇವುಗಳೂ ಪುಷ್ಪವತಿಯರಾದ ಸ್ತ್ರೀಯರಂತೆ ರಜಸ್ಸನ್ನು ಸ್ರವಿಸುತ್ತಿದ್ದರೆ ಆ ಮನೆಯ ಯಜಮಾನನಿಗೆ ಮೃತ್ಯು ಪ್ರಾಪ್ತಿಯಾಗುವುದೆಂದು ತಿಳಿಯಬೇಕು. ಮನೆಯಲ್ಲಿ ಸಾಕಿದ ಹಂಸಪಕ್ಷಿ, ಕಪ್ಪೆ ಇವುಗಳಲ್ಲಿ ಈ ರೀತಿ ರಜಸ್ಸು ಕಂಡುಬಂದರೂ, ಅಥವಾ ಸರ್ಪವು ಬಾಗಿಲಿನಿಂದ ನುಗ್ಗಿ ಬಂದು ಮನೆಯಲ್ಲಿ ಕಾಣಿಸಿಕೊಂಡರೂ, ಪ್ರತಿಮೆಯು ಕಲ್ಪಿತವಾದರೂ, ಅಕಸ್ಮಾತ್ತಾಗಿ ಎಲ್ಲಿಯಾದರೂ ಘಟದ ಶಬ್ದವಾದರೂ, ನವಯೌವನದ ಪ್ರಮದೆಯರು ಭೇದಿಸಲ್ಪಟ್ಟು ಸ್ರಾವಗೊಳ್ಳುವುದಾದರೂ ಇವೆಲ್ಲವೂ ನವಗ್ರಹಸಂಬಂಧವಾದ ದುರ್ನಿಮಿತ್ತಗಳೇ ಎಂದು ತಿಳಿಯಬೇಕು. ಹೀಗಾದಾಗ ಮನೆಯ ಯಜಮಾನನು ಪುತ್ರ, ಪಶು, ಬಂಧು ಇವರ ಸಮೇತನಾಗಿ ನಾಶಹೊಂದುವನು. ಇವು ಈ ದುರ್ನಿಮಿತ್ತಗಳ ಫಲ ಗಳು.

ಗೃಹೀ ತತ್ರ ವಿನಶ್ಯೇತ ಸಪುತ್ರಪಶುಬಾಂಧವಃ ।
ಧನುಃಖಡ್ಗಧರಾ ರಾತ್ರೌ ಮಧ್ಯಾಹ್ನೇ ಚಾಂದ್ರಕೇ ತಥಾ ॥ ೮೩ ॥

ಉದಿತೋ ದೃಶ್ಯತೇ ವ್ಯೋಮ್ನಿ ಜ್ವಲಿತಃ ಪಾವಕಸ್ತಥಾ ।
ನರಾಂಗನಾನಾಂ ಮರಣಂ ತಥಾ ಸ್ಯಾದ್ರಾಷ್ಟ್ರವಿಪ್ಲವಃ ॥ ೮೪ ॥

ರಸಸಿದ್ಧಾನಿ ವಸ್ತೂನಿ ಸುರಾದ್ಯಾಶ್ಚಾಪಿ ವಾ ಪುನಃ ।
ಹಸ್ತಿನೋ ಮದಯುಕ್ತಾಶ್ಚ ಅಶ್ವಾ ಧೀರಿತಹಿಂಸಕಾಃ ॥
ವಿನಶ್ಯಂತಿ ಸದಾ ಚೈತೇ ಶನೇರದ್ಭುತದರ್ಶನೇ ॥ ೮೫ ॥

ನಗರೇ ವಾ ತಥಾ ಗ್ರಾಮೇ ಜಾಯಂತೇ ತಸ್ಯ ವೈರಿಣಃ ।
ದಿವಾ ವಾ ಯದಿ ವಾ ರಾತ್ರೌ ಶನೇರದ್ಭುತದರ್ಶನಂ ॥ ೮೬ ॥

ಮೃಗವ್ಯಾಘ್ರಾದಿರಕ್ಷಾಂಸಿ ತಥಾ ಗೋಮಹಿಷಾ ಅಪಿ ।
ಉತ್ಪತಂತಿ ಯದಾ ಚೈತೇ ಶನೇರದ್ಭುತಮಾದಿಶೇತ್ ॥ ೮೭ ॥

---

೮೩-೮೪. ಮಧ್ಯಾಹ್ನದಲ್ಲಿಯೂ, ರಾತ್ರಿಬೆಳದಿಂಗಳಿನಲ್ಲಿಯೂ ಆಕಾಶದಲ್ಲಿ ಉರಿಯುತ್ತಿರುವ ಅಗ್ನಿದೇವನು ಧನುಸ್ಸನ್ನೂ ಕತ್ತಿಯನ್ನೂ ಹಿಡಿದುಕೊಂಡು ಉದಯಿಸಿದಂತೆ ಕಾಣಿಸಿದರೆ ಆ ಸಂದರ್ಭದಲ್ಲಿ ಮಾನವ ಸ್ತ್ರೀಪುರುಷರಿಗೆ ಮರಣವೂ, ದೇಶದಲ್ಲಿ ಉಪದ್ರವವೂ ಉಂಟಾಗುವುವು.

೮೫-೮೭. ಅಷ್ಟೇಅಲ್ಲದೆ ರಸಸಿದ್ಧವಾದ ವಸ್ತುಗಳೂ, ಮದ್ಯಗಳೂ, ಮದದಿಂದ ಕೂಡಿದ ಆನೆಗಳೂ, ಬಲಶಾಲಿಗಳಾದ ಕುದುರೆಗಳೂ ನಾಶವಾಗುವುವು. ಹೀಗಾಗುವುದು ಶನಿಯಿಂದುಂಟಾಗುವ ದುರ್ನಿಮಿತ್ತಗಳು. ಶನಿಯು ದೋಷದಿಂದುಂಟಾದ ಈ ಉಪದ್ರವಗಳು. ಹಗಲಿನಲ್ಲಾಗಲಿ, ರಾತ್ರಿಯಲ್ಲಾಗಲಿ, ನಗರಗಳಲ್ಲಾಗಲಿ, ಗ್ರಾಮಗಳಲ್ಲಾಗಲಿ ಎಲ್ಲಿಕಂಡರೂ ಆ ದೋಷಪೀಡಿತನಾದವನಿಗೆ ಶತ್ರುಗಳುಂಟಾಗುವರು. ಹುಲಿ ಮುಂತಾದ ಮೃಗಗಳೂ, ರಾಕ್ಷಸರೂ, ಹಸು, ಎಮ್ಮೆ ಮುಂತಾದ ಪ್ರಾಣಿಗಳೂ, ಯಾವಾಗಲಾದರೂ ಮನುಷ್ಯನ ಮೇಲೆ ಬಿದ್ದು ತೊಂದರೆಪಡಿಸುವುದೂ ಶನಿಯ ದೋಷವೆಂದೇ ಹೇಳಬೇಕು.

ನಿಧಿಮಂತ್ರಂ ಪ್ರವಕ್ಷ್ಯಾಮಿ ಯೇನ ಸಂಪದ್ಯತೇ ಶುಭಂ ।
ಜುಹುಯಾದಯುತಂ ಸಮ್ಯಕ್ಸಸ್ಯಾಂಶ್ಚ ಸಮಿಧಂ ದ್ವಿಜಾಃ ॥ ೮೮ ॥

ಶನ್ನೋದೇವೀತಿ ಮಂತ್ರೇಣ ಶುಭಾರ್ಥಂ ಶನಿವಾಸರೇ ।
ಚರುಂ ಚ ಶ್ರಪಯೇತ್ತತ್ರ ಸಮುದ್ದಿಶ್ಯ ಶನೈಶ್ಚರಂ ॥ ೮೯ ॥

ಗಾಂ ಚ ನೀಲಾಂ ತತೋ ದದ್ಯಾಜ್ಜೀವದ್ವತ್ಸಾಂ ಪಯಸ್ವಿನೀಂ ।
ವಾಸೋಯುಗಂ ಚ ವಿಪ್ರಾಯ ಸುವರ್ಣಂ ರಜತಂ ತಥಾ ॥ ೯೦ ॥

ದತ್ವಾ ತು ಶ್ರದ್ಧಯಾ ಸಮ್ಯಗ್ದಕ್ಷಿಣಾಂ ಶಿರಸಿ ಸ್ಥಿತಾಂ ।
ವಿಧಿಂ ಹೋಮಾವಸಾನೇ ತು ತತಃ ಸಂಪದ್ಯತೇ ಶುಭಂ ॥ ೯೧ ॥

ಯದಾ ದ್ವಾರೇ ಗೋಧಿಕಾ ಚ ಶಂಖಿನೀ ಪ್ರವಿಶೇದ್ಗೃಹಂ ।
ತದಾಽಶುಭಂ ವಿಜಾನೀಯಾದ್ರಾಜಪೀಡಾ ಧನಕ್ಷಯಃ ॥
ಅಯುತಂ ಜುಹುಯಾತ್ಸಮ್ಯಕ್ತತಃ ಸಂಪದ್ಯತೇ ಶುಭಂ ॥ ೯೨ ॥

---

೮೮–೯೦. ಈ ದೋಷಪರಿಹಾರಕ್ಕಾಗಿ ನಿಧಿಸ್ವರೂಪವಾದ ಮಂತ್ರವನ್ನು ಹೇಳುವೆನು. ಈ ಸಂದರ್ಭದಲ್ಲಿ ಶುಭವುಂಟಾಗುವುದಕ್ಕಾಗಿ ಶನಿವಾರದದಿನ 'ಶಂನೋದೇವೀ' ಎಂಬ ಮಂತ್ರಪೂರ್ವಕ ಸಸ್ಯಗಳು ಸಮಿತ್ತು ಇವುಗಳಿಂದ ಹತ್ತು ಸಾವಿರ ಹೋಮಗಳನ್ನು ಮಾಡಬೇಕು. ಹೀಗೆ ಮಾಡಿದರೆ ಶುಭವುಂಟಾಗುವುದು. ಈ ಕರ್ಮಾಂಗವಾಗಿ ಶನಿಗೋಸ್ಕರವಾಗಿ ಚರುವನ್ನು ಪಚನಮಾಡಿ ಅದರ ಜೊತೆಯಲ್ಲೇ ಹೋಮಮಾಡಬೇಕು. ಹೆಚ್ಚುಹಾಲನ್ನು ಕೊಡುವಂಥದೂ, ಕರುವಿನೊಡನೆ ಕೂಡಿದುದೂ ಆದ ಕರಿಯಹಸುವನ್ನು ದಾನಮಾಡುವನಾಗಿ ಬ್ರಾಹ್ಮಣನಿಗೆ ಚಿನ್ನ ಬೆಳ್ಳಿ ದಕ್ಷಿಣೆಯೊಡನೆ ಎರಡು ವಸ್ತ್ರಗಳಸಮೇತ ಕೊಡಬೇಕು.

೯೧. ಹೋಮವಾದಮೇಲೆ ವಿಧಿಗನುಸಾರವಾಗಿ ಭಕ್ತಿಪೂರ್ವಕ ದಕ್ಷಿಣಾದಿಗಳಿಂದ ಬ್ರಾಹ್ಮಣರನ್ನು ಚೆನ್ನಾಗಿ ತೃಪ್ತಿಪಡಿಸಿದರೆ ಶುಭವುಂಟಾಗುವುದು.

೯೨. ಮನೆಯ ಬಾಗಿಲಿನಲ್ಲಿ ಉಡುವೆಂಬ ಪ್ರಾಣಿ ಸಂಚರಿಸುವುದು ಕಂಡುಬಂದರೆ ಶಂಖಿನಿಯೆಂಬ ಗ್ರಹವು ಮನೆಯನ್ನು ಪ್ರವೇಶಿಸುವುದೆಂದು ತಿಳಿಯಬೇಕು. ಇದರ ದೆಸೆಯಿಂದ ಮನೆಯ ಯಜಮಾನನಿಗೆ ರಾಜನಬಾಧೆ, ಧನಕ್ಷಯ ಮುಂತಾದ ಅಶುಭಗಳು ಉಂಟಾಗುವುದು. ಇದಕ್ಕಾಗಿ ಹಿಂದೆ ಹೇಳಿದ 'ಶಂನೋದೇವೀ' ಎಂಬ

**ವಿನಾ ಗರ್ಜಿತಮೇಘೇನ ಶಿಲಾವೃಷ್ಟಿಃ ಪ್ರಜಾಯತೇ ।**
**ರಕ್ತಮಿಶ್ರಾ ಹಿ ಪಾಂಡುಶ್ಚ ಪತಂತೀ ಯತ್ರ ದೃಶ್ಯತೇ ॥ ೯೩ ॥**

**ತತ್ರ ಸಂದೃಶ್ಯತೇ ಚಾಭ್ರಂ ವೃಕ್ಷಾ ವಾತವಿವರ್ಜಿತಾಃ ।**
**ಶಕ್ರಧ್ವಜಸ್ತಥಾ ಚಾಪಂ ಪತನಂ ಸುಮನಸ್ಯ ಚ ॥ ೯೪ ॥**

**ದಿವಾ ಶಿವಾ ಪುರಾ ರೌತಿ ಉಲೂಕೋ ವಾ ನಿಶಾಚರಃ ।**
**ನಿಪತ್ಯ ನಿಶಿ ಕಾಕುತ್ಸ್ಥೇ ಪ್ರದೇಶೇ ರೌತಿ ವಾ ವೃಷಃ ॥ ೯೫ ॥**

**ಅಧರ್ಮಪ್ರಬಲಾ ದೇಶಾ ರಾಜಾ ಧರ್ಮಪರಾಙ್ಮುಖಃ ।**
**ಅನ್ಯೋನ್ಯಂ ಚ ಜಿಘಾಂಸಂತಿ ಗೋಬ್ರಾಹ್ಮಣಮಥಾಪಿ ವಾ ॥ ೯೬ ॥**

**ಗೃಹೇ ಗೃಹೀ ವಿನಶ್ಯೇಚ್ಚ ಸಪುತ್ರಪಶುಬಾಂಧವಃ ।**
**ಉತ್ಥಾನಂ ದ್ವಾರದೇಶೇಽಸ್ಯ ಮರಣಂ ರಾಷ್ಟ್ರವಿಭ್ರಮಃ ॥ ೯೭ ॥**

---

ಮಂತ್ರದಿಂದ ಹತ್ತುಸಾವಿರ ಹೋಮವನ್ನು ಮಾಡಿದರೆ ನಿಜವಾಗಿಯೂ ಶುಭವುಂಟಾಗುವುದು.

೯೩-೯೬. ಮೇಘಗಳ ಶಬ್ದವಿಲ್ಲದೆ ರಕ್ತಮಿಶ್ರವೃಷ್ಟಿಯೋ ಅಥವಾ ಬೆಳ್ಳಗಿರುವ ಕಲ್ಲಿನಮಳೆಯೋ ಉಂಟಾದರೂ, ಗಾಳಿಯಿಲ್ಲದೆ ಮರಗಳು ಬೀಳುತ್ತಿರುವುದನ್ನು ಕಂಡರೂ, ಮೋಡವು ಕಂಡ ಕಂಡೆಯಲ್ಲಿ ಕಾಮನಬಿಲ್ಲು ಕಂಡರೂ, ಹೂಗಳು ಬೀಳುವುದನ್ನು ನೋಡಿದರೂ, ರಾತ್ರಿಯಲ್ಲಿ ಸಂಚರಿಸುವ ನರಿ ಗೂಬೆ ಇವು ಹಗಲಿನಲ್ಲಿ ಮನುಷ್ಯರೆದುರಿಗೆ ಬಂದು ಕೂಗಿದರೂ, ರಾತ್ರಿಯಹೊತ್ತಿನಲ್ಲಿ ಎತ್ತು, ಮನುಷ್ಯನ ಹೆಗಲಿನಹತ್ತಿರ ಕೂಗಿದರೂ, ಆಗ ದೇಶವು ಅಧರ್ಮಿಷ್ಠರಿಂದ ತುಂಬಿದೆಯೆಂದೂ, ರಾಜನು ಧರ್ಮವನ್ನು ಅಲಕ್ಷಿಸಿರುವನೆಂದೂ, ಜನರು ಗೋಬ್ರಾಹ್ಮಣರನ್ನೂ, ಪರಸ್ಪರವಾಗಿ ಒಬ್ಬರು ಮತ್ತೊಬ್ಬರನ್ನೂ ಬಾಧೆಪಡಿಸುತ್ತಿರುವರೆಂದೂ ತಿಳಿಯಬೇಕು.

೯೭-೯೮. ಇಂತಹ ದುರ್ನಿಮಿತ್ತಗಳು ಕಾಣಬಂದಕಾಲದಲ್ಲಿ ಮನೆಯ ಯಜಮಾನನೂ, ಅವನ ಬಂಧುಗಳೂ ಪಶುಗಳೊಡನೆ ನಾಶವಾಗುವನು. ಆ ಮರಣವು ಅವನ ಮನೆಯ ಬಾಗಿಲಿನಲ್ಲಿಯೇ ಆಗುವುದು. ದೇಶದ ಜನರು ಭ್ರಾಂತರಾಗುವರು.

ರಾಜ್ಯನಾಶೋ ಭವೇದ್ರಾಜ್ಞೋ ಮರಣಂ ವಾಹನಸ್ಯ ಚ ।
ವಿಪರೀತಾನಿ ದೇಶಾನಿ ಕ್ರಮತಃ ಸಂಭವಂತಿ ಹಿ ॥ ೯೮ ॥

ರಾಹುಣಾ ಗ್ರಸ್ತಸೂರ್ಯೋಽಪಿ ನಿಶಿ ಚಾಥ ಯದಾ ದಿವಾ ।
ತಾರಕಾಗಣವಚ್ಛೈವ ರಾಜ್ಞಾಂ ನಿಧನಕಾರಕಃ ॥ ೯೯ ॥

ಸಹಾಮಾತ್ಯಾ ವಿನಶ್ಯಂತಿ ಸ್ವರ್ಗೇ ಯೇ ಚ ಸುದುರ್ಜಯಾಃ ।
ಪರಚಕ್ರೇಣ ಪಾತ್ಯಂತೇ ರಾಜಾನೋ ನಾತ್ರ ಸಂಶಯಃ ॥ ೧೦೦ ॥

ಛಾಯಾಧ್ವಜಸ್ಯ ಗಗನೇ ದೃಶ್ಯತೇ ಚೇತ್ಕದಾಚನ ।
ದರ್ಶನಾದೇವ ರಾಜ್ಞಸ್ತು ವಿನಾಶಃ ಸಹರಾಷ್ಟ್ರಕೈಃ ॥ ೧೦೧ ॥

ಜ್ವಲಿತೋ ದೃಶ್ಯತೇ ಯತ್ರ ಪಾವಕಸ್ಯ ಸಕೃಜ್ಜಲೇ ।
ವಜ್ರೇ ಶಿರಸಿ ಗಾತ್ರೇ ವಾ ಜೀವಿತಂ ತಸ್ಯ ದುರ್ಲಭಂ ॥ ೧೦೨ ॥

---

ರಾಜನಿಗೆ ರಾಜ್ಯನಾಶವೂ ಮರಣವೂ ಸಂಭವಿಸುವುದು. ಅವನ ವಾಹನಗಳೂ ನಾಶವಾಗುವುವು. ಕ್ರಮವಾಗಿ ದೇಶದಲ್ಲಿ ವಿರುದ್ಧ ಧರ್ಮಗಳ ಪ್ರಸಾರವುಂಟಾಗುವುವು.

೯೯-೧೦೧. ಸೂರ್ಯನು ರಾಹುಗ್ರಸ್ತನಾದಾಗ ಎಂದರೆ ಸೂರ್ಯಗ್ರಹಣದದಿನ ರಾತ್ರಿಯಕಾಲದಲ್ಲಿ ನಕ್ಷತ್ರಗಳಗುಂಪು ಕಾಣುವಂತೆ ಹಗಲಿನಲ್ಲೇ ನಕ್ಷತ್ರಗಳು ಕಂಡರೆ ಅದು ರಾಜನಿಗೆ ಹಾನಿಯಾಗಲು ಕಾರಣವಾಗುವುದು. ದೇವತೆಗಳಿಂದ ಜಯಿಸಲ ಸಾಧ್ಯವಾದ ಪರಾಕ್ರಮವುಳ್ಳವನಾಗಿದ್ದಂಥ ರಾಜನಾದರೂ ಆಗ ಮಂತ್ರಿಸಮೇತನಾಗಿ ಶತ್ರುರಾಜರಿಂದ ನಾಶವಾಗುವನು. ಬಹುವರ್ಷಗಳಿಗೆ ಒಮ್ಮೆ ಆಕಾಶದಲ್ಲಿ ಧೂಮಕೇತುವು ಕಂಡುಬಂದರೆ ಅದನ್ನು ನೋಡುವುದರಿಂದಲೇ ರಾಜನು ತನ್ನ ರಾಜ್ಯ ಮತ್ತು ಪರಿವಾರದೊಡನೆ ನಾಶಹೊಂದುವನು.

೧೦೨-೧೦೪. ನೀರಿನಲ್ಲಿ ಬೆಂಕಿಯು ಉರಿಯುವಂತೆ ಕಂಡರೂ, ತಲೆಯ ಮೇಲೆ ಅಥವಾ ಶರೀರದಮೇಲೆ ಸಿಡಿಲುಬಡಿದಂತೆ ಕಂಡರೂ ಆ ಮನುಷ್ಯನು ಬದುಕಲಾರನು. ಬಾಗಿಲಿನ ಸಮೀಪದಲ್ಲಾಗಲೀ, 'ಕಂಬದಲ್ಲಿಯಾಗಲೀ ಬೆಂಕಿಯೋ ಅಥವಾ ಹೊಗೆಯೋ ಕಂಡರೆ ಆ ಮನುಷ್ಯನಿಗೆ ಅಲ್ಲಿಯೇ ಮರಣಸಂಭವಿಸುವುದು

**ದ್ವಾರೋಪಾಂತೇ ತಥಾ ಸ್ತಂಭೇ ಅಗ್ನಿರ್ವಾ ಧೂಮ ಏವ ವಾ ।**
**ಪುರುಷಸ್ಯ ತು ತತ್ರೈವ ಮರಣಂ ಜಾಯತೇ ಧ್ರುವಂ ॥ ೧೦೩ ॥**

**ಗಗನೇऽಶನಿಘಾತಶ್ಚ ಶಕ್ತಿಹಸ್ತೇನ ವಾ ಪುನಃ ।**
**ಅಬ್ದಸ್ಯಾಭ್ಯಂತರೇ ತಸ್ಯ ಮರಣಂ ನಾತ್ರ ಸಂಶಯಃ ॥ ೧೦೪ ॥**

**ಶಿಖಾವಲಯಮಧ್ಯೇ ತು ಸಧೂಮಃ ಪಾವಕೋದ್ಗಮಃ ।**
**ದೃಶ್ಯತೇ ನಗರೇ ಮಧ್ಯೇ ತತ್ರೈವಾದ್ಭುತದರ್ಶನಂ ॥ ೧೦೫ ॥**

**ಶವಸ್ಯ ನೀಯಮಾನಸ್ಯ ಉತ್ಥಾನಂ ವಾ ಪ್ರಮಾದತಃ ।**
**ಸ್ಥಾಪಿತಸ್ಯ ಚ ಲಿಂಗಸ್ಯ ಅನ್ಯತ್ರ ಗಮನಂ ತಥಾ ॥ ೧೦೬ ॥**

**ನಿರ್ಘಾತಶ್ಚಾಪಿ ಭೂಕಂಪೋ ನಿವಾತೋಲ್ಕಾಪ್ರದರ್ಶನಂ ।**
**ಅಕಾಲೇ ಪುಷ್ಪಿತಾ ವೃಕ್ಷಾಃ ಫಲಂ ಚಾಕಾಲಸಂಭವಂ ॥ ೧೦೭ ॥**

**ಅನಿಮಿತ್ತಾನಿ ಸರ್ವಾಣಿ ದೂರಮಾಗತ್ಯ ನಿರ್ಭರಂ ।**
**ಅನಿಮಿತ್ತಸ್ಯ ನಾಶೋ ಯಃ ಸಂಹಿಕೇಯಕೃತಸ್ಯ ಚ ॥ ೧೦೮ ॥**

---

ನಿಶ್ಚಯ. ಅಕಾಲದಲ್ಲಿ ಸಿಡಿಲುಬಡಿದರೂ ಶಕ್ತ್ಯಾಯುಧವನ್ನು ಹಿಡಿದ ಪುರುಷನು ಕಾಣಿಸಿದರೂ ಅವನಿಗೆ ಒಂದು ವರ್ಷದೊಳಗಾಗಿ ಮರಣವುಂಟಾಗುವುದರಲ್ಲಿ ಸಂದೇಹವಿಲ್ಲ.

೧೦೫-೧೦೮. ಜನರ ತಲೆಯ ಕೂದಲುಗಳ ನಡುವೆ ಹೊಗೆಯೊಡನೆ ಕೂಡಿದ ಅಗ್ನಿಯು ಹುಟ್ಟಿದಂತೆ ಕಂಡರೂ, ಪಟ್ಟಣದ ನಡುವೆ ಬೆಂಕಿಯು ಹುಟ್ಟಿದಂತೆ ಕಂಡರೂ ಇದೊಂದು ದುರ್ನಿಮಿತ್ತ ಸೂಚನೆ. ಹೆಣವನ್ನು ಹೊತ್ತುಕೊಂಡು ಹೋಗುವಾಗ ಆ ಹೆಣವು ಪ್ರಮಾದದಿಂದ ಎದ್ದುಕೂಡುವುದು, ಒಂದುಕಡೆಯಲ್ಲಿ ಪ್ರತಿಷ್ಠೆಮಾಡಿದ ಶಿವಲಿಂಗವು ಅಲ್ಲಿಲ್ಲದೆ ಮತ್ತೊಂದು ಕಡೆ ಸ್ಥಾಪಿಸಿದಂತೆ ಕಾಣುವುದು, ಸಿಡಿಲು ಭೂಕಂಪ ಮತ್ತು ಗಾಳಿ ಇವುಗಳಿಲ್ಲದೇ ಕೊಳ್ಳಿಗಳು ಕಾಣಿಸುವುದು, ಅಕಾಲದಲ್ಲಿ ಮರಗಳು ಹೂವುಗಳನ್ನು ಬಿಡುವುದು, ಮತ್ತು ಅಕಾಲದಲ್ಲಿ ಹಣ್ಣುಗಳನ್ನು ಬಿಡುವುದು, ನಿರ್ನಿಮಿತ್ತವಾಗಿ ದೇಶಾಂತರಕ್ಕೆ ಓಡುವುದು, ನಿಷ್ಕಾರಣವಾದ ಮರಣ, ಈ ಪ್ರಕಾರ ಅಪಶಕುನಗಳು, ನಾಶ, ಇವುಗಳೆಲ್ಲಾ ರಾಹುವಿನಿಂದ ಉಂಟಾದುದೆಂದು ತಿಳಿಯಬೇಕು.

ನರಾಣಾಮಾಸನಂ ಚೈವ ಗವಾಂ ವಾ ಮಾನುಷೀಗಿರಾ ।
ಪಕ್ಷಮಾತ್ರಾಂತರೇ ತಸ್ಯ ಪುತ್ರಸ್ಯ ಮರಣಂ ದಿಶೇತ್ ॥ ೧೦೯ ॥

ಅಯುತಂ ಜುಹುಯಾತ್ತತ್ರ ರಾಹುಮುದ್ದಿಶ್ಯ ಯತ್ನತಃ ।
ಶಾಂತಿಮತ್ರ ಪ್ರವಕ್ಷ್ಯಾಮಿ ಯಯಾ ಸಂಪದ್ಯತೇ ಶುಭಂ ॥ ೧೧೦ ॥

ದಧಿಮಧುಘೃತಾಕ್ತಂ ಚ ಕುರ್ಯಾದ್ದೂರ್ವಾಕ್ಷತಂ ತಥಾ ।
ಕಯಾಯು ಇತಿ ಮಂತ್ರೇಣ ಜುಹುಯಾದ್ರವಿವಾಸರೇ ॥ ೧೧೧ ॥

ಚರುಂ ಚ ಶ್ರಪಯೇತ್ತತ್ರ ರಾಹುಮುದ್ದಿಶ್ಯ ಸಂಶ್ರಯಾತ್ ।
ಹೋಮಂ ಕುರ್ಯಾತ್ತತೋ ಗಾಂ ಚ ಕಪಿಲಾಂ ಚ ಪಯಸ್ವಿನೀಂ ॥ ೧೧೨ ॥

ಅತಸೀಂ ತಿಲಶಂಖೌ ವಾ ವಾಸೋಯುಗಮಥಾಪಿ ವಾ ।
ಶ್ರದ್ಧಯಾ ರಾಹುಮುದ್ದಿಶ್ಯ ದದ್ಯಾದ್ವಿಪ್ರಾಯ ದಕ್ಷಿಣಾಂ ॥ ೧೧೩ ॥

ದುರಿತಸ್ಯ ವಿನಾಶಾಯ ತಸ್ಯ ಸಂಪದ್ಯತೇ ಶುಭಂ ।
ದಧಿಮಧುಘೃತಕ್ಷೀರೇಣ ವಾರುಣೇನ ಚ ವಾರುಣೇ ॥ ೧೧೪ ॥

---

೧೦೯-೧೧೦. ಮನುಷ್ಯರು ಸುಮ್ಮನೇ ಕುಳಿತಿರುವುದೂ, ಗೋವುಗಳು ಮನುಷ್ಯರ ಧ್ವನಿಯಿಂದ ಮಾತನಾಡುವುದೂ, ಇವು ಯಾವನ ಮನೆಯಲ್ಲಿ ನಡೆಯುತ್ತವೆಯೋ ಅವನ ಮಗನು ಒಂದು ಪಕ್ಷದೊಳಗಾಗಿ ಸಾಯುವನೆಂದು ಹೇಳಬೇಕು. ಈ ಸಂದರ್ಭದಲ್ಲಿ ರಾಹುವನ್ನುದ್ದೇಶಿಸಿ ಪ್ರಯತ್ನಪೂರ್ವಕವಾಗಿ ಹತ್ತುಸಾವಿರ ಹೋಮವನ್ನು ಮಾಡಬೇಕು. ಈ ಕರ್ಮಮಾಡಬೇಕಾದ ಯಾವುದರಿಂದ ಶುಭವುಂಟಾಗುವುದೋ ಅಂತಹ ಶಾಂತಿಕ್ರಮವನ್ನು ಹೇಳುವೆನು.

೧೧೧-೧೧೪. ಭಾನುವಾರದದಿವಸ ರಾಹುವಿಗೋಸ್ಕರ ಚರುವನ್ನುಪಚನ ಮಾಡಿ ಆ ಚರುವನ್ನು ಮೊಸರು. ಜೇನುತುಪ್ಪ, ತುಪ್ಪ ಇವುಗಳಲ್ಲಿ ನೆನಸಿದ ಗರಿಕೆಯನ್ನೂ, ಮತ್ತು ಅಕ್ಷತೆಯನ್ನೂ 'ಕಯಾನ' ಎಂಬ ಮಂತ್ರಪೂರ್ವಕವಾಗಿ ಹೋಮವನ್ನು ಮಾಡಬೇಕು. ಹೆಚ್ಚುಹಾಲನ್ನು ಕೊಡುವ ಕಪಿಲೆಯ ಹಸುವನ್ನೂ, ಅಗಸೆಯಸೊಪ್ಪು, ಅಥವಾ ಅಗಸೆಕಾಯಿ, ಎಳ್ಳು, ಶಂಖ, ಒಂದುಜೊತೆ ವಸ್ತ್ರ ಇವುಗಳನ್ನೂ ರಾಹುಪ್ರೀತ್ಯರ್ಥವಾಗಿ ಭಕ್ತಿಯಿಂದ ದಕ್ಷಿಣೆಯೊಡನೆ ದಾನಮಾಡಬೇಕು. ಇದರಿಂದ ದುಷ್ಟಾರಿಷ್ಟಗಳು ನಾಶವಾಗಿ ಶುಭವುಂಟಾಗುವುದು.

**ದೃಶ್ಯತೇ-ಚಾದ್ಭುತಂ ತೇಷು ವಿಶಿಷ್ಟೈರ್ದೋಷದರ್ಶಿಭಿಃ ।**
**ಗೃಹೀ ತತ್ರ ವಿನಷ್ಟಶ್ಚ ಭವೇತ್ಸಪಶುಬಾಂಧವಃ　　॥ ೧೧೫ ॥**

**ದೃಶ್ಯಂತೇ ತತ್ರ ಕ್ರೌಂಚಾಶ್ಚ ಜಂಬುಕಾ ಗೃಧ್ರವಾಯಸಾಃ ।**
**ದಾರುಣಂ ಭೀಷಣಂ ಘೋರಂ ನೃತ್ಯಂತಿ ಚ ಹಸಂತಿ ಚ　　॥ ೧೧೬ ॥**

**ಮೈಥುನಾನಿ ಚ ಸರ್ವೇಷಾಂ ಯಸ್ಯ ವಾಸೇ ಭವೇದ್ಯದಿ ।**
**ಮೃತ್ಯುಸ್ತಸ್ಯ ಭವೇದಾಶು ಈಶ್ವರಸ್ಯ ಚ ಶಾಸನಾತ್　　॥ ೧೧೭ ॥**

**ಧೂಮಕೇತುರ್ಯದಾ ವ್ಯೋಮ್ನಿ ಜ್ವಲತ್ಪಾವಕಸನ್ನಿಭಃ ।**
**ಸ್ಥಾನಾತ್ಸ್ಥಾನಾಂತರಂ ಯಾತಿ ಭೂಮೌ ವಾ ಪತತೇ ಭೃಶಂ**
**ಸಬಂಧುರಸ್ಯತೇ ರಾಜಾ ಪರಚಕ್ರೈಃ ಸಪೀಡಿತಃ ।　　॥ ೧೧೮ ॥**

**ದುರ್ಭಿಕ್ಷಂ ಮರಣಂ ಚೈವ ಚಿರಂ ರಾಷ್ಟ್ರೇ ಭವಿಷ್ಯತಿ ।**
**ಗಾವೋ ಮರ್ಕಟಕಾದ್ಯಾ ವೈ ವಿಶಂತೇ ಗೃಹವೇಶ್ಮನಿ　　॥ ೧೧೯ ॥**

---

೧೧೫-೧೧೭. ಮೊಸರು, ಜೇನುತುಪ್ಪ, ತುಪ್ಪ, ಹಾಲು ಇವುಗಳೊಡನೆ ನೀರು ಸೇರುವಿಕೆಯಿಂದ ಮದ್ಯವಾಗಿ ಪರಿಣಮಿಸುವಂತಹ ದೋಷಗಳು ಕಂಡುಬರುವುದುಂಟು. ಈ ಸಂದರ್ಭದಲ್ಲಿ ಗೃಹಸ್ಥನು ತನ್ನ ನೆಂಟರು ಮತ್ತು ಪಶುಗಳೊಡನೆ ನಾಶವಾಗುವನು. ಯಾವ ಮನುಷ್ಯನ ಮನೆಯ ಬಳಿ ಕೊಕ್ಕರೆ, ನರಿ, ಹದ್ದು, ಕಾಗೆ ಇವುಗಳು ಕ್ರೂರವಾದ ರೀತಿಯಿಂದ ಭಯವಾಗುವಂತೆ ವಿಕಾರವಾಗಿ ಕುಣಿಯುತ್ತಲೂ ಕೂಗುತ್ತಲೂ, ಅದ್ಭುತಧ್ವನಿ ಮಾಡುತ್ತಲೂ ಇರುವುವೋ ಮತ್ತು ಯಾವನ ಮನೆಯಲ್ಲಿ ಸಮಸ್ತಪ್ರಾಣಿಗಳ ಮೈಥುನವು ನಡೆಯುತ್ತದೆಯೋ ಆ ಮನೆಯವನಿಗೆ ಬೇಗನೆ ಮೃತ್ಯು ಬರುವುದೆಂದು ಈಶ್ವರನ ನಿಯಮವಿರುವುದು ಎಂದು ತಿಳಿಯಬೇಕು.

೧೧೮-೧೨೨. ಉರಿಯುತ್ತಿರುವ ಬೆಂಕಿಯಂತೆ ಕಾಣುವ ಧೂಮಕೇತುವು ಆಕಾಶದಲ್ಲಿ ಒಂದು ಸ್ಥಳದಿಂದ ಮತ್ತೊಂದುಸ್ಥಳಕ್ಕೆ ಚಲಿಸಿಹೋದರೂ, ಅಥವಾ ಅದು ಭೂಮಿಯಮೇಲೆ ಬಿದ್ದರೂ, ಆಗ ರಾಜನು ತನ್ನ ಬಂಧುಗಳೊಡನೆ ಪರರಾಜರ ಬಾಧೆಗೆ ಒಳಗಾಗುವನು. ಆ ದೇಶದಲ್ಲಿ ಬಹಳಕಾಲ ಕ್ಷಾಮವೂ, ಪ್ರಜಾಕ್ಷೋಭೆಯೂ ಉಂಟಾಗುವುವು. ದನ, ಕಪಿ ಮೊದಲಾದುವು ಮನೆಯೊಳಗೆ ಗುಂಪಾಗಿ ಪ್ರವೇಶಿಸಿದಂತೆ ಕಂಡು ವಸ್ತುತಃ ಇಲ್ಲದೆ ಮಾಯವೆಂದು ಕಂಡುಬಂದರೆ ಅದು ದೋಷಕರ.

ಗಾವಶ್ಚ ತಸ್ಯ ನಶ್ಯಂತಿ ದಾರಾಪತ್ಯಧನಾನಿ ಚ ।
ಅನ್ಯಸ್ಯ ದೋಷೋ ಭವತಿ ಗೃಹೇ ಯಾಂತಿ ಪ್ರಮಾದತಃ ॥ ೧೨೦ ॥

ಅಬ್ದಾಂತರೇ ಭವೇನ್ಮೃತ್ಯುರ್ವಿರಜಾ ಹಿ ಭವಿಷ್ಯತಿ ।
ಶಾಂತಿಮತ್ರ ಪ್ರವಕ್ಷ್ಯಾಮಿ ಯಯಾ ಸಂಪದ್ಯತೇ ಶುಭಂ ॥ ೧೨೧ ॥

ಸಪ್ತಾಶ್ವರಥಸಂಯುಕ್ತಂ ಹೇಮಚ್ಛತ್ರವಿಭೂಷಿತಂ ।
ವಿಪ್ರಾಯ ಮಂಡಪಂ ದದ್ಯಾದ್ಬಿಲ್ವಪತ್ರಮಥಾಪಿ ವಾ ॥ ೧೨೨ ॥

ಐಂದ್ರೇಣೈವ ತು ಮಂತ್ರೇಣ ಹೋಮಃ ಕಾರ್ಯೋ ದ್ವಿಜಾತಿಭಿಃ ।
ಅಕಸ್ಮಾಚ್ಛಾಲತಾಲಾಕ್ಷಖದಿರೋತ್ಪಲಕೇಸರಾಃ ॥ ೧೨೩ ॥

ಗೃಹಮಧ್ಯೇ ಪ್ರಜಾಯೇತ ಕೇತೋರದ್ಭುತದರ್ಶನಂ ।
ಹಂಸೋ ವಾ ದ್ರೋಣಕಾಕೋ ವಾ ಮಯೂರೋ ವಾ ಗೃಹೋಪರಿ ॥ ೧೨೪ ॥

---

ಇದರಿಂದ ಅವನ ಹೆಂಡತಿ ಮಕ್ಕಳು, ದ್ರವ್ಯ, ದನಕರುಗಳು ಎಲ್ಲವೂ ನಾಶವಾಗುವುವು. ಇನ್ನೊಬ್ಬನು ಮಾಡಿದ ಪ್ರಮಾದದಿಂದ ತನ್ನ ಮನೆಗೆ ನುಗ್ಗಿದಂತೆ ಕಂಡರೆ ಆಗ ಅದು ವಿರಜವೆಂಬ ದೋಷ. ಹೀಗಾದವನಿಗೆ ಒಂದು ವರ್ಷದೊಳಗಾಗಿ ವಿರಜಾ ಮೃತ್ಯುವು ಸಂಭವಿಸುವುದು ಇಂಥ ಸಂದರ್ಭದಲ್ಲಿ ಅರಿಷ್ಟಪರಿಹಾರವಾಗಿ ಶುಭವುಂಟಾಗುವುದಕ್ಕಾಗಿ ಶಾಂತಿಕ್ರಮವನ್ನು ಹೇಳುವೆನು. ರಾಜರುಅಥವಾ ಶ್ರೀಮಂತರು ಚಿನ್ನದ ಛತ್ರಿಯಿಂದ ಅಲಂಕೃತವಾಗಿ ಏಳುಕುದುರೆಗಳಿಂದ ಕೂಡಿದ ಸೂರ್ಯನ ರಥದ ಸ್ವರ್ಣ ಮಂಟಪವನ್ನು ಬ್ರಾಹ್ಮಣರಿಗೆ ದಾನಮಾಡಬೇಕು. ಬ್ರಾಹ್ಮಣರು ಬಿಲ್ವಪತ್ರೆಯನ್ನು ದಾನಮಾಡಬೇಕು. ಇಲ್ಲವೇ ಇಂದ್ರದೇವತಾಕವಾದ ಮಂತ್ರದಿಂದ ಹೋಮವನ್ನು ಮಾಡಬೇಕು

೧೨೩-೧೨೫. ಅಕಸ್ಮಾತ್ತಾಗಿ ಮನೆಯ ನಡುವೆ ಸಾಲ, ತಾಳೆ, ತಾರೆ,ಕಗ್ಗಲಿ, ನೈದಿಲೆ, ಕೇಸರ ಎಂಬ ಮರಗಳು ಹುಟ್ಟಿಕೊಂಡರೆ ಅದು ಕೇತುವಿನ ದುರ್ನಿಮಿತ್ತಗಳೆಂದು ಭಾವಿಸಬೇಕು. ಮನೆಯಮೇಲೆ ಹಂಸಪಕ್ಷಿ, ದೊಣ್ಣೇಕಾಗೆ, ನವಿಲು ಇವುಗಳು ಕುಳಿತುಕೊಂಡರೆ ಅದೂ ಕೇತುವಿನ ದುರ್ನಿಮಿತ್ತಗಳು. ಇದಕ್ಕೆ ಯಾವಪ್ರಕಾರ

**ಗೃಹೇ ತಸ್ಯ ಮಹೋತ್ಪಾತಃ ಕೇತೋರದ್ಭುದರ್ಶನಂ ।**
**ಶಾಂತಿಮತ್ರ ಪ್ರವಕ್ಷ್ಯಾಮಿ ಯಯಾ ಸಂಪದ್ಯತೇ ಶುಭಂ । ॥ ೧೨೫ ॥**

**ದಧಿಮಧುಘೃತಾಕ್ತಂ ಚ ಜುಹುಯಾದಯುತಂ ಕುಶಂ ।**
**ತ್ರ್ಯಂಬಕಂ ಚೇತಿ ಮಂತ್ರೇಣ ಕೇತವೇಭಿವಪೇಚ್ಚರುಂ ॥ ೧೨೬ ॥**

**ನೀಲಾಂ ಧೇನುಂ ಸವತ್ಸಾಂ ಚ ಬಹುಕ್ಷೀರಪ್ರದಾಂ ತಥಾ ।**
**ಮೃತ್ತಿಕಾಂ ಹೇಮವಾಸಶ್ಚ ನಾನಾಲಂಕಾರಮೇವ ಚ ॥ ೧೨೭ ॥**

**ದಕ್ಷಿಣಾಂ ಚ ಪ್ರವಕ್ಷ್ಯಾಮಿ ಯಸ್ಯ ನಾಸ್ತಿಪ್ರತಿಕ್ರಿಯಾ ।**
**ದೇವಮುದ್ದಿಶ್ಯ ದಾನೇನ ಹೋಮೇನ ಚರುಣಾ ತಥಾ ॥ ೧೨೮ ॥**

**ದಕ್ಷಿಣಸ್ಯಾಂ ದಿಶಿ ಚ್ಛಾಯಾಂ ಯಃ ಪಶ್ಯೇದಾತ್ಮನಃ ಸ್ವಯಂ ।**
**ಸ್ವಚ್ಛಾಯಾಂ ಪಾದುಕಸ್ಯೈವ ಪಶ್ಯೇತ್ಪಂಚಶಿರೋದ್ವಯಂ ॥ ೧೨೯ ॥**

---

ಶಾಂತಿಯನ್ನು ಮಾಡಿದರೆ ಶುಭವುಂಟಾಗುವುದೋ ಆ ಶಾಂತಿಯಕ್ರಮವನ್ನು ಹೇಳು ವೆನು.

೧೨೬-೧೨೮. ಕೇತುವಿಗೋಸ್ಕರವಾಗಿ ಚರುವನ್ನು ಮಾಡಿ ಆ ಚರುವಿನೊಡನೆ ಮೊಸರು, ಜೇನುತುಪ್ಪ, ಇವುಗಳಲ್ಲಿ ನೆನಸಿದ ದರ್ಭೆಯೊಡನೆ 'ತ್ರಿಯಂಬಕ' ಎಂಬ ಮಂತ್ರಪೂರ್ವಕ ಹತ್ತುಸಾವಿರ ಚರುಹೋಮವನ್ನು ಮಾಡಬೇಕು. ನೀಲಿಯಬಣ್ಣ ವುಳ್ಳದೂ, ಹೆಚ್ಚು ಹಾಲನ್ನು ಕೊಡುವುದೂ, ಎಳಗರು ಸಮೇತವಾದುದೂ ಆದ ಹಸು ವನ್ನೂ, ಮೃತ್ತಿಕೆಯನ್ನೂ, ಸುವರ್ಣಮಯವಾದ ವಸ್ತ್ರವನ್ನೂ, ಒಗೊಗೆಯ ಆಭರ ಣಗಳನ್ನೂ ದಾನಮಾಡಬೇಕು. ದೇವತೆಗಳನ್ನುದ್ದೇಶಿಸಿ ದಾನಮಾಡುವುದು, ಚರು ಹೋಮ ಇವುಗಳನ್ನು ಆಚರಿಸುವಾಗ ಯಥೋಕ್ತ ಫಲಪ್ರಾಪ್ತಿಯಾಗಬೇಕಾದರೆ ಅದಕ್ಕೆ ಸರಿಯಾದ ದಕ್ಷಿಣಾದ್ರವ್ಯವನ್ನು ಕೊಡಬೇಕು. ಇದು ಹೊರತು ಇದಕ್ಕೆ ಇನ್ನು ಯಾವ ಪ್ರತಿಕ್ರಿಯೆಯೂ ಇಲ್ಲ.

೧೨೯-೧೩೦. ಯಾವ ಮನುಷ್ಯನಿಗೆ ದಕ್ಷಿಣದಿಕ್ಕಿನಲ್ಲಿ ತನ್ನ ನೆರಳು ಕಾಣಿಸಿಕೊಂಡು ಆ ನೆರಳಿನಲ್ಲಿ ಐದುಕಾಲುಗಳೂ, ಎರಡುತಲೆಗಳೂ ಇರುವಂತೆ ಕಾಣ

ಏವಮೇವ್ಮೈವ ಯಚ್ಛಿನ್ನಂ ಶಿಸಚ್ಚಿ ಚ ತತೋ ಹಿತಂ ।
ಶೀಘ್ರಂ ನಾಶಮವಾಪ್ನೋತಿ ಸಪ್ತಾಹಾನ್ನಾತ್ರ ಸಂಶಯಃ ॥ ೧೩೦ ॥

ಉಚ್ಚಾವಚಾನ್ಪ್ರವಕ್ಷ್ಯಾಮಿ ಯಥಾ ಶಾಸ್ತ್ರೇಣ ಚೋದಿತಂ ।
ಕಾಕಮಾರ್ಜಾರಶೂಕಾನಾಂ ಕಪೋತಾನಾಂ ವಿಶೇಷತಃ ॥
ಮೈಥುನಂ ದೃಶ್ಯತೇ ಯತ್ರ ತಚ್ಚ ರಾಹೋರ್ಮಹಾದ್ಭುತಂ ॥ ೧೩೧ ॥

ಶನಿಮುದ್ದಿಶ್ಯ ಜುಹುಯಾದಯುತಂ ಶನಿವಾಸರೇ ।
ಪೂಜಯೇದರ್ಕಪುಷ್ಪೇಣ ಶತೇನ ಜುಹುಯಾಚ್ಚರುಂ ॥ ೧೩೨ ॥

ಕೃತ್ವಾ ತತ್ರೈವ ಪಶ್ಯೇತ ಶನೇರದ್ಭುತದರ್ಶನಂ ।
ಅಷ್ಟಾವಿಂಶಂ ಚರುಂ ಕೃತ್ವಾ ತತಃ ಶಾಂತಿರ್ಭವೇದ್ಧ್ರುವಂ ॥ ೧೩೩ ॥

ಭುಜಪದೋಸ್ತಥಾ ಚಕ್ಷುಃ ಸ್ಪಂದನೇ ಮರಣಂ ದಿಶೇತ್ ।
ತತ್ತು ಸೋಮಾದ್ಭುತಂ ವಿದ್ಯಾದ್ವಾಮದಕ್ಷಿಣತಃ ಕ್ರಮಾತ್ ॥ ೧೩೪ ॥

---

ಬಂದರೂ, ಆ ತಲೆಗಳು ಕತ್ತರಿಸಿದಂತೆ ಕಂಡರೂ, ಆ ಮನುಷ್ಯನು ತದಾರಭ್ಯ ಏಳುದಿನ ದೊಳಗೆ ಮರಣಹೊಂದುವನು.

೧೩೧-೧೩೩. ಇಲ್ಲಿಂದ ಮುಂದೆ ಶಾಸ್ತ್ರಗಳಲ್ಲಿ ಹೇಳಿರುವ ಬಗೆಬಗೆಯ ದುರ್ನಿಮಿತ್ತಗಳನ್ನು ಸ್ಥೂಲವಾಗಿ ಹೇಳುವೆನು. ಕಾಗೆ, ಬೆಕ್ಕು, ಚೇಳು, ಪಾರಿವಾಳ ಇವುಗಳ ಮೈಥುನವನ್ನು ನೋಡುವುದು ರಾಹುವಿನ ಮಹಾಅದ್ಭುತವಾದ ದುರ್ನಿಮಿತ್ತವೆನಿಸುವುದು. ಇದಕ್ಕಾಗಿ ಶನಿವಾರದದಿನ ಶನಿಯನ್ನು ದ್ದೇಶಿಸಿ ಎಕ್ಕದಹೂವಿನಿಂದ ಪೂಜೆ ಮಾಡಿ ಅದನ್ನೇ ಹತ್ತುಸಾವಿರ ಹೋಮವನ್ನು ಮಾಡಬೇಕು. ಮತ್ತು ಒಂದು ನೂರು ಚರುಹೋಮವನ್ನು ಮಾಡಬೇಕು. ಇದನ್ನು ಮಾಡಿದಮೇಲೆಯೂ ದುರ್ನಿಮಿತ್ತಗಳು ಕಂಡುಬಂದರೆ ಅದಕ್ಕಾಗಿ ಇನ್ನೂ ಇಪ್ಪತ್ತೆಂಟು ಚರುಹೋಮವನ್ನು ಮಾಡಿದರೆ ಶಾಂತಿಯುಂಟಾಗುವುದು.

೧೩೪-೧೩೬. ಭುಜ. ಕಾಲುಗಳು, ಕಣ್ಣುಗಳು ಇವು ಕ್ರಮವಾಗಿ ಗಂಡಸಿಗೆ ಎಡ ಹೆಂಗಸಿಗೆ ಬಲಭಾಗದ ಈ ಅವಯವಗಳು ಚಲಿಸಿದರೆ, ಮರಣವು ಪ್ರಾಪ್ತವಾಗುವುದೆಂದು ಕೆಲವರು ಹೇಳುವರು. ಇವು ಚಂದ್ರಸಂಬಂಧವಾದ ದುರ್ನಿಮಿತ್ತಗಳು.

**ಕೃಷ್ಣಪಕ್ಷೇ ಭವೇದ್ವಾಮೋ ವಿಪರೀತೋಽದ್ಭುತಂ ದಿಶೇತ್ ।**
**ಅನಿಷ್ಟಸೂಚಕಂ ಯಸ್ಮಾತ್ತಸ್ಮಾಚ್ಛಾಂತಿಂ ಪ್ರಕಲ್ಪಯೇತ್ ॥ ೧೩೫ ॥**

**ಶತಾರ್ಧಂ ರವಿಮುದ್ದಿಶ್ಯ ಶಾಂತ್ಯರ್ಥೇ ಹೋಮಮಾಚರೇತ್ ।**
**ಚರುಪಾಕವಿಧಾನೇನ ಯವೈಸ್ತಿಲಸುಸರ್ಪಿಷಾ ॥ ೧೩೬ ॥**

**ಪುಸ್ತಕೇ ಯಜ್ಞಸೂತ್ರಂ ಚ ಅಸತ್ಪಾತ್ರೇ ಚರೌ ತು ವಾ ।**
**ಶಕ್ರವಸ್ತ್ರಪ್ರದಗ್ಧೇ ಚ ಸೂರ್ಯಸ್ಯಾದ್ಭುತದರ್ಶನಂ ॥ ೧೩೭ ॥**

**ಹಯಮಾರಂ ತ್ರಿಮಧ್ವಕ್ತಂ ಜುಹುಯಾದಿಷ್ಟಸಿದ್ಧಯೇ ।**
**ದೇವಪುಸ್ತಕರತ್ನಾನಿ ಮಣಿಕಾಂಚನಮೇವ ಚ ॥ ೧೩೮ ॥**

**ಲೋಹಿತಸ್ಯಾದ್ಭುತಂ ವಿದ್ಯಾತ್ಸಹಸ್ರಂ ಚ ವಿಶೋಧನಂ ।**
**ದೇವಾಗಾರೇ ತಥಾ ಗೋಧಾ ಶಂಖಿನೀ ಪ್ರವಿಶೇತ್ಕ್ವಚಿತ್ ॥ ೧೩೯ ॥**

---

ಕೃಷ್ಣಪಕ್ಷದಲ್ಲಿ ಎಡಭಾಗವೂ, ಶುಕ್ಲಪಕ್ಷದಲ್ಲಿ ಬಲಭಾಗವೂ ಚಲಿಸಿದರೆ ಅನಿಷ್ಟಸೂಚಕವು. ಎಂದು ಹಲವರು ಹೇಳುತ್ತಾರೆ. ಹೀಗಾದರೆ ಅದಕ್ಕಾಗಿ ಈ ಮುಂದೆ ಸೂಚಿಸುವ ಶಾಂತಿಯನ್ನು ಮಾಡಬೇಕು. ಸೂರ್ಯನನ್ನುದ್ದೇಶಿಸಿ ಚರುವನ್ನು ಸ್ಥಾಲೀಪಾಕ ಮಾಡಿ ಯವೆ, ಎಳ್ಳು ಇವುಗಳೊಡನೆ ತುಪ್ಪವನ್ನು ಸೇರಿಸಿ ಐವತ್ತುಹೋಮಗಳನ್ನು ಮಾಡಬೇಕು.

೧೩೭-೧೩೯. ಪುಸ್ತಕ, ಯಜ್ಞೋಪವೀತ, ಚರು ಇವು ಅಯೋಗ್ಯರ ಕೈಯಲ್ಲಿದ್ದಹಾಗೆ ಕಂಡುಬಂದರೂ, ದೇವೇಂದ್ರನ ವಸ್ತ್ರವು ಸುಟ್ಟುಹೋದಂತೆ ಕಂಡರೂ ಇವು ಸೂರ್ಯಸಂಬಂಧವಾದ ದುರ್ನಿಮಿತ್ತಗಳೆಂದು ತಿಳಿಯಬೇಕು. ಆಗ ಕೆಂಪುಕಣಿಗಲೆಯ ಸಮಿತ್ತನ್ನು ತ್ರಿಮಧುವಿನಲ್ಲಿ ನೆನಸಿ ಹೋಮವನ್ನು ಮಾಡಿದರೆ ಈ ಅರಿಷ್ಟ ಪರಿಹಾರವಾಗಿ ಇಷ್ಟಸಿದ್ಧಿಯಾಗುವುದು. ದೇವತೆಗಳು ಪುಸ್ತಕ, ರತ್ನಗಳು, ಮಣಿಗಳು, ಚಿನ್ನ ಇವುಗಳು ಅಯೋಗ್ಯರ ವಶದಲ್ಲಿದ್ದಂತೆ ಕಂಡರೆ ಅದು ಅಂಗಾರಕನ ದುರ್ನಿಮಿತ್ತವೆಂದು ತಿಳಿಯಬೇಕು. ಆಗಲೂ ಮೇಲೆ ಹೇಳಿದ ರೀತಿಯಲ್ಲೇ ಸಾವಿರ ಹೋಮ ಮಾಡುವುದರಿಂದ ಈ ದೋಷಪರಿಹಾರವಾಗುವುದು.

ದ್ರೋಣಕಾಕೋ ಬಕಶ್ಚೈವ ಉಲೂಕದ್ವಯಮೇವ ಚ ।
ರಕ್ತಕಂಠಃ ಕಪೋತಶ್ಚ ವ್ಯಾಘ್ರ ಏಣಶ್ಚ ವಾ ವಿಶೇತ್ ॥ ೧೪೦ ॥

ಯಸ್ಯ ದೇವಗೃಹಂ ಪಶ್ಯೇತ್ತಸ್ಯ ತಸ್ಯಾಯುತಂ ಹುನೇತ್ ।
ನಚಾತ್ರ ಗೃಹವೈಕೃತ್ಯಂ ಹಸನಂ ಯದಿ ದೃಶ್ಯತೇ ॥
ಸಂಪತ್ತಿಸೂಚಕಂ ಗೇಹೇ ಮರಣಂ ದುಃಖದರ್ಶನಂ ॥ ೧೪೧ ॥

ಕ್ರಂದನೇ ಹತರಾಜ್ಯೇನ ಗಜಾಶ್ವವಾಹನೇ ಕ್ವಚಿತ್ ।
ಸೂರ್ಯಮುದ್ದಿಶ್ಯ ಜುಹುಯಾದಯುತಂ ಸರ್ವಸಿದ್ಧಯೇ ॥ ೧೪೨ ॥

ಪ್ರಮಾದಾತ್ಕಂಪನೇ ಹಾನಿಃ ಸ್ವೇದೇ ಜಾತೇ ವಿಪದ್ಭವೇತ್ ।
ಕ್ಷೀರಸ್ರಾವೇ ಚ ರುಧಿರೇ ತತ್ರ ರಾಜ್ಯೇ ಮಹದ್ಭಯಂ ॥ ೧೪೩ ॥

ಗೋಚ್ಛಾಗೌ ವ್ಯಾಥ ಗೋಮಾಯುರ್ಗೃಹೋಪರಿ ಪ್ರನೃತ್ಯತಿ ।
ಯದಾ ರೌತಿ ದಿವಾ ಫೇರುಸ್ತದಾ ನಾಶೋ ಭವೇದ್ಧ್ರುವಂ ॥ ೧೪೪ ॥

---

೧೪೦. ದೇವರಮನೆಯೊಳಕ್ಕೆ ಅಥವಾ ದೇವಾಲಯಕ್ಕೆ ಶಂಖಿನಿಯೆಂಬ ದುರ್ದೇವತಾ ರೂಪವಾದ ಉಡಪ್ಪೂ, ದೊಣ್ಣೆಕಾಗೆಯೂ, ಬಕಪಕ್ಷಿಯೂ, ಎರಡು ಗೂಬೆಗಳೂ, ಕೆಂಪುಕುತ್ತಿಗೆಯ ಪಾರಿವಾಳವೂ, ಹುಲಿ, ಜಿಂಕೆ ಇವುಗಳೂ ಪ್ರವೇಶ ಮಾಡಿದರೆ ಆಯಾ ದೇವತೆಗಳನ್ನುದ್ದೇಶಿಸಿ ಹತ್ತುಸಾವಿರ ಹೋಮಮಾಡಬೇಕು

೧೪೧–೧೪೨. ಮನೆಯಲ್ಲಿ ಅಶರೀರವಾಗಿ ನಗುವಿನಶಬ್ದವು ಕೇಳಿಸಿದರೆ ಅದು ಸಂಪತ್ತು ಬರುವ ಸೂಚನೆಯಲ್ಲ. ಅದರಿಂದ ಮರಣ, ದುಃಖದಸನ್ನಿವೇಶ ಇವು ಉಂಟಾಗುವುದು. ಹಾಗೆಯೇ ಅಳುವಿನಶಬ್ದವು ಪ್ರಭುವಾದವನಿಗೆ ಕೇಳಿದರೆ ಆನೆ, ಕುದುರೆ ಮತ್ತು ವಾಹನ ರಾಜ್ಯ ಇವುಗಳ ನಾಶವುಂಟಾಗುವುದು ಈ ದೋಷನಿವಾರಣೆಯಾಗಿ ಸಕಲಸಿದ್ಧಿಗಳೂ ಉಂಟಾಗುವುದಕ್ಕಾಗಿ ಸೂರ್ಯನನ್ನುದ್ದೇಶಿಸಿ ಹತ್ತುಸಾವಿರ ಹೋಮವನ್ನು ಮಾಡಬೇಕು.

೧೪೩–೧೪೫. ಪ್ರಮಾದದಿಂದ ಶರೀರದಲ್ಲಿ ನಡುಕವುಂಟಾದರೆ ಹಾನಿ ಪ್ರಾಪ್ತಿ ಬೆವರುಂಟಾದರೆ ವಿಪತ್ತು ಪ್ರಾಪ್ತವಾಗುವುದು. ಶರೀರದಲ್ಲಿ ಹಾಲು ಅಥವಾ ರಕ್ತ ಇವು ಸ್ರವಿಸಿದರೆ ರಾಜ್ಯಕ್ಕೆ ಮಹಾಭಯ ಪ್ರಾಪ್ತವಾಗುವುದು. ಹಸು, ಆಡು, ನರಿ ಇವು ಮನೆಯಮೇಲೆ ಹತ್ತಿ ಕುಣಿಯುತ್ತಿದ್ದರೂ, ಹಗಲು ನರಿ ಕೂಗಿದರೂ ಹಾನಿ

**ಶ್ವಜಂಬುಕಾವಥ ವ್ಯಾಘ್ರೋ ಯಥಾಶಕ್ತಿ ಚ ಧಾವತಿ ।**
**ಈಶಾನೇ ಮಹಿಷಸ್ತದ್ವತ್ತದಾ ದೇಶೇ ಚ ವಿಪ್ಲವಃ ॥ ೧೪೫ ॥**

**ರಾಹೋರದ್ಭುತಮುದ್ದಿಶ್ಯ ಸಹಸ್ರಂ ಜುಹುಯಾಚ್ಚರುಂ ।**
**ವೃಕ್ಷಾದ್ಭುತಂ ಯದಾ ಪಶ್ಯೇತ್ತತ್ರ ತಸ್ಯಾಂ ಪರಿತ್ಯಜೇತ್ ॥**
**ಯದ್ಗೃಹೇಷು ಹುತಂ ಯಾತಿ ದೇಶವಿಪ್ಲವಮಾದಿಶೇತ್ ॥ ೧೪೬ ॥**

**ದೇಶೇ ವಾ ನಗರೇ ಗ್ರಾಮೇ ಆರಣ್ಯಪಶುಬಂಧನಂ ।**
**ಸರ್ಪೇ ವಾ ವಿಪರೀತಂ ಚ ಮಾಂಸಪಿಂಡಮಥಾಪಿ ವಾ ॥ ೧೪೭ ॥**

**ತದ್ಗೃಹೇ ಮರಣಂ ಚೈವ ದೇಶವಿಪ್ಲವಮಾದಿಶೇತ್ ।**
**ದಿವಾದ್ಭುತೇಽಯುತಂ ರಾತ್ರೌ ದ್ವಿಗುಣಂ ಚ ಭವೇದ್ಧ್ರುವಂ ॥**
**ದ್ವಿಗುಣಂ ಚಾಪಿ ಸಂಧ್ಯಾಯಾಮರ್ಧರಾತ್ರೇ ಚತುರ್ಗುಣಂ ॥ ೧೪೮ ॥**

---

ಸಂಭವಿಸುವುದು ನಿಶ್ಚಯ. ನಾಯಿ, ನರಿ, ಹುಲಿ, ಎಮ್ಮೆ ಇವು ತಮ್ಮ ಕೈಲಾದಷ್ಟು ವೇಗವಾಗಿ ಈಶಾನ್ಯದಿಕ್ಕಿಗೆ ಓಡಿಹೋಗುತ್ತಿದ್ದರೆ ಆ ದೇಶದಲ್ಲಿ ವಿಪ್ಲವವುಂಟಾಗುವುದು

೧೪೬. ಈ ದುರ್ನಿಮಿತ್ತಕ್ಕೆ ರಾಹುವು ಕಾರಣವೆಂದು ತಿಳಿದು ರಾಹುಪ್ರೀತಿಗಾಗಿ ಸಹಸ್ರಚರುಹೋಮವನ್ನು ಮಾಡಬೇಕು. ವೃಕ್ಷಸಂಬಂಧವಾದ ಅದ್ಭುತ ದರ್ಶನವಾದರೆ ಆ ಮನೆಯನ್ನೇ ಬಿಡಬೇಕು. ಅದು ದೇಶಕ್ಕೇ ಅನಿಷ್ಟವೆಂದು ಹೇಳಬೇಕು,

೧೪೭. ದೇಶದಲ್ಲಿ, ನಗರದಲ್ಲಿ ಅಥವಾ ಗ್ರಾಮದಲ್ಲಿ, ಅರಣ್ಯಪ್ರಾಣಿಗಳನ್ನು ತಂದು ಬಂಧನದಲ್ಲಿಡುವುದನ್ನೂ, ಸರ್ಪವನ್ನೂ ಮಾಂಸವನ್ನೂ ತಂದಿಡುವುದನ್ನೂ, ಕಂಡರೆ ಆ ಮನೆಯಲ್ಲಿ ಮರಣಸಂಭವಿಸುವುದನ್ನೂ, ದೇಶಕ್ಕೆ ಅನಿಷ್ಟವಾಗುವುದನ್ನೂ ಸೂಚಿಸುವುವು.

೧೪೮. ಹಗಲಿನಲ್ಲಿ ಈ ದುರ್ನಿಮಿತ್ತವನ್ನು ಕಂಡರೆ ಹತ್ತುಸಾವಿರ ಹೋಮವನ್ನು, ಮಾಡಬೇಕು. ಸಂಧ್ಯಾಕಾಲದಲ್ಲಿ ಕಂಡರೆ ಅದರ ಎರಡರಷ್ಟು ಎಂದರೆ ಇಪ್ಪತ್ತುಸಾವಿರ ಹೋಮವನ್ನೂ, ನಡುರಾತ್ರಿಯಲ್ಲಿ ಕಂಡರೆ ಅದರ ನಾಲ್ಕರಷ್ಟು ಎಂದರೆ ನಲವತ್ತುಸಾವಿರ ಹೋಮವನ್ನೂ ಮಾಡಬೇಕು.

ಅಕಾಲೇ ತತ್ರ ಮರಣಮಕಾಲೇ ಗೃಹಿಣೀಮೃತಿಃ ।
ಸೌರಾದ್ಭೂತಂ ವಿಜಾನೀಯಾದಶುಭೇ ವಾ ವಿಶೋಧನಂ ॥ ೧೪೯ ॥

ಏಕೈಕಸ್ಯಾಯುತಂ ಯತ್ರ ಕುರ್ಯಾತ್ತತ್ರೈವ ಹೋಮಯೇತ್ ।
ಸಾಂಗೋಪಾಂಗೇನ ಸಹಿತಮಷ್ಟಾವಷ್ಟೌ ಹುತಂ ಚ ವಾ ॥ ೧೫೦ ॥

ಅಧಿಪ್ರತ್ಯಧಿಸಹಿತಂ ಗೃಹಪಕ್ಷೇಽಪಿ ಸತ್ತಮಾಃ ।
ತನ್ಮಾನೇನ ಹುತಂ ವಿಪ್ರಾ ಕುರ್ಯಾತ್ತತ್ರೈವ ಭೂಷಣಂ ॥ ೧೫೧ ॥

ಏಕೈಕಸ್ಯಾಹುತಂ ವಿಪ್ರಾ ಅಷ್ಟಾವಷ್ಟೌ ಹುತಂ ಚ ವಾ ।
ಅಧಿಪ್ರತ್ಯಧಿದೇವಾನಾಂ ಯಾಶ್ಚಾನ್ಯಾಶ್ಚಾಂಗದೇವತಾಃ ॥ ೧೫೨ ॥

ಮಾನಾಂತಂ ಚ ದದೇತ್ಪೂರ್ಣಾಂ ದತ್ವಾ ಪೂರ್ಣಾಂ ನ ಹೋಮಯೇತ್
ವಕ್ಷ್ಯೇ ಗ್ರಹಮಖೇ ಮಾನಂ ಯೇನ ಮಾನೇನ ಸಿದ್ಧ್ಯತಿ ॥ ೧೫೩ ॥

---

೧೪೯–೧೫೦ ಅಕಾಲದಲ್ಲಿ ಮನೆಯ ಯಜಮಾನನ ಮರಣ, ಇಲ್ಲವೇ ಅವನ ಪತ್ನಿಯ ಮರಣವುಂಟಾದರೆ ಅದು ಸೂರ್ಯಸಂಬಂಧವಾದ ದುರ್ನಿಮಿತ್ತವೆಂದು ತಿಳಿದು ಅದಕ್ಕೆ ಶಾಂತಿಯನ್ನು ಮಾಡಬೇಕು. ಈ ಒಂದೊಂದಕ್ಕೂ ಹತ್ತುಸಾವಿರ ಹೋಮವನ್ನು ಮಾಡಬೇಕು ಆಗ ಅಂಗದೇವತೆ ಉಪಾಂಗದೇವತೆಗಳಿಗೆ ಎಂಟೆಂಟು ಹೋಮವನ್ನಾದರೂ ಮಾಡಬೇಕು.

೧೫೧–೧೫೩ ಎಲೈ ಬ್ರಾಹ್ಮಣರೇ! ಕೇಳಿ; ಅಧಿದೇವತೆ ಪ್ರತ್ಯಧಿದೇವತೆಗಳಿಗೆ ಪ್ರಧಾನದೇವತಾ ಹೋಮಪ್ರಮಾಣಕ್ಕೆ ತಕ್ಕಂತೆ ಹೋಮವನ್ನು ಮಾಡುವುದು ಯಾವಾಗಲೂ ಯುಕ್ತವಾದುದು. ಪ್ರಧಾನದೇವತೆಗೆ ಎಂಟೆಂಟು ಹೋಮವನ್ನು ಮಾಡಿದಾಗ ಅಧಿಪ್ರತ್ಯಧಿದೇವತೆಗಳಿಗೆ ಒಂದೊಂದು ಹೋಮವನ್ನು ಮಾಡಬೇಕು. ಈ ಪ್ರಮಾಣದಂತೆ ಪ್ರಧಾನ ಹೋಮಸಂಖ್ಯೆಗೆ ಅನುಗುಣವಾಗಿ ಅಧಿದೇವತೆ ಪ್ರತ್ಯಧಿದೇವತೆಗಳಿಗೂ, ಅಂಗದೇವತೆಗಳಿಗೂ ಹೋಮವನ್ನು ಮಾಡಬೇಕು. ಈ ಹೋಮವಾದಮೇಲೆ ಪೂರ್ಣಾಹುತಿ ಹೋಮವನ್ನು ಮಾಡಬೇಕು. ಪೂರ್ಣಾಹುತಿಯಾದ ಮೇಲೆ ದೇವತೋದ್ದೇಶವಾದ ಯಾವ ಹೋಮವನ್ನೂ ಮಾಡಕೂಡದು. ಮುಂದೆ ಗ್ರಹಯಜ್ಞದಲ್ಲಿ ಫಲಸಿದ್ಧಿಯಾಗಬೇಕಾದರೆ ಪ್ರಧಾನದೇವತೆ ಅಂಗದೇವತೆಗಳಿಗೆ ಆಹುತಿಸಂಖ್ಯಾ ಪ್ರಮಾಣಗಳನ್ನು ಹೇಳುವೆನು ಕೇಳಿರಿ. ಪ್ರಮಾಣಾನುಸಾರವಾಗಿ ಹೋಮಮಾಡದಿದ್ದರೆ ದೋಷ ಬರುವುದು. ಆ ಕಾರಣದಿಂದ ಯಾವಾಗಲೂ ಪ್ರಮಾಣದಲ್ಲಿ ಕ್ರಮವನ್ನು ಬಿಡಬಾರದು.

ಅಮಾನಕರಣೇ ದೋಷಸ್ತಸ್ಮಾನ್ಮಾನಂ ನ ಹಾಪಯೇತ್ ।
ಪಂಕ್ತಿಚತ್ವಾರಿಂಶದಾಜ್ಯೈಶ್ಚತುರ್ಧಾ ವಿಭಜೇನ್ನರಃ ॥ ೧೫೪ ॥

ಅನಿಷ್ಟ್ವಾಯ ತತೋ ದದ್ಯಾಚ್ಚರುಹೋಮಂ ವಿಭಾಗಶಃ ।
ಅಧಿಪ್ರತ್ಯಧಿ ದೇವಾನಾಮಷ್ಟಾವಷ್ಟೌ ಹ್ಯುದಾಹೃತಂ ॥ ೧೫೫ ॥

ತ್ರ್ಯಂಬಕಾದಿಷು ಮಂತ್ರೇಷು ಹೋಮತ್ರಯಮುದಾಹೃತಂ ।
ಧನಂಜಯೇ ತಥಾ ದದ್ಯಾಚ್ಚರುಹೋಮಂ ವಿಭಾಗತಃ ॥ ೧೫೬ ॥

ಆದಿತ್ಯಾಯಾಷ್ಟಾವಷ್ಟಾವಧಿಕಂ ಕಲ್ಪಯೇತ್ಸುಧೀಃ ।
ಶತಹೋಮೇ ತು ಸರ್ವತ್ರ ದಶಾಂಗಂ ಕಲ್ಪಯೇನ್ನರಃ ॥ ೧೫೭ ॥

ಅನಿಷ್ಟ್ವಾಯ ಯುಗಾಂಗಂ ತು ಗ್ರಹೇಭ್ಯೋ ಹ್ಯಂಗಮೇವ ಚ ।
ಅಧಿಪ್ರತ್ಯಧಿದೇವಾನಾಂ ತಥೈವಾಂಗಂ ಪ್ರಕಲ್ಪಯೇತ್ ॥ ೧೫೮ ॥

ದ್ವೌ ತು ದದ್ಯಾತ್ತ್ರ್ಯಂಬಕಾಯ ತಥಾ ಧನಂಜಯಾಯ ಚ ।
ತತ್ರ ಹೋಮೋ ನಾಯಕಾಯ ಸರ್ವತ್ರೈವ ವಿಚಕ್ಷಣಃ ॥ ೧೫೯ ॥

---

೧೫೪-೧೫೮. ಹತ್ತು, ನಲವತ್ತು ಮುಂತಾದ ಹೋಮಸಂಖ್ಯೆಗಳನ್ನು ಹೇಳಿದ ಕಡೆಗಳಲ್ಲಿ ಪ್ರಧಾನದೇವತೆಗೆ ಮಿಕ್ಕದೇವತೆಗಳಿಗೆ ಎಂಬದಾಗಿ ಚರುವನ್ನು ನಾಲ್ಕುಭಾಗ ಮಾಡಿಕೊಳ್ಳಬೇಕು. ಅಧಿದೇವತೆ ಪ್ರತ್ಯಧಿದೇವತೆಗಳಿಗೆ ಎಂಟೆಂಟು ಹೋಮಗಳನ್ನು ಮಾಡಬೇಕು. 'ತ್ರ್ಯಂಬಕ' ಎಂಬಿವೇ ಮೊದಲಾದುವುಗಳಿಂದ ಹೋಮಮಾಡು ವಾಗ ಅಗ್ನಿಯಲ್ಲಿ ಮಾಡುವ ಚರುಹೋಮವನ್ನು ಪ್ರಧಾನದೇವತೆಗೆ ಅಧಿದೇವತೆ ಪ್ರತ್ಯಧಿದೇವತೆಗಳಿಗೆ ಪ್ರಮಾಣದಂತೆ ವಿಭಾಗ ಮಾಡಿಕೊಂಡು ಮೂರಕ್ಕೊ ಹೋಮಗ ಳನ್ನು ಮಾಡಬೇಕು ಸೂರ್ಯನಿಗಾಗಿ ಮಾಡುವ ಹೋಮಗಳಲ್ಲಿ ಎಂಟೆಂಟುಹೋಮ ಗಳನ್ನು ಹೆಚ್ಚಾಗಿ ಮಾಡಬೇಕು. ನೂರುಹೋಮಗಳನ್ನು ಮಾಡಬೇಕೆಂದು ಹೇಳಿದ ಕಡೆಗಳಲ್ಲೆಲ್ಲಾ ಪ್ರಧಾನದೇವತೆಯನ್ನು ಬಿಟ್ಟು ಗ್ರಹಗಳಿಗೂ ಮಿಕ್ಕ ಅಧಿ ದೇವತೆ ಪ್ರತ್ಯಧಿದೇವತೆಗಳಿಗೂ ಪ್ರಧಾನದೇವತೆಯ ಹತ್ತನೆಯ ಒಂದುಭಾಗದಷ್ಟಾ ದರೂ ಹೋಮಮಾಡಬೇಕು.

೧೫೯-೧೬೨. ಹೋಮಮಾಡುವ ತಿಳಿವಳಿಕೆಯುಳ್ಳ ಮನುಷ್ಯನು ಎಲ್ಲಾ ಸಂದರ್ಭಗಳಲ್ಲಿಯೂ ನಾಯಕನಾದ ತ್ರ್ಯಂಬಕನಿಗೆ ಎರಡುಭಾಗ ಹೋಮ

**ಸಹಸ್ರೇ ಚೈವ ವಿಂಶಾಂಗೇ ಅನಿಷ್ಟಾಯು ದಶಾಂಶಕಂ ।**
**ಪಂಚಾಂಶೇನ ಗ್ರಹಾಣಾಂ ಚ ಪಂಚಾಂಶೇನ ಯುವಾನಪಿ ॥ ೧೬೦ ॥**

**ತತ್ರಾನಿಷ್ಟೇ ಪಂಚಶತಂ ತಸ್ಯಾರ್ಧಂ ಗ್ರಹವಾಗ್ಯತಃ ।**
**ಏಕತ್ರಿಂಶದ್ಭವೇನ್ಮಾನಂ ಅನ್ಯೇಷಾಂ ತು ಚತುರ್ದಶ ॥ ೧೬೧ ॥**

**ಗ್ರಹಾದಿಕಂ ಹೋಮಯುಗಂ ತತ್ರ ಭಾಗೇ ಪ್ರಕಲ್ಪಯೇತ್ ।**
**ಅಧಾತಯೋ ಚ ತಿಥ್ಯಂಗಂ ಪಂಚಾಂಗಂ ಯಸ್ಯ ಚಾದ್ಭುತಂ ॥ ೧೬೨ ॥**

**ಗ್ರಹೇಭ್ಯಶ್ಚೈವ ಪಂಚಾಂಗಂ ತತ್ರ ವಾಂಗಂ ಪರಾನಪಿ ।**
**ಏಕೈಕಾಂಗೇ ಭವೇನ್ಮಾನಂ ಷಟ್‌ಶತಂ ಷಷ್ಟಿರೇವ ಚ ॥ ೧೬೩ ॥**

**ಅಧಿಕಂ ಚ ಭವೇತ್ಷಷ್ಟಿರ್ದಶಮಂ ಭಾಗಶೇಷತಃ ।**
**ತ್ರಿಸಹಸ್ರಮನಿಷ್ಟಾಂಶೇ ತ್ರಿಶತಂ ತ್ರಿಶತಂ ತಥಾ ॥ ೧೬೪ ॥**

---

ವನ್ನೂ ಅಗ್ನಿಗೂ ಅಷ್ಟೇ ಜೋಮವನ್ನೂ ಮಾಡಬೇಕು. ಸಹಸ್ರಹೋಮವನ್ನು ಮಾಡುವಾಗ ಅಂಗದೇವತೆಗೆ ಇಪ್ಪತ್ತುಹೋಮಗಳೂ, ಅಪ್ರಧಾನದೇವತೆಗಳಿಗೆ ಇದರ ಹತ್ತನೆಯಒಂದುಭಾಗ ಹೋಮವೂ ಮಾಡಜೇಕಾಗಿರುವುದು. ಗ್ರಹಗಳಿಗೆ ಪ್ರಧಾನ ದೇವತೆಯ ಐದನೆಯಒಂದುಭಾಗ ಉಕ್ತವಾಗಿದೆ. ಆ ಐದನೆಯಒಂದು ಭಾಗ ದಷ್ಟು ಯವಹೋಮವನ್ನು ಮಾಡಬೇಕು. ಪ್ರಧಾನದೇವತೆಗಳಿಗೆ ಐವತ್ತು ಹೋಮವೂ, ಗ್ರಹಗಳಿಗೆ ಅದರ ಅರ್ಧಭಾಗವೂ, ಇತರ ದೇವತೆಗಳಿಗೆ ಮೂವ ತ್ತೊಂದು ಮತ್ತು ಹದಿನಾಲ್ಕು ಹೋಮಗಳು ಪ್ರಮಾಣವಾಗಿರುವುದು. ಈ ಭಾಗದಲ್ಲಿ ಗ್ರಹಗಳಿಗೆ ಎರಡುಹೋಮವನ್ನು ಹೆಚ್ಚಾಗಿ ಮಾಡಬೇಕು. ಹಿಂದೆ ಹೇಳಿದ ಪ್ರತಿ ಷ್ಠಾದಿಗಳಲ್ಲಿ ಹದಿನೈದು ಅಂಗಹೋಮಗಳೂ, ದುರ್ನಿಮಿತ್ತಾದಿ ಅದ್ಭುತಗಳಲ್ಲಿ ಐದು ಅಂಗಹೋಮಗಳೂ ವಿಹಿತವಾದವುಗಳು.

೧೬೨-೧೬೭. ಗ್ರಹಗಳಿಗೆ ಐದು ಅಂಗಹೋಮವೂ ಇತರ ದೇವತೆಗಳಿಗೆ ಒಂದು ಅಂಗಹೋಮವೂ ಆಗಬೇಕು. ಒಂದೊಂದು ಅಂಗಹೋಮದ ಸಂದರ್ಭದಲ್ಲಿ ಒಟ್ಟು ಪ್ರಮಾಣವು ಆರನೂರ ಅರವತ್ತು ಸಂಖ್ಯೆಯಾಗುವುದು ಅರವತ್ತು ಎಂಬುದು ಆರನೂರರ ಹತ್ತನೆಯ ಒಂದು ಭಾಗವಾದುದರಿಂದ ಅದು ಹೆಚ್ಚಾಗಿರುವುದು. ಗ್ರಹ ಗಳಿಂದುಂಟಾದ ದುರ್ನಿಮಿತ್ತಸೂಚಕವಾದ ಶಾಂತಿಹೋಮಗಳಲ್ಲಿ ಪ್ರಧಾನ ದೇವತೆಗೆ

**ಚತುಃಶತಂ ಗ್ರಹಾಣಾಂ ಚ ತಥಾ ಸಪ್ತಶತಾಧಿಕಂ ।**
**ಉಪಗ್ರಹೇಭ್ಯೋ ದದ್ಯಾಚ್ಚ ಪಂಚಾಶೀತ್ಯಧಿಕಂ ಶತಂ　　॥ ೧೬೫ ॥**

**ತಿಥ್ಯಂಗಭಾಗಃ ಶೇಷೇಣ ಗ್ರಹೇ ಸಪ್ತಶತಾಧಿಕಂ ।**
**ಏಕೈಕಂ ತು ಗ್ರಹಸ್ಯೈವಮಾದಿತ್ಯಾಯ ಯುಗಂ ಭವೇತ್　　॥ ೧೬೬ ॥**

**ಗ್ರಹಾಂಗೇ ಯಃ ಸ್ಥಿತೋ ಭಾಗೋ ಯುಗಲಂ ಭಾಗಶೇಷತಃ ।**
**ತ್ರ್ಯಂಬಕಾಯ ಚ ತದ್ದದ್ಯಾತ್ತಥಾ ಧನಂಜಯಾಯ ಚ　　॥ ೧೬೭ ॥**

**ಶಾಂತಿಕೇ ಪೌಷ್ಟಿಕೇ ಕಾಮ್ಯೇ ಯದೀಚ್ಛೇತ್ಸುಖಮಾತ್ಮನಃ ।**
**ಗ್ರಹಾಣಾಂ ಚಾಯುತಂ ಹೋಮಂ ತ್ರ್ಯಹಸಾಧ್ಯೇನ ಹೋಮಯೇತ್　　॥ ೧೬೮ ॥**

**ತ್ರ್ಯಹಸಾಧ್ಯೇ ವಿಧಾನಂ ಯತ್ಪೂರ್ವೋದೀರಿತಂ ದ್ವಿಜಾಃ ।**
**ಇದಾನೀಂ ಪ್ರಕ್ರಮೇಣೈವ ಯೋ ಭಾಗಃ ಸ ನಿಗದ್ಯತೇ　　॥ ೧೬೯ ॥**

---

ಮೂರುಸಾವಿರ ಹೋಮವನ್ನು ಹೇಳಿದಾಗ ಅಧಿಪ್ರತ್ಯಧಿದೇವತೆಗಳಿಗೆ ಅದರ ಹತ್ತನೆಯ ಒಂದು ಭಾಗವಾದ ಮುನ್ನೂರು ಹೋಮಗಳನ್ನೂ ಗ್ರಹದ ಪ್ರಧಾನ ದೇವತೆಗಳಿಗೆ ನಾಲ್ಕುನೂರು ಹೋಮಗಳೂ ಹೀಗೆ ಒಟ್ಟಿನಲ್ಲಿ ಏಳುನೂರು ಹೋಮ ಗಳು ಹೆಚ್ಚಾದಂತಾಯಿತು. ಗ್ರಹಗಳ ಅಧಿದೇವತೆ ಪ್ರತ್ಯಧಿದೇವತೆಗಳಿಗಾಗಿ ನೂರೆಂಬತ್ತೈದು ಹೋಮಗಳನ್ನು ಮಾಡಬೇಕು. ತಿಥ್ಯಂಗವಾದ ಹೋಮಗಳಲ್ಲಿ ಗ್ರಹಗಳಿಗೆ ಏಳನೂರು ಹೋಮಗಳು ಹೆಚ್ಚಾಗಿರುವುವು. ಈ ಹೋಮಗಳಲ್ಲಿ ಎಲ್ಲಾ ಗ್ರಹಗಳಿಗೆ ಒಂದೊಂದು ಸೂರ್ಯನಿಗೆ ಎರಡರಷ್ಟು ಹೋಮವನ್ನು ಮಾಡಬೇಕು. ಗ್ರಹಾಂಗ ಹೋಮಗಳಲ್ಲಿ ಉಳಿಯುವ ಎರಡು ಭಾಗಗಳನ್ನು ತ್ರಿಯಂಬಕನಿಗೂ ಅಗ್ನಿಗೂ ಹೋಮ ಮಾಡಬೇಕು.

೧೬೮-೧೬೯. ಶಾಂತಿಕ, ಪೌಷ್ಟಿಕ, ಮತ್ತುಕಾಮ್ಯ ಕರ್ಮಗಳಲ್ಲಿ ಮನು ಷ್ಯನು ತನ್ನ ಸುಖವನ್ನು ಬಯಸಿ ಮಾಡುವುದಾದರೆ ಆ ಕರ್ಮವನ್ನು ಮೂರು ದಿನಗಳಲ್ಲಿ ಮಾಡಲು ಏರ್ಪಾಡು ಮಾಡಬೇಕು. ಮೂರುದಿನಗಳಲ್ಲಿ ಹೋಮ ಮಾಡುವಾಗ ನಡೆಯಿಸಬೇಕಾದ ವಿಧಾನವನ್ನು ಹಿಂದೆಯೇ ಹೇಳಿದೆ ಈಗ ಕ್ರಮ ವಾಗಿ ಆಹುತಿಯ ವಿವರವನ್ನು ಹೇಳುವೆನು.

ಪೂರ್ವಸ್ಮಿನ್ದಿವಸೇಽನಿಷ್ಟೇ ಸಹಸ್ರಂ ತ್ರಿಶತೋತ್ತರಂ ।
ಇತರೇಷಾಂ ಗ್ರಹಾಣಾಂ ಚ ಪ್ರತ್ಯೇಕಂ ತು ಶತಂಶತಂ ॥ ೧೭೦ ॥

ಅಧಿಪ್ರತ್ಯಧಿದೇವಾನಾಂ ಪಂಚಾಶದ್ಧೋಮ ಉಚ್ಯತೇ ।
ಪ್ರಥಮೇಽಹ್ನಿ ಪ್ರದದ್ಯಾಚ್ಚ ಮಿಲಿತ್ವಾ ತ್ರಿಸಹಸ್ರಕಂ ॥ ೧೭೧ ॥

ದ್ವಿತೀಯದಿವಸೇಽನಿಷ್ಟೇ ದ್ವಿಸಹಸ್ರಮುದಾಹೃತಂ ।
ಪ್ರತಿಗ್ರಹೇಭ್ಯಸ್ತ್ರಿಶತಂ ದದ್ಯಾದಷ್ಟಶತಾಧಿಕಂ ॥ ೧೭೨ ॥

ಪ್ರತಿಗ್ರಹೇಭ್ಯೋ ದದ್ಯಾಚ್ಚ ಷೋಡಶಭ್ಯೋ ಯಥಾಕ್ರಮಂ ।
ಏಕಾಶೀತಿಂ ದದೌ ಯತ್ನಾದಶೀತಿಂ ಚಾಂತ್ಯಯೋರ್ದ್ವಯೋಃ ॥ ೧೭೩ ॥

ಏವಂ ದ್ವಿತೀಯದಿವಸೇ ಮಿಲಿತ್ವಾ ಷಟ್ಸಹಸ್ರಕಂ ।
ಅನಿಷ್ಟಾಯ ತ್ರಿಶತಂ ತು ತೃತೀಯದಿವಸೇ ಮತಂ ॥ ೧೭೪ ॥

---

೧೭೦-೧೭೫. ಮೊದಲನೆಯ ದಿನ ದುರ್ನಿಮಿತ್ತ ಕಾರಣವಾದ ಮುಖ್ಯಗ್ರಹಕ್ಕೆ ಸಾವಿರದಮುನ್ನೂರು ಆಹುತಿ, ಮಿಕ್ಕ ಗ್ರಹಗಳಿಗೆ ಒಂದೊಂದಕ್ಕೆ ನೂರರಂತೆ ಎಂಟ ನೂರು. ಆ ಪ್ರತಿಯೊಂದು ಗ್ರಹದ ಅಧಿದೇವತೆ ಪ್ರತ್ಯಧಿದೇವತೆಗಳಿಗೆ ಒಂದೊಂದಕ್ಕೆ ಐವತ್ತರಂತೆ ಒಂಭೈನೂರು, ಹೀಗೆ ಮೊದಲನೆಯ ದಿನ ಒಟ್ಟು ಮೂರುಸಾವಿರ ಆಹುತಿ ಹೋಮಗಳು. ಎರಡನೆಯ ದಿನ ದುರ್ನಿಮಿತ್ತಕಾರಣವಾದ ಮುಖ್ಯ ಗ್ರಹದ ಪ್ರಧಾನದೇವತೆಗೆ ಎರಡುಸಾವಿರ, ಮಿಕ್ಕ ಗ್ರಹಗಳ ಪ್ರಧಾನದೇವತೆಗಳಿಗೆ ಒಂದೊಂದಕ್ಕೆ ಮುನ್ನೂರರಂತೆ ಎರಡುಸಾವಿರದ ನಾನೂರು. ಅವುಗಳ ಉಪಗ್ರಹ ಗಳಿಗೆ ಎಂದರೆ ಅಧಿಪ್ರತ್ಯಧಿದೇವತೆಗಳಿಗೆ ಪ್ರತಿಯೊಂದಕ್ಕೂ ನೂರರಂತೆ ಹದಿನಾರಕ್ಕೂ ಸಾವಿರದಾರನೂರು. (ಅಥವಾ ಕಡೆಯ ಎರಡು ಛಾಯಾಗ್ರಹಗಳಿಗೆ ಒಂದಕ್ಕೆ ಎಂಬತ್ತೊಂದು ಮತ್ತೊಂದಕ್ಕೆ ಎಂಬತ್ತರಂತೆ ಕೊಡಬೇಕೆಂಬುದು ಕೆಲವರ ಮತ.) ಹೀಗೆ ಎರಡನೆಯ ದಿನದಲ್ಲಿ ಒಟ್ಟು ಆರುಸಾವಿರ ಆಹುತಿ ಹೋಮಗಳಾಗುವುವು. ಮೂರನೆಯ ದಿನ ದುರ್ನಿಮಿತ್ತ ಕಾರಣವಾದ ಮುಖ್ಯ ಗ್ರಹದ ಪ್ರಧಾನದೇವತೆಗೆ

**ತತ್ಪ್ರತ್ಯೇಕಂ ಗ್ರಹಾಣಾಂ ಚ ದ್ವಾಚತ್ವಾರಿಂಶದುಚ್ಯತೇ ।**
**ಅಧಿಪ್ರತ್ಯಧಿದೇವಾನಾಂ ಪ್ರತ್ಯೇಕಂ ಪಂಚತ್ರಿಂಶಕಂ ॥ ೧೭೫ ॥**

**ತೃತೀಯದಿವಸೇ ದದ್ಯಾನ್ನಿಲಿತ್ವೈಕೆ ಸಹಸ್ರಕಂ ।**
**ಆದಿತ್ಯಾಯ ಯುಗಂ ದದ್ಯಾದೇಕಂ ತು ತ್ರ್ಯಂಬಕಾಯ ಚ ॥ ೧೭೬ ॥**

**ಧನಂಜಯಾಯ ಹೋಮ್ಯೈಕಮೇಕಂ ಚಾಯುತಮುಚ್ಯತೇ ।**
**ತದರ್ಧಕಂ ಗ್ರಹೇಭ್ಯಶ್ಚ ಇತರೇಭ್ಯಸ್ತದರ್ಧಕಂ ॥ ೧೭೭ ॥**

**ಗ್ರಹಾಣಾಂ ತ್ರಿಸಹಸ್ರಂ ತು ಪಂಚಾನಾಂ ಚ ಸಹಸ್ರಕಂ ।**
**ತ್ರಿಸಹಸ್ರಂ ಭಾಗಶೇಷಮಾದಿತ್ಯಾಯ ಸಹಸ್ರಕಂ ॥ ೧೭೮ ॥**

---

ಮುನ್ನೂರು, ಎಲ್ಲಾ ಗ್ರಹಗಳ ಪ್ರಧಾನದೇವತೆಗಳಿಗೂ ನಲವತ್ತೆರಡರಂತೆ ಮುನ್ನೂರೆಪ್ಪತ್ತೆಂಟು ಎಲ್ಲ ಗ್ರಹಗಳ ಅಧಿದೇವತೆ ಪ್ರತ್ಯಧಿದೇವತೆಗಳಿಗೆ ಬೇರೆಬೇರೆಯಾಗಿ ಮೂವತ್ತೈದು. ಹೀಗೆ ಮೂರನೆಯ ದಿನದಲ್ಲಿ ಒಟ್ಟು ಒಂದು ಸಾವಿರ ಆಹುತಿ ಹೋಮಗಳು ಆಗುವುವು.

೧೭೬-೧೭೭. ಸೂರ್ಯನಿಗೆ ಎರಡಾದರೆ, ತ್ರ್ಯಂಬಕನಿಗೆ ಒಂದು, ಅಗ್ನಿಗೆ ಒಂದು, ಇದೇ ಪ್ರಮಾಣ. ಹೀಗೆ ಒಟ್ಟನಲ್ಲಿ ಮೂರು ದಿನಗಳಲ್ಲಿ ಹತ್ತುಸಾವಿರ ಹೋಮಗಳನ್ನು ಮಾಡಬೇಕೆಂದು ಹೇಳಿದೆ. ಗ್ರಹಗಳಿಗೆ ಅದರ ಅರ್ಧ ಐದುಸಾವಿರ, ಇತರ ದೇವತೆಗಳಿಗೆ ಇದರ ಅರ್ಧ ಎಂದರೆ ಎರಡುಸಾವಿರದ ಐನೂರು ಹೋಮಗಳು ಆಗಬೇಕು.

೧೭೮ ಗ್ರಹಗಳಿಗೆ ಮೂರುಸಾವಿರ, ಐದು ಗ್ರಹಗಳಿಗೆ ಒಂದುಸಾವಿರ, ಮಿಕ್ಕ ಗ್ರಹಗಳಿಗೆ ಮೂರುಸಾವಿರ, ಸೂರ್ಯನಿಗೆ ಒಂದುಸಾವಿರ, ತ್ರ್ಯಂಬಕನಿಗೆ ಒಂದುಸಾವಿರ, ಅಗ್ನಿಗೆ ಒಂದುಸಾವಿರ ಈರೀತಿಯಲ್ಲಿ ಒಟ್ಟು ಹತ್ತುಸಾವಿರ ಆಹುತಿ ಹೋಮವು ಒಟ್ಟೆನಲ್ಲಿ ಪ್ರಮಾಣಕ್ಕನುಸಾರವಾಗಿರಬೇಕು.

ತ್ರ್ಯಂಬಕಾಯ ತಥಾ ದದ್ಯಾತ್ತಥಾ ಧನಂಜಯಾಯ ಚ ।
ಷಟ್ಪಾದಾಧಿಕ ಷಟ್ ಷಟ್ಕಸಹಸ್ರಪರಿಸಂಖ್ಯಯಾ ॥
ನವಶ್ಲೋಕಶತೋದ್ಭೂತಂ ಸಂಪೂರ್ಣಂ ಸ್ಯಾದ್ಭವಿಷ್ಯಕಂ ॥ ೧೭೯ ॥

ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವಣಿ ತೃತೀಯಭಾಗೇ ವಿಂಶೋಽಧ್ಯಾಯಃ.

ಇತಿ ತೃತೀಯಭಾಗಃ ಸಮಾಪ್ತಃ

## ಇತಿ ಶ್ರೀ ಭವಿಷ್ಯೇಮಹಾಪುರಾಣೇ ಮಧ್ಯಮಪರ್ವ ಸಮಾಪ್ತಂ



---

೧೭೯. ಇಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದಲ್ಲಿ ಸಾವಿರದೊಂಭೈನೂರಅರವತ್ತಾರು ಪದ್ಯಗಳು ಮುಗಿದಿವೆ.

ಎಂಬಲ್ಲಿಗೆ ಶ್ರೀ ಭವಿಷ್ಯಮಹಾಪುರಾಣದ ಮಧ್ಯಮಪರ್ವದ ಮೂರನೆಯ ಭಾಗದಲ್ಲಿ ಇಪ್ಪತ್ತನೆಯ ಅಧ್ಯಾಯವು ಮುಗಿಯಿತು.

ತೃತೀಯ ಭಾಗವು ಸಮಾಪ್ತವಾಯಿತು.

## ಮಧ್ಯಮಪರ್ವವು ಸಮಾಪ್ತವಾಯಿತ.

—: ಓಂ ತತ್ಸತ್ :—



---

Printed by G. BASAPPA, proprietor,
SRI BASAVESWARA ELECTRIC PRESS,
Devaraja Market Buildings, MYSORE.